ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೨೫

# ಅಶೋಕ

ನಾ. ಕಸ್ತೂರಿ, ಎಂ.ಎ., ಬಿ.ಎಲ್.




ಮೈಸೂರು:
ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟಿಸಲ್ಪಟ್ಟಿದೆ
೧೯೫೨

ಬೆಲೆ, ರೂ. ೧-೨-೦

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೨೫

---

ಪ್ರಧಾನ ಸಂಪಾದಕ

ಕೆ. ವಿ. ಪುಟ್ಟಪ್ಪ, ಎಂ.ಎ.

# ಅಶೋಕ

ನಾ. ಕಸ್ತೂರಿ, ಎಂ.ಎ., ಬಿ.ಎಲ್.




ವೆಸ್ಲಿ ಪ್ರೆಸ್ ಅಂಡ್ ಪಬ್ಲಿಷಿಂಗ್ ಹೌಸ್

ಮೈಸೂರು

೧೯೫೨

# ಮುನ್ನುಡಿ

ಪ್ರಪಂಚದ ಹಿರಿಯ ಕಿರಿಯ ರಾಷ್ಟ್ರಗಳ ಇತಿಹಾಸದ ಪುಟಗಳನ್ನು ತಿರುವಿಹಾಕಿದರೆ ಪ್ರತಿಯೊಂದು ಪುಟವೂ ರಕ್ತಪ್ಲಾವಿತವಾಗಿರುವುದನ್ನು ಕಾಣುತ್ತೇವೆ. ಸೇಡು ಮರುಸೇಡು, ಸ್ಪರ್ಧೆ ಪ್ರತಿಸ್ಪರ್ಧೆ, ಧಾಳಿ ಪ್ರತಿಧಾಳಿ ಇವು ಮುಖ್ಯವಾಗಿ ಆ ಇತಿಹಾಸ ಚಿತ್ರಿಸುವ ವಿಷಯಗಳಾಗಿವೆ. ಕಿರಿಯ ರಾಷ್ಟ್ರಗಳ ಸಮಾಧಿಯ ಮೇಲೆ ಹಿರಿಯ ರಾಷ್ಟ್ರಗಳ ಶ್ರೀಮಂತತೆ ಅಟ್ಟಹಾಸದಿಂದ ಮೆರೆಯುತ್ತ ಬಂದಿದೆ. ಮತ್ತೊಬ್ಬನ ಕೇಡಿನಿಂದ ಬಾಳಬೇಕೆನ್ನುವ ಮನೋಭಾವನೆ ಹೊಲ್ಲದೆಂದು ಮಾನವ ಮತ್ತೆ ಮತ್ತೆ ಆಲೋಚಿಸಿ ಬೋಧಿಸುತ್ತಿದ್ದರೂ ಬದುಕು ಸ್ಪರ್ಧೆ ಮತ್ತು ಹಿಂಸಾಪ್ರತಿಕ್ರಿಯೆಗಳಿಂದ ಪಾರಾಗಲು ಸಾಧ್ಯವೊ ಇಲ್ಲವೊ ಎಂಬಂತೆ ಕಾಣುತ್ತಿದೆ.

ಹೀಗೆ ಕೆಲವು ರಾಷ್ಟ್ರಗಳ ಬಾಹ್ಯಜೀವನ ದುಶ್ಯಕ್ತಿಗಳ ಜಟಿಲವ್ಯಾಪಾರಗಳಿಂದ ಕಲುಷಿತಗೊಂಡು ಪ್ರಕ್ಷುಬ್ಧ ವಾತಾವರಣ ಕಂಡುಬಂದರೂ, ಆ ಪ್ರಕ್ಷುಬ್ಧತೆಯ ಹಿಂದುಗಡೆ ಅವ್ಯಾಹತವೂ ಸದಾ ಶ್ರೇಯಸ್ಕರವೂ ಅವಿಚ್ಛಿನ್ನವೂ ಆದ ಅಂತರಂಗಜೀವನದ ವಿಕಾಶ ಕಂಡುಬರುತ್ತದೆ. ಅಂತಹ ವಿಕಾಶಜೀವನಕ್ಕೆ ಪಾತ್ರಗಳಾಗಿ ಪೋಷಕಶಕ್ತಿಗಳಾಗಿ ಬುದ್ಧ, ಕ್ರೈಸ್ತ, ಮಹಮ್ಮದ, ಶ್ರೀರಾಮಕೃಷ್ಣ ಪರಮಹಂಸ, ಶ್ರೀ ರಮಣಮಹರ್ಷಿ, ಶ್ರೀ ಅರವಿಂದರೆ ಮೊದಲಾದ ಅವತಾರಪುರುಷರು, ಪ್ರವಾದಿಗಳು, ಆಚಾರ್ಯರು, ಮಹಾತ್ಮರು ಆಗಾಗ್ಗೆ ಜನ್ಮವೆತ್ತುತ್ತಿರುವುದು ಜಗತ್ತಿನ ಸುದೈವ. ಅವರ ಸಾಧನಾತಪಸ್ಸಿದ್ಧಿಗಳ ಮಹಿಮೆಯಿಂದ ಮಾನವನ ಕುಬ್ಜತೆ ಕ್ಷೀಣತರವಾಗಿ ಧರ್ಮಕ್ಕೆ ಕೊನೆಯ ಜಯ ಲಭಿಸುವುದರಲ್ಲಿ ಸಂದೇಹವಿಲ್ಲ.

ಮೇಲೆ ಹೆಸರಿಸಿದ ಧಾರ್ಮಿಕ ಮತ್ತು ಆಧ್ಯಾತ್ಮಿಕ ವ್ಯಕ್ತಿಗಳು ಇದನ್ನು ಬೋಧಿಸಿ ಸಾಧಿಸಿದುದರಲ್ಲಿ ಕಂಡುಬರುವ ಅತಿಶಯತೆಗಿಂತ ಹೆಚ್ಚಾಗಿ ಯಾವ ವ್ಯವಹಾರದಲ್ಲಿ ರಣರಂಗವೇ ಅನಿವಾರ್ಯವಾದ ಮೂಲಪೀಠವೆಂದು ಪರಿಗಣಿತವಾಗಿದೆಯೋ ಅಂತಹ ರಾಜಕೀಯದಲ್ಲಿ ಕೂಡ ಈ ಧರ್ಮಶಕ್ತಿಯ ಆರಾಧ

ಕರೂ ಸಾಧಕರೂ ಆಗಿಹೋಗಿರುವುದು ಜಗಜ್ಜೀವನದ ಭವಿಷ್ಯತ್ ಕ್ಷೇಮ ಕ್ಕೊಂದು ಧೈರ್ಯಸಾಕ್ಷಿಯಾಗಿದೆ. ಭಾರತೀಯವಾದ ಜೀವನದರ್ಶನದಲ್ಲಿ ರಾಜಕೀಯ ಧಾರ್ಮಿಕ ಆಧ್ಯಾತ್ಮಿಕ ಇತ್ಯಾದಿಗಳು ಪರಮಪುರುಷಾರ್ಥ ಸಾಧನೆಗೆ ಪರಸ್ಪರ ಪೋಷಕಗಳಾದ ಸೋಪಾನಗಳೆಂದು ಭಾವಿತವಾಗಿವೆಯೆ ಹೊರತು ಒಂದಕ್ಕೊಂದು ಅನ್ಯ, ಒಂದಕ್ಕೊಂದು ಪ್ರತಿಸ್ಪರ್ಧಿ ಎಂದಲ್ಲ. ಧರ್ಮದ ಏಳ್ಗೆಗಾಗಿ ಎಂದರೆ ನಿಃಶ್ರೇಯಸಕ್ಕಾಗಿ ರಾಜಕೀಯ ಅಥವಾ ಸಾಮಾಜಿಕ ಜೀವನ ಇವೆಯೆ ಹೊರತು ಬರಿಯ ರಾಜಕೀಯ ಸಾಮಾಜಿ ಕಾದಿ ಲೌಕಿಕಾಭ್ಯುದಯಕ್ಕೆ ಮಾತ್ರವಲ್ಲ.

ಕ್ರಿಸ್ತನ ಉದಯಕ್ಕೆ ಶತಮಾನಗಳ ಪೂರ್ವದಲ್ಲಿದ್ದ ಅಶೋಕ ಚಕ್ರವರ್ತಿಯ ಹೆಸರು ಇತಿಹಾಸದ ಬಾಂದಳದಲ್ಲಿ ಪ್ರಜ್ವಲಿಸುವ ಗುರುತಾರೆಯಾಗಿದೆ. ಅವನು ಚಾರಿತ್ರಿಕ ವ್ಯಕ್ತಿ. ಅವನಲ್ಲಿ ಜನಬಲ ಧನಬಲ ಸೈನ್ಯಬಲ ಸಮೃದ್ಧ ವಾಗಿದ್ದುವು. ಯುದ್ಧದಲ್ಲಿ ಅವನನ್ನು ಹಿಮ್ಮೆಟ್ಟಿಸಬಲ್ಲ ಸಂಗ್ರಾಮ ಶೂರ ಆಗ ಮತ್ತೊಬ್ಬನಿರಲಿಲ್ಲ. ಆದರೂ ಕಳಿಂಗದೇಶದ ಮೇಲೆ ನಡಸಿದ ಯುದ್ಧವೆ ಕೊನೆಯದಾಯಿತು. ಅಲ್ಲಿ ಅವನು ಪಾಶವೀಶಕ್ತಿಯಿಂದ ಜಯ ವನ್ನು ಗಳಿಸಿದರೂ ಧರ್ಮಶಕ್ತಿಗೆ ಸಂಪೂರ್ಣವಾಗಿ ಶರಣಾಗತನಾದನು. ಇಂದು ರಣಮಾರಿಯ ನೃತ್ಯಮಂದಿರವಾಗಿರುವ ಜಗತ್ತಿನ ಭವಿಷ್ಯತ್ ಕಲ್ಯಾಣಕ್ಕೆ ಅಶೋಕಚಕ್ರವರ್ತಿಯ ಆದರ್ಶ, ಅವನು ಬೋಧಿಸಿದ ಪ್ರೇಮ ಮತ್ತು ಅಹಿಂಸಾತತ್ತ್ವಗಳು ಅನಿವಾರ್ಯವೆಂದು ಈ ಯುಗದ ಪ್ರಸಿದ್ಧ ಲೇಖಕನಾದ ಎಚ್. ಜಿ. ವೆಲ್ಸ್ ಸಾರಿದ ಮೇಲಂತೂ ಆ ದೇವಾನಾಂಪ್ರಿಯನ ಹೆಸರು ಲೋಕವ್ಯಾಪಿಯಾಗಿದೆ. ಅಪ್ರತಿಹತವೂ ದುರ್ದಮ್ಯವೂ ಆಗಿರುವ ಆಸುರೀ ಶಕ್ತಿಗಳ ಎದುರಿನಲ್ಲಿ ಅಶೋಕಚಕ್ರವರ್ತಿ ಯಾವ ಧರ್ಮಶ್ರದ್ಧೆಯ ಧೈರ್ಯವನ್ನು ಲೋಕ ಬೆರಗಾಗುವಂತೆ ಪ್ರದರ್ಶಿಸಿದನೋ ಆ ಶ್ರದ್ಧಾ ಧೈರ್ಯದ ಪುನರುತ್ಥಾನರೂಪರಾದ ಪೂಜ್ಯ ಮಹಾತ್ಮಾ ಗಾಂಧೀಯವರ ದೈವೀಪ್ರಯತ್ನದಿಂದ ನಾಡಿಗೆ ರಾಜಕೀಯ ಸ್ವಾತಂತ್ರ್ಯ ಲಭಿಸಿದೆ. ಆ ಎಲ್ಲದರ ಮಹತ್ಸಂಕೇತವಾಗಿ ಸ್ವತಂತ್ರ ಭಾರತವು ಅಶೋಕಚಕ್ರವನ್ನೆ ತನ್ನ ಧ್ವಜಚಿಹ್ನೆಯನ್ನಾಗಿ ಆರಿಸಿ ತನ್ನ ಗೌರವಕೃತಜ್ಞತೆಗಳನ್ನು ಸಲ್ಲಿಸಿರುವುದು

ಮಾತ್ರವಲ್ಲದೆ, ತನ್ನ ಮುಂದಿನ ಜೀವನಕ್ರಮದ ಪ್ರಮಾಣವಚನವನ್ನೂ ಸ್ವೀಕರಿಸಿದಂತಾಗಿದೆ.

ನಮ್ಮ ಬೃಹದ್ರಾಷ್ಟ್ರದ ಮಹಾಧ್ವಜಕ್ಕೆ ಈ ದಿವ್ಯಚಿಹ್ನೆಯನ್ನು ಅನುಗ್ರಹಿಸಿದ ಆ ಮಹಾಪುರುಷನ ಜೀವನಯಾತ್ರೆಯ ಕುತೂಹಲಪೂರ್ಣವಾದ ಸತ್ಕಥೆಯನ್ನು ಈ 'ಅಶೋಕ'ಗ್ರಂಥದಲ್ಲಿ ಶ್ರೀ ನಾ. ಕಸ್ತೂರಿಯವರು ಸಮರ್ಥವಾಗಿ ಚಿತ್ರಿಸಿದ್ದಾರೆ. ಕನ್ನಡ ಜನತೆ ಅದನ್ನು ಸವಿದು ತುಷ್ಟಿಪುಷ್ಟಿಗಳೆರಡನ್ನೂ ಪಡೆದುಕೊಳ್ಳುವ ಜೀವನದೃಷ್ಟಿಯನ್ನು ಕಂಡುಕೊಳ್ಳಲಿ. ಆ ದೇವಾನಾಂಪ್ರಿಯನ ಶ್ರೀ ಹಸ್ತದ ಆಶೀರ್ವಾದ ಲೋಕಕ್ಕೊದಗಲಿ!

ಸಿರಿಗನ್ನಡಂ ಗೆಲ್ಗೆ!

ಕೆ. ವಿ. ಪುಟ್ಟಪ್ಪ
ಪ್ರಧಾನ ಸಂಪಾದಕ

# ವಿಷಯ ಸೂಚಿಕೆ



## ಅನುಬಂಧ

# ಪೀಠಿಕೆ

"ಇತಿಹಾಸದ ಬಾಂದಳದಲ್ಲಿ ಎಂದೋ ಮಿನುಗಿ ಅಂದೇ ಮಾಯವಾಗಿರುವ ಸಾವಿರಾರು ರಾಜರ, ಮಹಾರಾಜಾಧಿರಾಜ ರಾಜಪರಮೇಶ್ವರರ, ಭುವನೈಕಚಕ್ರವರ್ತಿಗಳ ನಡುವೆ ಪ್ರಜ್ವಲಿಸಿ, ಇಂದಿಗೂ ತೊಳಗುತ್ತಿರುವ ಅಕ್ಷಯತಾರೆ ಎಂದರೆ, ಅಶೋಕ! ವಾಲ್ಗಾ ನದೀತೀರದಿಂದ ಶಾಂತ ಸಾಗರದ ತೀರದ ವರೆಗೂ ಇವತ್ತಿಗೂ ಅವನನ್ನು ಜನರು ಪೂಜ್ಯಭಾವನೆಯಿಂದ ನೆನೆಯುತ್ತಿರುವರು. ಚೀಣಾ ಸಾಮ್ರಾಜ್ಯದಲ್ಲೂ, ಟಿಬೆಟ್‌ನಲ್ಲೂ, ಅವನಿಗೆ ಅತಿ ಪ್ರಿಯವಾಗಿದ್ದ ಧರ್ಮವನ್ನು ಮೂಲೆಗೊತ್ತಿರುವ ಹಿಂದೂಸ್ತಾನದಲ್ಲೂ ಸಹ, ಅಶೋಕನ ಕಲಿತನ ಹಿರಿತನಗಳು ಜನಮನದಲ್ಲಿ ನಾಟಿ ನಿಂತಿವೆ. ಪಾಶ್ಚಾತ್ಯರನ್ನು ಅಚ್ಚರಿಗೊಳಿಸಿದ ಕಾನ್‌ಸ್ಟಂಟೈನ್, ಚಾರ್ಲಿಮೇನ್ ಮುಂತಾದ ಚಕ್ರಾಧೀಶ್ವರರ ಹೆಸರುಗಳನ್ನು ಕೇಳಿರುವವರ ಸಂಖ್ಯೆಗಿಂತ ನೂರರಷ್ಟು ಜನ ಅಶೋಕನ ಹೆಸರನ್ನು ಆದರದಿಂದ ಸ್ಮರಿಸುತ್ತಿರುವರು." ಹೀಗೆಂದು, ಸುಪ್ರಸಿದ್ಧ ಆಂಗ್ಲ ಗ್ರಂಥಕರ್ತರಾದ ಎಚ್. ಜಿ. ವೆಲ್ಸ್ ಎಂಬವರು ಬರೆದಿದಾರೆ.

೧೯೧೪ ರಿಂದ ೧೯೧೮ ರ ವರೆಗೆ ನಡೆದ ಮೊದಲನೆಯ ಮಹಾ ಯುದ್ಧಕ್ಕಾಗಿ ಮನನೊಂದು ಮಾನವಕುಟುಂಬದಲ್ಲಿ ಇನ್ನುಮುಂದೆ ಈ ತೆರನ ಸೋದರವಧೆಯಾಗಬಾರದೆಂದು ನಿಶ್ಚಯಿಸಿ, ಯುದ್ಧನಿರೋಧಕ್ಕೆ ಸಾಧಕಗಳಾದ ಪ್ರೇಮವನ್ನೂ ಶಾಂತಿಯನ್ನೂ ಬೆಳಸಿ ನೆಲೆಗೊಳಿಸಲು ದುಡಿದ ಮುಂದಾಳುಗಳಲ್ಲಿ ವೆಲ್ಸರೂ ಒಬ್ಬರು. ಸಂಕುಚಿತವಾದ ಸ್ವಾರ್ಥಪರವಾದ ದೇಶಾಭಿಮಾನವೇ ಯುದ್ಧದ ಮೂಲಕಾರಣವೆಂದು ಇವರೆಲ್ಲರೂ ಮನಗಂಡರು. ಅದರ ಬದಲಾಗಿ ಪ್ರಪಂಚದ ಜನಾಂಗಗಳೆಲ್ಲವನ್ನೂ ಒಟ್ಟಾಗಿ ಒಂದು ಕುಟುಂಬದಂತೆ ಭಾವಿಸಿ ಪ್ರೀತಿಸುವ ಸ್ವಭಾವವನ್ನು ಮುಖ್ಯವಾಗಿ ಪಾಶ್ಚಾತ್ಯ ದೇಶಗಳಲ್ಲೂ, ಅವುಗಳನ್ನನುಕರಿಸಿ ಅದೇರೀತಿಯ ದುರಭಿಮಾನವನ್ನು ತುಂಬಿಕೊಳ್ಳುತ್ತಿದ್ದ ಪೂರ್ವದೇಶಗಳಲ್ಲೂ ನೆಡುವುದಕ್ಕಾಗಿ, ವೆಲ್ಸರವರು, "ಪ್ರಪಂಚ ಚರಿತ್ರೆಯ ರೇಖಾಚಿತ್ರ" ಎಂಬ ಒಂದು ಉದ್ಗ್ರಂಥವನ್ನು ಬರೆದರು. ಗ್ರಂಥದ ಉದ್ದೇಶ, ಗ್ರಂಥಕರ್ತನ ದೃಷ್ಟಿ, ಎರಡೂ ಹೊಸದಾಗಿದ್ದುದರಿಂದ, ಅದರಲ್ಲಿ ಅದುವರೆಗೂ ವಿದ್ಯಾವಂತರಿಗೆಲ್ಲ ಚಿರಪರಿಚಿತರಾಗಿದ್ದ ಹಲವಾರು ವೀರರನ್ನು ವೆಲ್ಸರು ಒತ್ತಟ್ಟಿಗಿರಿಸಿದ್ದರು. ಕ್ರಿಸ್ತಪೂರ್ವ ೩೦೦ ರ ಹತ್ತಿರದ ಕಾಲದಲ್ಲಿ,

ಹಿಂದೂಸ್ತಾನದಲ್ಲಿ, ರಾಜ್ಯವಾಳಿದ ಅಶೋಕ ಎಂಬ ಹೆಸರಿನ ಒಬ್ಬ ವ್ಯಕ್ತಿಯನ್ನು ಬಾಯಿತುಂಬ ಹೊಗಳಿ ಕೊಂಡಾಡಿದ್ದಕ್ಕಾಗಿ ಅನೇಕರು ವೆಲ್ಸರ ಮೇಲೆ ಆಕ್ರೋಶಗೊಂಡರು. ಅನೇಕರು ಅವರನ್ನು ಪರಿಹಾಸಮಾಡಿದರು. ಇಂಗ್ಲಿಷರ ಉತ್ತಮ ಹಾಸ್ಯ ಪತ್ರಿಕೆಯಾದ 'ಪಂಚ್'ನಲ್ಲಿ ಅವರ ಸಂಶೋಧನಾ ಸಾಮರ್ಥ್ಯವನ್ನು ಹೀಯಾಳಿಸುವ ಒಂದು ಅಣಕವಾಡನ್ನು ಪ್ರಕಟ ಮಾಡಿದರು.

ಓದುಗರೆಲ್ಲರೂ ಎಚ್ಚತ್ತು ಅಚ್ಚರಿಗೊಳ್ಳುವಂತಹ ಈ ಅಭಿಪ್ರಾಯಕ್ಕೆ ವೆಲ್ಸರವರು ಹಲವು ಆಧಾರಗಳನ್ನು ಸೂಚಿಸಿದರು. ಧರ್ಮಾಭಿಮಾನ ದೇಶಾಭಿಮಾನ ವರ್ಣಾಭಿಮಾನ ಇವುಗಳಿಂದ ಕದಡದ ಅಂತಃಕರಣದಿಂದ ಕೇವಲ ಮಾನವಕುಲದ ಮುನ್ನಡೆಯನ್ನು ಮಾತ್ರ ಗಮನಿಸಿದರೆ, ಅಶೋಕನ ದೊಡ್ಡತನ ಮನದಟ್ಟಾಗುವುದು. ಯುದ್ಧವೆಂಬ ದುರಭ್ಯಾಸ ಮಾನವ ಜನಾಂಗದ ಬೆನ್ನಲ್ಲಿ ಬಂದದ್ದು. ನವನಾಗರಿಕರಾದ ನಾವೂ ಗತ್ಯಂತರವೊಂದನ್ನು ಕಂಡುಹಿಡಿದು ಸಾಧಿಸಿಲ್ಲ. ಹೆತ್ತ ಮಕ್ಕಳ ನೆತ್ತರಲ್ಲೇ ಭೂಮಿತಾಯಿ ನೂರಾರು ಸಲ ಮಿಂದಿದ್ದಾಳೆ; ಮೀಯುತ್ತಿದಾಳೆ. ಸಮರ ಕೋಲಾಹಲದ ನಡುವೆ ಆಕೆಯ ಬಿಸುಸುಯ್ಲು ನಮ್ಮ ಕಿವಿಯನ್ನು ತಾಕುವುದೇ ಅಪರೂಪ. ಕೇಳಿಸಿದರೂ ಅನೇಕರಿಗೆ ಕರ್ಕಶವೆನಿಸುತ್ತದೆ. ಅದನ್ನು ಲಾಲಿಸಿ, ಅದಕ್ಕೆ ಮನಕರಗಿ, ಶಸ್ತ್ರಸಂನ್ಯಾಸಮಾಡಿ, ಪ್ರೇಮವನ್ನು ಸಾಧಿಸಲು ಹೊರಡುವವರು ಬಹು ಕಡಮೆ. ಹೀಗಿರುವಲ್ಲಿ, ತಾನು ಜಯಹೊಂದಿದ್ದರೂ ಯುದ್ಧದಿಂದ ಗೆದ್ದವರಿಗೂ ಸೋತವರಿಗೂ ಆಗುವ ಸಾವುಸೋವುಗಳು ಕಷ್ಟನಷ್ಟಗಳು ಇಂಥವೆಂದು ತಿಳಿದು, ಅಶೋಕನು ತೀವ್ರ ವೈರಾಗ್ಯತಾಳಿ, ಮುಂದೆ ಅಂತಹ ರಾಕ್ಷಸಕೃತ್ಯದಲ್ಲಿ ತೊಡಗುವುದಿಲ್ಲವೆಂಬ ವೀರಸಂಕಲ್ಪ ಮಾಡಿದನು. ಅರವತ್ತು ಶತಮಾನಗಳ ತನಕ ಹಬ್ಬಿರುವ ಮಾನವಚರಿತ್ರೆಯಲ್ಲಿ ಇಂತಹ ಧೀರಾತ್ಮನು ಅಶೋಕನೊಬ್ಬನೇ!

ಮೊದಲನೆಯ ಜಗತ್ಸಮರ ಮುಗಿಯುತ್ತಾ ಬಂದಾಗ ಅಲ್ಲಲ್ಲಿ ಒಂದು ರೀತಿಯ ರಣರಂಗ ವೈರಾಗ್ಯ ತಲೆದೋರಿತು. ಆದರೆ, ಜನಸಾಮಾನ್ಯರಲ್ಲಿ ಧರ್ಮದೃಷ್ಟಿ, ಮಾನವನ ಪವಿತ್ರತೆ, ಆತ್ಮವಿಕಾಸ, ವಿಶ್ವಪ್ರೇಮ ಮುಂತಾದ ವಿಶಾಲಗುಣಗಳು ಮೊಳೆತು ಕುಡಿಬಿಡಲಿಲ್ಲ. ಕ್ರೋಧ ಲೋಭಗಳೇ ಬೆಂಗಾಡಿನಂತೆ ಬೆಳೆದು ಹಬ್ಬಿದುವು. ಆದ್ದರಿಂದ ಮತ್ತೊಮ್ಮೆ ಕಾಳ್ಕಿಚ್ಚೆದ್ದು ಮಾನವ ಕುಲ ಮಾರಿಗೌತಣವಾಯಿತು. ಅಶೋಕನ ಜೀವನವನ್ನು ಓದಿ, ಅವನ ಅಂತರಂಗದಲ್ಲಿ ಮಿಡಿದ ಮಹದಾಶಯಗಳನ್ನು ಕಾರ್ಯರಂಗಕ್ಕೆ ತಂದು ಬದುಕಲು

ಸನ್ನಿವೇಶವು ಮತ್ತೊಮ್ಮೆ ಮೂಡಿದೆ. ದಿಗ್ವಿಜಯಕ್ಕಿಂತ ಶ್ರೇಷ್ಠವಾದ ಧರ್ಮವಿಜಯದಲ್ಲಿ ಅಶೋಕನು ತೊಡಗಿದನು. ಮತ್ತೆ ಶಸ್ತ್ರವನ್ನು ತೊಡುವು ದಿಲ್ಲ ಎಂಬ ಪ್ರತಿಜ್ಞೆಯನ್ನು ಮಾಡಿ, ಅದನ್ನು ಸಾಮ್ರಾಜ್ಯದ ಮೂಲೆ ಮೂಲೆಗೂ ಸಾರಿದನು. ಅವನ ಪ್ರಜಾಸಮೂಹವೂ ಅವನ ಎತ್ತರಕ್ಕೆ ಬೆಳೆದು ನಿಂತಿತು; ಸುಮಾರು ಇಪ್ಪತ್ತೆಂಟು ವರ್ಷಗಳ ಕಾಲ ಅವನ ಧರ್ಮ ದೀಕ್ಷೆಯ ನೆರಳಿನಲ್ಲಿ ಸಾಮ್ರಾಜ್ಯವು ನಲಿದಾಡಿತು. ಇದು ಇತಿಹಾಸದಲ್ಲಿ ಎಲ್ಲೂ ನಡೆಯದ ಸೋಜಿಗ! ಇದಕ್ಕೆ ಕಾರಣವೇನೆಂದರೆ: ಅಶೋಕನೇ 'ಪುರಾತನ'ವೆಂದು ಕೊಂಡಾಡಿರುವ ಭಾರತೀಯಧರ್ಮ; ಜನಜೀವನದಲ್ಲಿ ಆ ಧರ್ಮದ ಮೂಲತತ್ವಗಳು ಹಾಸುಹೊಕ್ಕಾಗಿ ಬೆರೆತು ಅದನ್ನು ತಿದ್ದಿ ನಯಮಾಡಿದ ರೀತಿ.

ಬ್ರಿಟಿಷರ ಪ್ರಭುತ್ವ ಸ್ಥಾಪನೆಯಾಗುವ ಮೊದಲು ಹಿಂದೂಸ್ತಾನದ ಬಹುಭಾಗವನ್ನಾಳಿದವರು ಮೌರ್ಯರು, ಮೊಗಲಾಯರು ಮತ್ತು ಮರಾಠರು. ಆದರೆ, ಅಶೋಕ ಮೌರ್ಯನ ಆಳಿಕೆಯಲ್ಲಿ ಮೊಗಲಾಯರ ಅಥವಾ ಮರಾಠರ ಸಾಮ್ರಾಜ್ಯಕ್ಕಿಂತ ಹೆಚ್ಚು ಭಾಗ ಸೇರಿತ್ತೆಂಬುದು ನಿರ್ವಿವಾದವಾದ ಸಂಗತಿ. ತನ್ನ ಪ್ರಜಾಕೋಟಿಯಲ್ಲಿನ ವಿವಿಧ ಜನಾಂಗಗಳೂ ವಿವಿಧ ಧರ್ಮಾವಲಂಬಿ ಗಳೂ ಅನೇಕ ಅಂತಸ್ತಿನ ನಾಗರಿಕರೂ ತಮ್ಮ ತಮ್ಮ ಬದುಕನ್ನು ಬೆಳಗಿಸಿ ಕೊಂಡು ಇಹಪರಗಳೆರಡನ್ನೂ ಸಾಧಿಸುವಂತೆ ಒಳ್ಳೆಯ ಆದರ್ಶಗಳನ್ನೇ ಅವರ ಕಣ್ಮನಗಳ ಮುಂದಿಟ್ಟು, ತಾನೇ ಉದಾಹರಣೆಯಾಗಿ ಅವರೆದುರು ನಿಂತು, ಕೃತಕೃತ್ಯನಾದ ಸಂತೃಪ್ತಿ ಅಶೋಕನಿಗಲ್ಲದೆ ಭಾರತೀಯ ರಾಜರಲ್ಲಿ ಮತ್ತೆ ಯಾರಿಗೂ ಲಭಿಸಿಲ್ಲ. "ನಾನು ಏನೇನು ಸಾಧುವಾದದ್ದನ್ನು ಮಾಡಿರುವೆನೋ ಅದನ್ನು ಲೋಕ ಅನುಸರಿಸಿದೆ; ಮತ್ತು ಅನುಸರಿಸುತ್ತಿದೆ. ಅಂದರೆ, ಮಾತಾಪಿತೃಗಳ ಶುಶ್ರೂಷೆ, ಗುರು ಶುಶ್ರೂಷೆ, ಹಿರಿಯರಲ್ಲಿ ಗೌರವ, ಬ್ರಾಹ್ಮಣಶ್ರಮಣರು ಬಡವರು ನೊಂದವರು ಇವರಲ್ಲಿ, ದಾಸರು ಭೃತ್ಯರು ಇವರಲ್ಲಿ ಸಂಪ್ರತಿಪತ್ತಿ, ಇವು ಅಭಿವೃದ್ಧಿಹೊಂದಿವೆ, ಮತ್ತು ಹೊಂದು ತ್ತಿವೆ" ಎಂದು ಅಶೋಕನೇ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಲೋಕದ ಡೊಂಕನ್ನು ತಿದ್ದಲು ಯಾರಿಂದ ಸಾಧ್ಯ ಎಂದು ಕುಗ್ಗಿ ಕಂಗೆಟ್ಟು ಅವನು ಕುಳಿತಿರಲಿಲ್ಲ. ಅನೇಕ ರೀತಿಗಳಲ್ಲಿ ತನ್ನ 'ಪರಾಕ್ರಮ'ವನ್ನು ಬೀರಿ ಲೋಕ ಕಲ್ಯಾಣಕ್ಕಾಗಿ ಪ್ರಯತ್ನಿಸಿದನು. ಇಂತಹ ಪ್ರಯತ್ನಗಳಲ್ಲಿ ಸೋಲೇ ಪಾಲಾದರೂ ಅದೂ ಒಂದು ಭೂಷಣವೇ! ಅಂತಹ ಉದ್ಯಮದಿಂದಲೇ ಕೀರ್ತಿ ಲಭಿಸುವುದು; ಆತ್ಮತೃಪ್ತಿ ಉಂಟಾಗುವುದು.

ಅಶೋಕನ ಕಾಲದಲ್ಲಿ ಹಿಂದೂಸ್ತಾನದ ಪುರಾತನಧರ್ಮ ನೆರೆಪ್ರಾಂತಗಳಲ್ಲೂ ತನ್ನ ಪ್ರಭಾವವನ್ನು ಹರಡಿತ್ತು; ಅಲ್ಲಿಯ ಜನರ ಮನವೊಲಿಸಿತ್ತು. ಉತ್ತರ ಆಫ್ರಿಕದ ಲಿಬಿಯದವರೆಗೂ, ಯವನ ಪ್ರದೇಶವಾದ ಎಪಿರಸ್‌ನ ವರೆಗೂ ಅವನ ಧರ್ಮದೂತರು ಪ್ರವಾಸ ಬೆಳೆಸಿ ಧರ್ಮವಿಜಯಕ್ಕಾಗಿ ಹೆಣಗಿದರು. ಗೌತಮಬುದ್ಧನ ಪವಿತ್ರ ಜೀವನಕ್ಕೂ ಧರ್ಮೋಪದೇಶಕ್ಕೂ, ಸುಬದ್ಧವಾದ ಬೌದ್ಧ ಸಂಘದವರು ಮಾಡಿದ ಧರ್ಮಪ್ರಚಾರಕ್ಕೂ ಮನಸೋತು ಮಧ್ಯ ಮತ್ತು ಪೂರ್ವ ಏಷ್ಯದ ಜನರು ಒಂದೆರಡು ಶತಮಾನಗಳಲ್ಲೇ ಹಿಂದೂಸ್ತಾನವನ್ನು ಗುರುವಾಗಿ ಸ್ವೀಕರಿಸಿ ಹಿಂದೂಸಂಸ್ಕೃತಿಗೆ ತಲೆಬಾಗಿದರು. ಹೀಗೆ ಭಾರತ ಭೂಮಿಗೆ ವಿಶ್ವರೂಪವನ್ನೊದಗಿಸಿದ ಪುಣ್ಯದ ಬಹುಭಾಗ ಬೌದ್ಧ ಮತಕ್ಕೂ ಅಶೋಕನಿಗೂ ಸಲ್ಲತಕ್ಕದ್ದಾಗಿದೆ.

ಹೀಗೆ, ಜಗತ್ತಿನ ಮಹಾಪುರುಷರಲ್ಲಿ ಒಬ್ಬನೆನಿಸಿದ ಅಶೋಕನನ್ನು ಅವನ ದೇಶೀಯರಾದ ನಾವು, ಅವನು ಚಿನ್ನವೆನಿಸಿದ ಮಣ್ಣಿನಿಂದಲೇ ಆದ ನಾವು, ಅನೇಕ ಶತಮಾನಗಳ ವರೆಗೆ ಮರೆತಿರಲು ಕಾರಣವೇನು ?. . . ಅವನ ಕಾಲಾನಂತರ ಆರೇಳು ಶತಮಾನಗಳು ಕಳೆದ ಮೇಲೆ ನಮ್ಮ ದೇಶಕ್ಕೆ ಯಾತ್ರಾರ್ಥವಾಗಿ ಬಂದ ಚೀಣಾದೇಶದ ಬೌದ್ಧಭಿಕ್ಷುಗಳು ಅವನಿಂದ ನಿರ್ಮಿತವಾದ ಸ್ತೂಪಗಳನ್ನೂ ವಿಹಾರಗಳನ್ನೂ ಧರ್ಮಸ್ತಂಭಗಳನ್ನೂ ಕಂಡು ಬೆರಗಾದರು. ಆದರೂ, ಅಶೋಕನ ಆಳಿಕೆಯ ವಿಷಯವಾಗಿ ನಮ್ಮ ಧರ್ಮಗ್ರಂಥಗಳಲ್ಲಾಗಲಿ, ಪುರಾಣಗಳಲ್ಲಾಗಲಿ, ಕಾವ್ಯನಾಟಕಗಳಲ್ಲಾಗಲಿ ಹೆಚ್ಚು ವಿವರಗಳಿಲ್ಲ. ಇದಕ್ಕೆ ಅಶೋಕನ ಬೌದ್ಧಮತ ಪ್ರೇಮವೇ ಕಾರಣ ಇರಬೇಕೆಂದು ತೋರುತ್ತದೆ. ಹಲವರ ಅಭಿಪ್ರಾಯದಂತೆ ಅಶೋಕನು ಜೈನನಾಗಿದ್ದರೆ, ಜೈನಪುರಾಣಗಳಲ್ಲಿ ಅವನ ಹೆಸರು ಉಳಿದು ಅವನ ಕೀರ್ತಿ ನಮ್ಮ ದೇಶದಲ್ಲಿ ಅವಿಚ್ಛಿನ್ನವಾಗಿ ಮೊಳಗುತ್ತಿತ್ತು. ಆದರೆ, ಅವೈದಿಕ ಅಸತ್ಯ ಎಂಬ ದೂರನ್ನು ಹೊರಿಸಿ ನಾವು ಅನೇಕ ಶತಮಾನಗಳಿಂದ ಬೌದ್ಧಮತವನ್ನೂ ಗೌತಮಬುದ್ಧನನ್ನೂ ಅನ್ಯರಿಗೆ ದತ್ತುಕೊಟ್ಟು ಬಡವರಾಗಿ ಕೊರಗುತ್ತಿದ್ದೆವು. ಲೋಕದಲ್ಲಿ ಅಜ್ಞಾನವನ್ನು ಹರಡಿ, ಸ್ವರ್ಗಕ್ಕೆ ಹೆಚ್ಚು ಜೀವಿಗಳು ಬರದ ಹಾಗೆ ಮಾಡಲು ದೇವರು ಬೌದ್ಧಾವತಾರವನ್ನು ತಾಳಿದನು ಎಂಬ ಕಥೆಯನ್ನು ನಂಬುವವರೂ ನಮ್ಮಲ್ಲಿದ್ದರು! ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ದರ್ಶನಗಳ ಆಧಾರದ ಮೇಲೆಯೇ ಬೆಳೆದು ನಮ್ಮ ದೇಶದಲ್ಲಿ ಪೂತು ಫಲಿಸಿದ ಬುದ್ಧನ ಧರ್ಮವನ್ನೂ, ಸಮಾಜ ಸಂಸ್ಕರಣಕ್ಕಾಗಿ ಸೊಂಟಕಟ್ಟಿದ ಬೌದ್ಧ ಸಂಘವನ್ನೂ ವೈದಿಕಧರ್ಮದ ಅನುಯಾಯಿಗಳು ಖಂಡಿಸಿದರು. ಹೀಗೆ ಬೌದ್ಧ

ಧರ್ಮಕ್ಕೆ ವೈದಿಕರು ಕೊಟ್ಟ ಧಿಕ್ಕಾರವು ಪರಧರ್ಮಪೂಜಕನಾಗಿದ್ದ ಅಶೋಕನಿಗೂ ತಗುಲಿತು. ದೇವಾನಾಂಪ್ರಿಯ ಎಂಬ ಅವನ ಹೆಮ್ಮೆಯ ಬಿರುದು "ಮೂರ್ಖ" ಎಂಬ ಅರ್ಥವನ್ನು ಕೊಡುವಂತಾಯಿತು.

ಬೌದ್ಧರ ಧರ್ಮಗ್ರಂಥಗಳಲ್ಲಿ ಅಶೋಕನ ವಿಷಯವಾದ ಕಥೆಗಳು ಹೇರಳವಾಗಿವೆ. ಸಿಂಹಳ ದ್ವೀಪದ ಬೌದ್ಧವಿಹಾರಗಳಲ್ಲಿ ರಚಿತವಾದ ಮಹಾವಂಶ, ದ್ವೀಪವಂಶ ಎಂಬ ಧರ್ಮಚರಿತ್ರೆಯ ಗ್ರಂಥಗಳಲ್ಲೂ, ಉತ್ತರದ ಬೌದ್ಧದೇಶಗಳಲ್ಲಿ ಪ್ರಚಾರವಾಗಿದ್ದ ಸಂಸ್ಕೃತ ಗ್ರಂಥವಾದ "ದಿವ್ಯಾವದಾನ" ದಲ್ಲೂ ಇಂತಹ ಕಥೆಗಳು ಅನೇಕವಿವೆ. ಆದರೆ, ಐತಿಹ್ಯಗಳ ಗೊಂದಲದಿಂದ ನಂಬಲರ್ಹವಾದ ಅಂಶಗಳನ್ನು ಬಿಡಿಸಿ ತೆಗೆಯುವುದು ಬಹು ಕಷ್ಟದ ಕೆಲಸ. ಅವುಗಳಲ್ಲಿ ಬಹುಭಾಗ ಅತಿಶಯೋಕ್ತಿಯಿಂದಲೂ ಅಸಂಭವವಾದ ಪವಾಡಗಳಿಂದಲೂ ವಾಚಕರನ್ನು ಬೆರಗುಮಾಡಲೋಸುಗವೇ ಕಲ್ಪನೆಯಾದವು. ಅಶೋಕನ ಜೀವನವನ್ನು ತಿಳಿದುಕೊಳ್ಳಲು ಇವಲ್ಲದೆ ಬೇರೆ ಆಧಾರಗಳಿಲ್ಲದೆ ಹೋಗಿದ್ದರೆ ನಮಗೆ ಅವನ ವ್ಯಕ್ತಿತ್ವದ ನಿಜವಾದ ಪರಿಚಯು ಲಭಿಸುತ್ತಲೇ ಇರಲಿಲ್ಲ. ನಮ್ಮ ಪುಣ್ಯಕ್ಕೆ ಸರಿಯಾಗಿ, ಅವನ ಶಿಲಾಶಾಸನಗಳು ಅವನ ಅಂತರಂಗವನ್ನೇ ನಮಗೆ ಮುಚ್ಚುಮರೆಯಿಲ್ಲದೆ, ಮೆರಗು ಬೆರಗುಗಳಿಲ್ಲದೆ, ತೋರಿಸಿಕೊಡುತ್ತವೆ. ತನ್ನ ಒಳಮನಸ್ಸಿನ ತಳಮಳವನ್ನೂ ಅಂತರಂಗವನ್ನು ಪ್ರೇರೇಪಿಸಿದ ಆದರ್ಶಗಳನ್ನೂ, ಅಶೋಕನಷ್ಟು ಸ್ಪಷ್ಟವಾಗಿ ಯಾವ ರಾಜನೂ ತಿಳಿಸಿಲ್ಲವೆನ್ನಬಹುದು. ಅವನ ಆಡಳಿತಕ್ರಮ ಅವನ ಪ್ರಜಾವಾತ್ಸಲ್ಯ ಅವನ ಬಂಧುಪ್ರೇಮ ಅವನ ಧರ್ಮದೀಕ್ಷೆ ಇವುಗಳನ್ನೆಲ್ಲ ನಾವು ಅವನ ಶಾಸನಗಳಿಂದ ಚೆನ್ನಾಗಿ ಅರಿತುಕೊಳ್ಳಬಹುದಾಗಿದೆ.

"ಎಲ್ಲಿ ಶಿಲಾಸ್ತಂಭಗಳಿವೆಯೋ, ಎಲ್ಲಿ ಶಿಲಾಫಲಕಗಳಿವೆಯೋ ಅಲ್ಲಿ, ಇದು ಚಿರಸ್ಥಾಯಿಯಾಗಿ ನಿಲ್ಲುವಂತೆ, ಈ ಧರ್ಮಲಿಪಿಯನ್ನು ಬರೆಸತಕ್ಕದ್ದು. ಇದಕ್ಕಾಗಿಯೇ ಇದನ್ನು ಮಾಡಲಾಗಿದೆ: ನನ್ನ ಪುತ್ರಪೌತ್ರರಿರುವತನಕ ಚಂದ್ರಸೂರ್ಯರಿರುವತನಕ ಇದನ್ನು ಜನರು ಅನುಸರಿಸಲಿ, ಎಂದು. ಇದನ್ನನುಸರಿಸಿದರೆ ಅವರು ಇಹವನ್ನೂ ಪರವನ್ನೂ ಪಡೆಯುವರು," ಎಂದು ಏಳನೆಯ ಸ್ತಂಭಶಾಸನದಲ್ಲಿ ಅಶೋಕನೇ ಹೇಳುತ್ತಾನೆ. "ಇದಕ್ಕಾಗಿಯೇ ಈ ಧರ್ಮಲಿಪಿಯನ್ನು ಬರೆಸಿರುವುದು; ನನ್ನ ಪುತ್ರರೂ ಪೌತ್ರರೂ ಹೊಸ ವಿಜಯವನ್ನು ಗಳಿಸಬೇಕೆಂದು ಯೋಚಿಸದಿರಲಿ." ಒಂದುವೇಳೆ ಅವರಿಗೆ "ಹೊಸವಿಜಯವು ಸ್ವಾರಸ್ಯವಾಗಿ ಕಂಡುಬಂದರೂ ಆಗ ಅವರಿಗೆ ಕ್ಷಮೆಯೂ ಲಘುವಾದ ದಂಡನೆಗಳನ್ನು ಕೊಡುವ ಯೋಚನೆಯೂ ರುಚಿಸಲಿ. ಧರ್ಮ

ವಿಜಯವೇ ವಿಜಯವೆಂದು ಅವರು ತಿಳಿಯಲಿ" ಎಂದು ಹದಿಮೂರನೆಯ ಶಿಲಾಶಾಸನದಲ್ಲಿ ಹೇಳುತ್ತಾನೆ. ಹೀಗೆ, ತನ್ನ ಶ್ರೇಷ್ಠ ಜೀವನದ ಪರಮೋದ್ದೇಶವನ್ನು ಪ್ರಜೆಗಳಿಗೂ ಪ್ರಜಾಸೇವೆಗಾಗಿ ನಿಯಮಿತರಾದ ಅಧಿಕಾರಿಗಳಿಗೂ ಅಶೋಕನು ಪದೇಪದೇ ತಿಳಿಸುತ್ತಿದ್ದನು.

ನಮ್ಮ ದುರ್ದೈವದಿಂದ ಭಾರತೀಯರು ನೂರಾರು ವರುಷಗಳಿಂದ ಅಶೋಕನನ್ನು ಸಂಪೂರ್ಣ ಮರತೇಬಿಟ್ಟಿದ್ದರು. ಚಿರಸ್ಥಾಯಿಯಾಗಿ ನಿಂತು ನಮ್ಮನ್ನು ಎಚ್ಚರಿಸಬೇಕೆಂದು ಅವನು ರಾಜಮಾರ್ಗಗಳಲ್ಲೂ ಜನಭರಿತವಾದ ನಗರಗಳಲ್ಲೂ ಪುಣ್ಯಕ್ಷೇತ್ರಗಳಲ್ಲೂ ಬರೆಸಿದ ಧರ್ಮಲಿಪಿಗಳನ್ನು ಓದಿ ತಿಳಿದುಕೊಳ್ಳುವುದೂ ಬರಬರುತ್ತಾ ಸಾಧ್ಯವಿಲ್ಲದಾಯಿತು. ಅವನ ಶಾಸನಗಳನ್ನು ಕಂಡು ಗುರುತಿಸಿದ ಫಾಹಿಯಾನ್ ಹ್ಯೂಯನ್‌ತ್ಸಾಂಗ್ ಮೊದಲಾದ ಬೌದ್ಧಭಿಕ್ಷುಗಳಿಗೆ ಅವುಗಳನ್ನು ಓದಿ ಹೇಳಬಲ್ಲ ಸಮರ್ಥರು ದೊರೆಯಲಿಲ್ಲ. ಇತಿಹಾಸದ ವಾಹಿನಿಗೆ ಸಿಲುಕಿ ಲಿಪಿಗಳು ಮಾರ್ಪಾಟಾದುವು; ಜನರು ಆಡುವ ನುಡಿ ಕಾಲಕಾಲಕ್ಕೆ ವ್ಯತ್ಯಸ್ತವಾಯಿತು. ಅಶೋಕನ ಶಿಲಾಶಾಸನಗಳ ಸುತ್ತ ಬೆಂಗಾಡು ಬೆಳೆದಂತೆ, ಅವನ ಜೀವನಕಥೆಯನ್ನೂ ಕುರುಡುಕಥೆಗಳು ಆವರಿಸಿದುವು. ಅವನು ನಿಲ್ಲಿಸಿದ ಕಂಬಗಳನ್ನು ಜನರು ಭೀಮನ ಗದೆಯೆಂದರು; ಅವನನ್ನೂ ಮರೆತರು.

ಬಹುಕಾಲ ಮೂಕವಾಗಿದ್ದ ಅಶೋಕನ ಶಾಸನಗಳು ಮತ್ತೆ ಮಾತನಾಡಿ ತಮ್ಮ ಸಂದೇಶವನ್ನು ಜನತೆಗೆ ನೀಡಿದ್ದು ಕೇವಲ ಇತ್ತೀಚೆಗೆ! ಅನೇಕರ ಸಾಹಸವೂ ಪಾಂಡಿತ್ಯವೂ ಸಂಶೋಧನಾಸಾಮರ್ಥ್ಯವೂ ಇದಕ್ಕೆ ನೆರವಾದುವು. ಅಶೋಕನ ಕಾಲದ ರಾಜವೀಥಿಗಳೂ ನಗರಗಳೂ ಖಿಲವಾಗಿ ಬರಬರುತ್ತಾ ಪಾಳುಬಿದ್ದದ್ದರಿಂದ ಅವನ ಶಾಸನಗಳೂ ಶಿಲ್ಪಕಲೆಯ ನಿದರ್ಶನಗಳೂ ಜನರ ಕಣ್ಣಿಂದ ದೂರವಾದುವು.

ಕ್ರಿಸ್ತಶಕ ಸುಮಾರು ೧೭೫೦ ರ ಹೊತ್ತಿಗೆ ಡಿಲ್ಲಿನಗರದ ಸುತ್ತಮುತ್ತ ಧರ್ಮಪ್ರಚಾರಮಾಡುತ್ತಿದ್ದ ಟೀಫರ್‌ತಾಲರ್ ಎಂಬ ಕ್ರೈಸ್ತಪಾದ್ರಿ ಅಲ್ಲಿದ್ದ ಒಂದು ಸ್ತಂಭಶಾಸನವನ್ನು ಕಂಡು ಅಚ್ಚರಿಗೊಂಡು ಹಲವರ ದೃಷ್ಟಿಯನ್ನತ್ತ ಸೆಳೆದನು. ಡಿಲ್ಲಿಯಲ್ಲೇ ಇದ್ದ ಮತ್ತೊಂದು ಸ್ತಂಭಶಾಸನದ ಪ್ರತಿಯನ್ನು ಕಲ್ಕತ್ತಾದಲ್ಲಿ ಈಸ್ಟ್ ಇಂಡಿಯಾ ಕಂಪನಿಯವರ ನ್ಯಾಯಸ್ಥಾನದ ಅಧಿಪತಿಯಾಗಿದ್ದ ಸರ್ ವಿಲಿಯಂ ಜೋನ್ಸ್ ಎಂಬವರಿಗೆ ಕ್ಯಾಪ್ಟನ್ ಪೋಲಿಯರ್ ಎಂಬವರು ತಲಪಿಸಿದರು. ಸರ್ ವಿಲಿಯಂರವರು ಭಾಷಾಶಾಸ್ತ್ರದಲ್ಲಿ ನುರಿತವರಾಗಿದ್ದರು; ಸಂಸ್ಕೃತ ಸಾಹಿತ್ಯದಲ್ಲೂ ಭಾಷೆಯಲ್ಲೂ ಅವರಿಗೆ ಅಪರಿಮಿತವಾದ ಅಭಿಮಾನವಿತ್ತು. (ಪ್ರಾಚೀನ ಕೌಶಾಂಬಿಯಿಂದ ಅಲಹಬಾದಿಗೂ,

ಟೋಪ್ರ, ಮೀರತ್ ಈ ಊರುಗಳಿಂದ ಡಿಲ್ಲಿಗೂ ಅಶೋಕನ ಸ್ತಂಭಗಳನ್ನು ನಗರ ಶೃಂಗಾರಕ್ಕಾಗಿ ಸಾಗಿಸಿದ ಅಕ್ಬರ್ ಚಕ್ರವರ್ತಿ ಹಾಗೂ ಸುಲ್ತಾನ್ ಫಿರೋಜ್‌ಷಹ ಇವರಿಬ್ಬರೂ ಒಂದು ರೀತಿಯಲ್ಲಿ ವಂದನಾರ್ಹರು. ಏಕೆಂದರೆ, ಆ ಸ್ತಂಭಗಳು ಈ ಕಾರಣದಿಂದ ಬಹುಬೇಗ ಜನರ ದೃಷ್ಟಿಗೆ ಬೀಳಲು ಅವಕಾಶವಾಯಿತು.) ೧೮೦೧ ರಲ್ಲಿ ಕಲ್ಕತ್ತದ "ಏಷ್ಯಾ ಸಂಬಂಧವಾದ ಸಂಶೋಧನೆಗಳು" ಎಂಬ ಪತ್ರಿಕೆಯಲ್ಲಿ ಮೇಲೆ ಹೇಳಿದ ಮೂರು ಸ್ತಂಭ ಗಳಲ್ಲಿದ್ದ ಶಾಸನಗಳೆಲ್ಲವೂ ಪ್ರಕಟವಾದುವು.

ಅಶೋಕನ ಶಾಸನಗಳಿರುವ ಗವಿಗಳನ್ನು ನೋಡಲು ಕುತೂಹಲದಿಂದ ಬೀಹಾರದ ಬೆಟ್ಟಗಳನ್ನು ಹಾದುಹೋದ ಹಾಡ್ಜ್‌ಸ್ ಎಂಬೊಬ್ಬರನ್ನು ೧೭೮೦ ರಲ್ಲಿ ಯಾರೋ ದುರಾತ್ಮರು ಕೊಂದುಹಾಕಿದರು. ಐದು ವರ್ಷಗಳ ಅನಂತರ ಹಾರಿಂಗ್‌ಟನ್ ಎಂಬ ಮತ್ತೊಬ್ಬರು ಅಲ್ಲಿಗೆ ಹೋಗಿ ಗವಿಗಳಲ್ಲಿ ಕೆತ್ತಿದ್ದ ಶಾಸನಗಳನ್ನು ಪ್ರತಿಮಾಡಿ ಪ್ರಕಟಿಸಿದರು! ಹೀಗೆ ಕ್ರಮವಾಗಿ ಅಲ್ಲೊಂದು ಇಲ್ಲೊಂದು ಹೀಗೆ ಈ ಶಾಸನಗಳು ಬೆಳಕಿಗೆ ಬಂದುವು. ಗಿರಿನಗರದಲ್ಲಿ ಅಶೋಕನು ಕೆತ್ತಿಸಿದ್ದ ೧೪ ಶಾಸನಗಳನ್ನೂ ಕರ್ನಲ್ ಟಾಡ್ ಎಂಬವರು ೧೮೨೨ ರಲ್ಲೂ, ವಾಯುವ್ಯಪ್ರಾಂತದ ಷಾಬಾಸ್ ಗಾರಿ ಎಂಬಲ್ಲಿಯ ಶಾಸನಗಳನ್ನು ೧೮೩೬ ರಲ್ಲಿ ರಣಜಿತ್‌ಸಿಂಗ್‌ರವರ ಆಸ್ಥಾನದಲ್ಲಿ ಅಧಿಕಾರ ವಹಿಸಿದ್ದ ಕೋರ್ಟ್ ಎಂಬ ಒಬ್ಬ ಫ್ರೆಂಚ್ ಪಂಡಿತನೂ ಪ್ರಕಟಿಸಿದರು.

ಶಾಸನಗಳನ್ನು ಪ್ರತಿ ಮಾಡುವುದೇನೋ ಸುಲಭ. ಆದರೆ, ಅವುಗಳ ಪಾಠವನ್ನು ಪರಿಷ್ಕರಿಸಿ ಅರ್ಥವನ್ನು ತಿಳಿದು ಸಮಂಜಸವಾದ ಅಭಿಪ್ರಾಯ ವನ್ನು ಕಂಡುಹಿಡಿಯುವುದು ಕಷ್ಟತರವಾದ ಕೆಲಸ. ಇದನ್ನು ಮೊತ್ತಮೊದಲು ಜೇಂಸ್ ಪ್ರಿನ್‌ಸೆಪ್ ಎಂಬ ಸಂಶೋಧಕರು ಮಾಡಿದರು. ಡಿಲ್ಲಿ-ಟೋಪ್ರ ಸ್ತಂಭಶಾಸನವನ್ನು ಓದಿ ಅದರ ಭಾಷಾಂತರವನ್ನು ಅವರು ೧೮೩೭ ರಲ್ಲಿ "ಬಂಗಾಳದ ಏಷ್ಯಾ ಸಂಘದ ಪತ್ರಿಕೆ"ಯಲ್ಲಿ ಅಚ್ಚುಹಾಕಿದರು. ಪಶ್ಚಿಮ ಹಿಂದೂಸ್ತಾನದ ಗಿರಿನಗರದಲ್ಲೂ ಪೂರ್ವ ಹಿಂದೂಸ್ತಾನದ ಧೌಲಿಯಲ್ಲೂ ಸಿಕ್ಕಿದ ಶಾಸನ ಸಮೂಹವು ಲಿಪಿಯಲ್ಲೂ ಭಾಷೆಯಲ್ಲೂ ಒಂದೇ ಎಂದು ೧೮೩೮ ರಲ್ಲಿ ಪ್ರಿನ್‌ಸೆಪ್‌ರವರು ಕಂಡು ಹಿಡಿದರು. ಆದ್ದರಿಂದ ಒಂದೇ ಒಂದು ಶಾಸನಮಾಲೆಯನ್ನು ತನ್ನ ಸಾಮ್ರಾಜ್ಯದ ನಾನಾ ಭಾಗಗಳಲ್ಲಿ 'ಪ್ರಿಯದರ್ಶಿ' ಎಂಬ ಹೆಸರಿನ ಒಬ್ಬ ರಾಜನು ಬರೆಸಿರಬೇಕೆಂದು ಅವರು ಊಹಿಸಿದರು. ಮುಂದೆ, ಹಲವು ಬಿಡಿ ಶಾಸನಗಳೂ ಸಂಶೋಧಕರ ದೃಷ್ಟಿಗೆ ಗೋಚರ ವಾದವು. ೧೮೩೯ ರಲ್ಲಿ ಸಹಸ್ರಾಂ ಎಂಬಲ್ಲಿಯ ಬಿಡಿ ಶಾಸನ, ೧೮೪೦ ರಲ್ಲಿ

ಭಾಬ್ರು ಎಂಬ ಊರಿನ ಶಾಸನ, ೧೮೯೧ ರಲ್ಲಿ ನಮ್ಮ ಮೈಸೂರು ಸಂಸ್ಥಾನ ದಲ್ಲಿ ಚಿತ್ರದುರ್ಗ ಜಿಲ್ಲೆಯ ಮೂರು ಬಿಡಿ ಶಾಸನಗಳು, ಹೀಗೆ ಇವು ಪ್ರಕಟ ವಾದವು. ೧೯೧೫ ರಲ್ಲಿ ನಿಜಾಂ ಸರ್ಕಾರದ ಗಣಿಸಂಶೋಧಕರಾಗಿದ್ದ ಬೀಡ್ಸ್ ಎಂಬವರು "ಮಸ್ಕಿ" ಎಂಬ ಊರಲ್ಲಿ ಮತ್ತೊಂದು ಶಾಸನವನ್ನು ಕಂಡು ಹಿಡಿದರು. ಈ ಶಾಸನದಲ್ಲಿ "ಪ್ರಿಯದರ್ಶಿ" "ದೇವಾನಾಂ ಪ್ರಿಯ" ಎಂಬ ಬಿರುದುಗಳ ಜೊತೆಗೆ "ಅಶೋಕ" ಎಂಬ ಹೆಸರೂ ಉಲ್ಲೇಖಿತವಾಗಿದೆ. ಇತರ ಯಾವ ಶಾಸನದಲ್ಲೂ ಈ ರೀತಿ ಬರೆದಿಲ್ಲ. ಆದ್ದರಿಂದ ಇತರ ಎಲ್ಲಾ ಶಾಸನ ಗಳನ್ನೂ ಅಶೋಕಚಕ್ರವರ್ತಿಯೇ ಬರೆಸಿರಬೇಕೆಂದು ನಿರ್ವಿವಾದವಾಗಿ ಹೇಳುವಂತಾಯಿತು. ೧೮೮೧ ರಲ್ಲಿ ಸೆನಾರ್ಟ್ ಎಂಬ ಫ್ರೆಂಚ್ ಗ್ರಂಥಕರ್ತ ರೊಬ್ಬರು ಅದುವರೆಗೂ ಬೆಳಕಿಗೆ ಬಂದಿದ್ದ ಶಾಸನಗಳನ್ನೆಲ್ಲ ಶೇಖರಿಸಿ "ಪ್ರಿಯ ದರ್ಶಿಯ ಶಾಸನಗಳು" ಎಂಬ ಹೆಸರಿನಿಂದ ಪ್ರಕಟಿಸಿದ್ದರು. ಆದರೆ, ಮಸ್ಕಿಯ ಶಾಸನ ದೊರೆತ ಮೇಲೆ "ಅಶೋಕನ ಶಾಸನಗಳು" ಎಂದು ಅವುಗಳಿಗೆ ಹೆಸರಿಡಲು ಎಲ್ಲರಿಗೂ ಧೈರ್ಯ ಬಂತು. ೧೯೨೫ ರಲ್ಲಿ ಹುಲ್ಷ್ ಎಂಬ ಪ್ರಸಿದ್ಧ ಸಂಶೋಧಕರು "ಅಶೋಕನ ಶಾಸನಗಳು" ಎಂಬ ತಮ್ಮ ಉದ್ಗ್ರಂಥದಲ್ಲಿ ಅವುಗಳನ್ನೆಲ್ಲ ಕೂಲಂಕಷವಾಗಿ ವಿಮರ್ಶಿಸಿ, ಪಾಠಾಂತರಗಳ ನ್ನೆಲ್ಲ ಒಂದೆಡೆ ಸೇರಿಸಿ, ಭಾಷಾಂತರಮಾಡಿ ಮಹದುಪಕಾರ ಮಾಡಿರುವರು. ಅಶೋಕನ ವಿಷಯವಾಗಿ ಇಂದು ಯಾರು ನಾಲ್ಕು ಮಾತು ಆಡಿದರೂ ಅವರು ಹುಲ್ಷ್ ರವರಿಗೆ ಋಣಿಯಾಗದೆ ವಿಧಿಯಿಲ್ಲ.

ಅಶೋಕನು ತನ್ನ ಶಾಸನಗಳನ್ನು ದೇಶದ ನಾನಾ ಭಾಗಗಳಲ್ಲಿ ಬರೆಸಿದ ನಾದ್ದರಿಂದ ಇನ್ನೂ ಅವು ಅಲ್ಲಲ್ಲಿ ಹೊಸದಾಗಿ ಜನರ ಕಣ್ಣಿಗೆ ಬೀಳುತ್ತಲೇ ಇವೆ. ೧೯೩೧ ರಲ್ಲಿ ಮಸ್ಕಿಗೆ ೫೪ ಮೈಲಿ ದೂರದಲ್ಲಿ ಪ್ರಾಚೀನ ಜೈನ ಪುಣ್ಯ ಕ್ಷೇತ್ರವಾದ ಕೊಪಣನಗರದ ಹತ್ತಿರ (ಈಗ ಅದಕ್ಕೆ ಕೊಪ್ಪಳ ಎಂಬ ಹೆಸರಿದೆ) ಎರಡು ಸ್ಥಳಗಳಲ್ಲಿ ಅಶೋಕನ ಒಂದು ಬಿಡಿ ಶಾಸನವು ಸಿಕ್ಕಿದೆ. ಹಾಗೆಯೇ, ೧೯೩೭ ರಲ್ಲಿ ಡಾ॥ ಸಿ. ನಾರಾಯಣರಾವ್ ಎಂಬವರು ಗುತ್ತಿ ದುರ್ಗದ ಸಮೀಪದಲ್ಲಿ ಕರ್ನೂಲಿಗೆ ಸೇರಿದ ಎರ್ರಗುಡಿ ಎಂಬ ಗ್ರಾಮದಲ್ಲಿ ಅಶೋಕನ "ಹದಿನಾಲ್ಕು ಶಾಸನ" ಗಳನ್ನು ಪತ್ತೆಮಾಡಿದರು. ಅವರೇ ಅವುಗಳನ್ನು ಬಹು ಪ್ರಯಾಸದಿಂದ ಓದಿ ತಿದ್ದಿ ಭಾಷಾಂತರಿಸಿ ಪ್ರಕಟಿಸಿದಾರೆ.

ಹೀಗೆ ಅನೇಕ ಜನರ ಅವಿಶ್ರಾಂತ ಪರಿಶ್ರಮದಿಂದ ಅಶೋಕನ ಸಂದೇಶ ಮತ್ತೆ ಜಗತ್ತಿನಲ್ಲೆಲ್ಲ ಮೊಳಗಲು ಅವಕಾಶವಾಯಿತು. ಪ್ರಾಚೀನ ಕಾಲದ ಯಾವ ರಾಜನ ಅಂತರಂಗವನ್ನೂ ನಾವು ಇಷ್ಟು ಸ್ಪಷ್ಟವಾಗಿ ತಿಳಿಯುವಂತಿಲ್ಲ.

# ೨. ಮೌರ್ಯವಂಶ

ನಮ್ಮ ದೇಶಕ್ಕೆ ಈಗ ಬಳಕೆಯಾಗಿರುವ 'ಹಿಂದೂಸ್ತಾನ' ಎಂಬ ಹೆಸರು ಸಿಂಧುನದೀ ಪ್ರಾಂತವನ್ನು ಇರಾನಿಯರು ಗೆದ್ದಾಗಿನಿಂದಲೂ, 'ಇಂಡಿಯಾ' ಎಂಬ ಹೆಸರು ಅಲೆಕ್ಸಾಂಡರನು ಇರಾನಿಯರನ್ನು ಸೋಲಿಸಿ ಯವನ ಸೇನೆಯೊಂದಿಗೆ ಇಲ್ಲಿಗೆ ದಿಗ್ವಿಜಯ ಬಂದಾಗಿನಿಂದಲೂ ರೂಢಿಗೆ ಬಂದಿದೆ. ಇರಾನೀ ಜನಕ್ಕೂ ಹಿಂದೂಸ್ತಾನಕ್ಕೂ ಪೂರ್ವದಿಂದ ಧರ್ಮದಲ್ಲೂ ಅರ್ಥದಲ್ಲೂ ನಿಕಟವಾದ ಸಂಬಂಧವಿತ್ತು. ಎರಡು ಜನಾಂಗಗಳೂ ಆರ್ಯಸಂಸ್ಕೃತಿಯೊಂದರಿಂದಲೇ ಪರಿಪೋಷಿತವಾಗಿದ್ದವು. ಇರಾನಿ ದೇಶದಲ್ಲಿ ಫಾರ್ಸಿ ಬುಡಕಟ್ಟಿಗೆ ಸೇರಿದ ಅಖಿಮಿನಿಯ ರಾಜವಂಶದವರು ಮೊತ್ತಮೊದಲು ಒಂದು ಚಕ್ರಾಧಿಪತ್ಯವನ್ನು ಸ್ಥಾಪಿಸಿದರು; ಸುತ್ತಲಿನ ಶತ್ರುಗಳನ್ನು ಹಿಮ್ಮೆಟ್ಟಿಸಿದರು. ಅವರ ಪ್ರತಾಪ ಪಶ್ಚಿಮದಲ್ಲಿ ಭೂಮಧ್ಯಸಾಗರದವರೆಗೂ ಪೂರ್ವದಲ್ಲಿ ಸಿಂಧುನದಿ ಮತ್ತು ಅದರ ಉಪನದಿಗಳಿಂದ ಪುಷ್ಟಿತುಷ್ಟಿಗಳನ್ನು ಪಡೆದಿದ್ದ ಪಂಜಾಬ್ ಪ್ರಾಂತದವರೆಗೂ ಪಸರಿಸಿತು. ಸಾಮ್ರಾಜ್ಯಸ್ಥಾಪಕನಾದ ಕುರುಸ್ ಎಂಬುವನು ಕ್ರಿ.ಪೂ. ೫೩೦ ರಲ್ಲಿ ಗಾಂಧಾರವನ್ನು ಆಕ್ರಮಿಸಿದನೆಂದೂ ಅಲ್ಲಿ ಹಿಂದುಗಳೊಂದಿಗೆ ಯಾವುದೋ ಒಂದು ರಣರಂಗದಲ್ಲಿ ಕಾದಾಡುವಾಗ ಮಡಿದನೆಂದೂ ಪ್ರತೀತಿ. ಸುಮಾರು ಕ್ರಿ.ಪೂ. ೫೧೦ ರಲ್ಲಿ ದರ್ಯವುಷನು ಸಿಂಧುನದಿಯವರೆಗೂ ದಂಡೆತ್ತಿ ಬಂದನು. ಆ ನದೀತೀರದಲ್ಲಿದ್ದ ಕಶ್ಯಪ ಪಟ್ಟಣದಿಂದ ತಾನು ಸಿದ್ಧಪಡಿಸಿದ ಒಂದು ನೌಕಾ ಬಲವನ್ನು ಸ್ಕೈಲಾಕ್ಸ್ ಎಂಬ ದಂಡನಾಯಕನ ವಶಕ್ಕೊಪ್ಪಿಸಿ ಸಿಂಧುನದಿಯ ಮೂಲಕ ಹೋಗಿ ಫಾರ್ಸಿ ದೇಶಕ್ಕೆ ಸಮುದ್ರಮಾರ್ಗವಾಗಿ ಹಿಂತಿರುಗುವಂತೆ ಆಜ್ಞಾಪಿಸಿದನು. ಫಾರ್ಸಿ ರಾಜಧಾನಿಯಾಗಿದ್ದ ಪೆರ್ಸಿಪೊಲಿಸ್ ನಗರದಲ್ಲೂ ನಕ್ಷಿರುಸ್ತುಂ ಎಂಬಲ್ಲಿಯೂ ಇರುವ ದರ್ಯವುಷನ ಕಾಲದ ಶಿಲಾಶಾಸನಗಳಲ್ಲಿ 'ಹಿಂದು' ಪ್ರಾಂತವನ್ನು ಇರಾನಿ ಸಾಮ್ರಾಜ್ಯದ ಭಾಗವೆಂದು ಪರಿಗಣಿಸಿದಾರೆ. ಇತಿಹಾಸ ಪಿತಾಮಹ ಎಂದು ಯವನರು ಕೊಂಡಾಡುವ ಹೆರೊಡೊಟಸ್ ಪ್ರಪಂಚದ ಪೂರ್ವ ದಿಗಂತದಲ್ಲಿನ ಕಟ್ಟಕಡೆಯ ಜನರೇ ಇಂಡ್ಯನರು. . . ಅಖಿಮಿನಿಯ ಸಾಮ್ರಾಜ್ಯದ ಮಂಡಲಗಳಲ್ಲಿ ಹಿಂದೂಸ್ತಾನ ಇಪ್ಪತ್ತನೆಯದಾಗಿದ್ದರೂ ಅಲ್ಲಿಂದ ವರ್ಷವೊಂದಕ್ಕೆ ೩೬೦ ಟಾಲೆಂಟುಗಳಷ್ಟು ಸುವರ್ಣ[1] (ಅಂದರೆ,

[1] Rawlinson—*India as Known to The Western World* p. 21.

೨೦,೫೭೦ ಪೌಂಡ್ ತೂಕ) ಕಪ್ಪವಾಗಿ ಬರುತ್ತಿತ್ತೆಂದೂ ಇಡೀ ಸಾಮ್ರಾಜ್ಯದ ಒಟ್ಟು ವರಮಾನದಲ್ಲಿ ಮೂರರಲ್ಲೊಂದುಭಾಗವನ್ನು ಹಿಂದೂಸ್ತಾನವೇ ಒದಗಿಸುತ್ತಿತ್ತೆಂದೂ ಹೇಳುತ್ತಾನೆ. ರಾಜಸ್ಥಾನದ ಮರಳುಗಾಡು ಈ ಪ್ರಾಂತದ ಪೂರ್ವಭಾಗದ ಗಡಿಯಾಗಿದ್ದಿರಬೇಕು. ಏಕೆಂದರೆ, ಹೆರೊಡೊಟಸನು, "ಇಂಡಿಯಾದ ಮೂಡಲ ಕಡೆ ಎಲ್ಲ ಬರಿಯ ಮರಳು! ಏಷ್ಯಾಖಂಡದ ಅತಿಪೂರ್ವದಲ್ಲಿ ಉದಯಸೂರ್ಯನ ಸಮೀಪದಲ್ಲಿ ವಾಸಿಸುವ ಜನಾಂಗವೆಂದರೆ ಇಂಡಿಯನರು" ಎಂದು ಹೇಳುತ್ತಾನೆ.

ದರ್ಯವುಷನ ಮಗನಾದ ಕ್ಷಯಾರ್ಷನು ತನ್ನ ಆಧಿಪತ್ಯಕ್ಕೆ ತೊಂದರೆ ಕೊಡುತ್ತಿದ್ದ ಯವನನಗರಗಳ ಪುಂಡನ್ನಡಗಿಸಲು ಲಕ್ಷೋಪಲಕ್ಷ ಸೇನೆಯೊಂದಿಗೆ ಯೂರೋಪ್ ಖಂಡಕ್ಕೆ ನುಗ್ಗಿದನು. ಅವನ ಆಜ್ಞಾನುವರ್ತಿಗಳಾದ ಹಿಂದುಗಳೂ ಫಾರ್ಸಿ ಸೈನ್ಯದಲ್ಲಿ ಸೇರಿ ಆ ಮಹಾಸಂಗ್ರಾಮದಲ್ಲಿ ತಮ್ಮ ರಾಜಭಕ್ತಿಯನ್ನೂ ಶೌರ್ಯಾತಿಶಯಗಳನ್ನೂ ಪ್ರಕಟಿಸಿದರು. ಸ್ವಾಮಿ ಸೇವೆಗಾಗಿ ಯೂರೋಪಿನ ಯುದ್ಧಕ್ಷೇತ್ರಗಳಲ್ಲಿ ಪ್ರಾಣವನ್ನರ್ಪಿಸಿರುವ ಭಾರತೀಯರಲ್ಲಿ ಅವರೇ ಮೊದಲಿಗರಾದರು. "ಹತ್ತಿಯ ಬಟ್ಟೆಯನ್ನುಟ್ಟು ಬೆತ್ತದ ಬಿಲ್ಲುಬಾಣಗಳನ್ನು ಹಿಡಿದು ಫಾರಸೀಕನಾದ ಫರ್‌ನಸ್ಥತ್ರಸನ ನಾಯಕತ್ವದಲ್ಲಿ ಇಂಡಿಯನರ ಸೇನೆ ಬಂತು. ಅವರು ರಥಗಳನ್ನೂ ರಣಾಶ್ವಗಳನ್ನೂ ತಂದಿದ್ದರು. ಕೆಲವು ರಥಗಳಿಗೆ ಕಾಡುಕತ್ತೆಗಳನ್ನು ಹೂಡಿದ್ದರು. ಅಲ್ಲದೆ, ಅವರ ದೇಶದಿಂದ ಅಸಂಖ್ಯಾತ ಬೇಟೆನಾಯಿಗಳನ್ನು ಯುದ್ಧಕ್ಕಾಗಿ ತಂದಿದ್ದರು" ಎಂದು ಹೆರೊಡೊಟಸನು ಬರೆಯುತ್ತಾನೆ. ಆದರೆ ಸಲಮಿಸ್ ಕದನದಲ್ಲಿ ಪಾರಸಿಕರ ನೌಕಾಬಲವು ಪುಡಿಪುಡಿಯಾದಾಗ ಕ್ಷಯಾರ್ಷನು ತನ್ನ ದೇಶಕ್ಕೆ ಓಡಬೇಕಾಗಿಬಂತು. ಭೀತನಾದ ಚಕ್ರವರ್ತಿಯು ತನ್ನ ಸೈನ್ಯದ ಬಹುಭಾಗವನ್ನು ಸಂಗಡಲೇ ಕರೆದುಕೊಂಡು ಹೊರಟನು. ಆದರೆ ವಿಜಯೋನ್ಮತ್ತರಾದ ಯವನರನ್ನು ತಡೆಗಟ್ಟಲು ಧೀರರಾದ ಹಲವು ಸೈನಿಕರನ್ನು ಗ್ರೀಸಿನಲ್ಲೇ ಇರಿಸಿ ಹೋಗಬೇಕಾಯಿತು. ಕಷ್ಟತರವಾದ ಈ ಸಾಹಸಕ್ಕೆ ಕ್ಷಯಾರ್ಷನು ಇತರ ವೀರದಳಗಳೊಂದಿಗೆ ತಮ್ಮ ಹಿಂದು ಯೋಧರನ್ನೂ ಆರಿಸಿದನಂತೆ.

ಕ್ಷಯಾರ್ಷನ ಅನಂತರ ಫಾರ್ಸಿ ಚಕ್ರವರ್ತಿಗಳು ಯವನರನ್ನು ಸದೆಬಡಿಯಲು ಎಡೆಬಿಡದೆ ಪ್ರಯತ್ನಪಡುತ್ತಿದ್ದರು. ಕಡೆಗೆ ಸ್ವಾತಂತ್ರ್ಯಪ್ರೇಮಿಗಳಾದ ಯವನರ ಕೈಯೆ ಮೇಲಾಯಿತು. ತಮ್ಮ ದೇಶಕ್ಕೆ ದಂಡೆತ್ತಿ ಬಂದು ಅಲ್ಲಿಯ ದೇವಸ್ಥಾನಗಳನ್ನು ಕೆಡಿಸಿ ತಮ್ಮ ಹಿರಿಯರ ಸಮಾಧಿಗಳನ್ನು ಅಪವಿತ್ರಮಾಡಿ ತಮ್ಮ ನಗರಗಳನ್ನುರಿಸಿದ ಇರಾನಿ ಸಾಮ್ರಾಜ್ಯದೊಳಕ್ಕೆ

ತಾವೂ ದಂಡೆತ್ತಿಹೋಗಿ ಮುಯ್ಯಿಗೆ ಮುಯ್ಯಿ ತೀರಿಸಬೇಕೆಂಬುದೇ ಯವನ ಯುವಕರ ಹೆಬ್ಬಯಕೆಯಾಗಿತ್ತು. ಅನೇಕರಿಗೆ ಅದೊಂದು ಸವಿಗನಸಾಗಿತ್ತು; ವೀರಸಂಕಲ್ಪವಾಗಿತ್ತು. ಹಲವರು ಅದನ್ನು ನನಸಾಗಿ ಮಾರ್ಪಡಿಸಲು ಹವಣಿಸಿದರು. ಮೆಸಿಡೋನಿಯಾ ರಾಜ್ಯದ ಅರಸನಾದ ಫಿಲಿಪ್ಪನು ಇತರ ಎಲ್ಲಾ ಯವನರಾಷ್ಟ್ರಗಳನ್ನೂ ಗೆದ್ದು ಎಲ್ಲರನ್ನೂ ಒಂದುಗೂಡಿಸಿ ಈ ಸಂಕಲ್ಪವನ್ನು ನೆರವೇರಿಸುವುದಕ್ಕಾಗಿ ಅಖಿಲ ಯವನ ಸೈನ್ಯವನ್ನು ಶೇಖರಿಸಿದನು. ಆದರೆ ಕಣ್ಣಿಂದ ಕಂಡ ಗಂಟು ಕೈಗೂಡುವ ಮೊದಲೇ ಅವನು ಅಕಾಲಮರಣಕ್ಕೆ ತುತ್ತಾದನು.

ಅವನ ಮಗನಾದ ಅಲೆಕ್ಸಾಂಡರನು ನಾಡಿನ ದೀಕ್ಷೆಯನ್ನು ತಾನೇ ವಹಿಸಿ ಹಿರಿಯರ ಹಂಬಲನ್ನು ತನ್ನದಾಗಿ ತಿಳಿದು ಫಾರ್ಸಿ ಸಾಮ್ರಾಜ್ಯದ ಕಡೆಗೆ ದಿಗ್ವಿಜಯ ಹೊರಟನು. ಯವನರ ಶಕ್ತಿಪೌರುಷಗಳು, ಅವರ ಹೊಚ್ಚ ಹೊಸ ಯುದ್ಧಕ್ರಮಗಳು, ಅವರ ಸಂಸ್ಕೃತಿಯಲ್ಲಿ ಅಂತರ್ಗತವಾಗಿದ್ದ ಆಕರ್ಷಕವಾದ ಆದರ್ಶಗಳು, ಅಲೆಕ್ಸಾಂಡರನ ಹೊಸಪರಿಯ ರಾಜತಂತ್ರ ಮತ್ತು ಯುದ್ಧತಂತ್ರ ಇವೆಲ್ಲವೂ ಒಂದುಕಡೆ; ಮತ್ತೊಂದುಕಡೆ, ಫಾರ್ಸಿ ಚಕ್ರವರ್ತಿಯ ಹಿಡಿತದಿಂದ ತಪ್ಪಿಸಿಕೊಂಡು ಹೋಗಲು ಕಾತರರಾಗಿರುವ ಸಾಮಂತರು, ನೊಗದ ಭಾರಕ್ಕೆ ನೊಂದ ಜನಾಂಗಗಳು, ಅನೇಕ ವರ್ಷಗಳ ಆಲಸ್ಯದಿಂದ ಅಸಡ್ಡೆಯೇ ಗೆಡ್ಡೆಕಟ್ಟಿದಂತಿದ್ದ ಅಧಿಕಾರಿಗಳು, ಹೊಸದಕ್ಕೆ ಹೊಂದಲರಿಯದ ಸೇನಾನಾಯಕರು—ಹೀಗಾಗಿ ಫಾರಸಿಕರಿಗೆ ಯವನ ರಾಜನ ವಿಜಯಪತಾಕೆಯನ್ನು ತಡೆಯುವುದೇ ಅಸಾಧ್ಯವಾಯಿತು. ಸಾಮ್ರಾಜ್ಯದ ಕಣ್ಮಣಿಯಂತಿದ್ದ ರಾಜಧಾನಿಯನ್ನುಳಿಸಲು ಕ್ರಿ.ಪೂ. ೩೩೦ ರಲ್ಲಿ ಅರ್ಬೆಲಾ ಎಂಬಲ್ಲಿ ಒಂದು ಪ್ರಚಂಡ ಕದನ ನಡೆಯಿತು. ಏಷ್ಯದ ಮೂಲೆ ಮೂಲೆಗಳಿಂದಲೂ ದಳಗಳು ಬಂದು ಸೇರಿದುವು. "ಹಿಂದು"ದೇಶದಿಂದಲೂ ಕಾಲಾಳುಗಳೂ ಗಜಸೇನೆಯೂ ಬಂದುವು. ಆದರೆ, ಯವನರಿಗೇ ಜಯವಾಯಿತು. ಅಧಿಕಾರಮದದಿಂದಲೂ ಆಡಳಿತದ ಬಿಗಿಯಿಂದಲೂ ಸಂಪತ್ಸಮೃದ್ಧಿಯಿಂದಲೂ ಪೂರ್ವಪ್ರಾಚ್ಯಗಳೆರಡನ್ನೂ ಕೆಲಕಾಲ ಬೆರಗುಗೊಳಿಸಿದ್ದ ಅಖಿಮಿನಿಯ ಚಕ್ರಾಧಿಪತ್ಯ ಉರುಳಿತು. ಫಾರ್ಸಿ ರಾಜಧಾನಿಗೆ ಕಿಚ್ಚಿಟ್ಟು ಯವನರು ತಣಿದರು. ಅಥೆನ್ಸ್ ಮುಂತಾದ ಯವನನಗರಗಳನ್ನು ಉರಿಸಿದ್ದ ಶತ್ರುಗಳ ಮುಖ್ಯನಗರ ೧೫೦ ವರ್ಷದ ಅನಂತರವಾದರೂ ತಮ್ಮ ಕೋಪಾಗ್ನಿಗೆ ಆಹುತಿಯಾದದ್ದನ್ನು ಕಂಡಾಗ ಯವನರ ಕಣ್ಣಿಗೆ ಹಬ್ಬವಾಯಿತು.

ಅಲೆಕ್ಸಾಂಡರನು ಸ್ವದೇಶಕ್ಕೆ ಹಿಂತಿರುಗದೆ ಫಾರ್ಸಿ ಸಾಮ್ರಾಜ್ಯವೆಲ್ಲವನ್ನೂ ಆಕ್ರಮಿಸಿ ಕೈವಶಮಾಡಿಕೊಳ್ಳಬೇಕೆಂಬ ಕುತೂಹಲದಿಂದ ಮತ್ತೆ ಪೂರ್ವಾಭಿಮುಖವಾಗಿ ಹೊರಟನು. ಅವನ ದೊಡ್ಡ ಸೈನ್ಯಪ್ರವಾಹ "ಹಿಂದು" ಪ್ರಾಂತಕ್ಕೂ ನುಗ್ಗಿತು. ಇಡೀ ಸಾಮ್ರಾಜ್ಯದ ಒಟ್ಟು ವರಮಾನದಲ್ಲಿ ಮೂರರಲ್ಲೊಂದುಪಾಲನ್ನು ಒದಗಿಸುತ್ತಿದ್ದ ಹಿಂದೂಸ್ತಾನವನ್ನು ಸ್ವತಂತ್ರವಾಗಿ ಉಳಿಸಲು ಸಾಧ್ಯವೆ? ಅಖಿಮಿನಿಯ ಚಕ್ರವರ್ತಿಗಳಿಗೆ ಬದಲು ಯವನ ಚಕ್ರವರ್ತಿಗೆ ತಲೆಬಾಗಿ ಕಪ್ಪಕಾಣಿಕೆಗಳನ್ನೊಪ್ಪಿಸುವಂತೆ ನಮ್ಮ ದೇಶದ ನೈಋತ್ಯ ಪ್ರಾಂತ್ಯಗಳ ರಾಜರುಗಳಿಗೆ ಓಲೆಗಳು ಬಂದುವು. ಅಸಮಬಲ ಪರಾಕ್ರಮಗಳಿಂದ ಅಪಾರ ಕೀರ್ತಿಯನ್ನು ಸಂಪಾದಿಸಿದ್ದ ಅಖಿಮಿನಿಯರನ್ನೇ ನೆಲಸಮಮಾಡಿದ ಅಲೆಕ್ಸಾಂಡರನಿಗೆ ಶರಣುಹೊಗುವುದಿಲ್ಲವೆಂದು ಎದೆತಟ್ಟಿ ನಿಲ್ಲಲು ಯಾರಿಗೆತಾನೆ ಧೈರ್ಯಬಂದೀತು? ತಕ್ಷಶಿಲಾನಗರದ ಆಂಭಿ ಎಂಬ ರಾಜನು ೬೫ ಆನೆಗಳನ್ನೂ ೩,೦೦೦ ಎತ್ತುಗಳನ್ನೂ ಎರಡು ಲಕ್ಷ ಕುರಿಗಳನ್ನೂ ಸಮರ್ಪಿಸಿ ಯವನರ ವಿಜಯಯಾತ್ರೆಗೆ ತನ್ನ ನಗರವನ್ನು ತೆರೆದಿಟ್ಟನು. ಅಲ್ಲದೆ, ಅಭಿಸಾರ ಪೌರವ ಮುಂತಾದ ತನ್ನ ಹಲವು ಶತ್ರುಗಳನ್ನು ಸದೆಬಡಿಯುವಂತೆ ಅಲೆಕ್ಸಾಂಡರನ್ನು ಕೇಳಿಕೊಂಡನು. ಆದರೆ, ದೇಶಾಭಿಮಾನ ಸ್ವಾಭಿಮಾನ ಇವುಗಳಿಂದ ಹುರುಪುಗೊಂಡ ಕೆಲವು ಕೆಚ್ಚೆದೆಯ ಜನಾಂಗಗಳೂ ಆ ಪ್ರದೇಶದಲ್ಲಿದ್ದವು. ಆದ್ದರಿಂಧ ಯವನರ ಮುಂದೋಟ ಅಷ್ಟು ಸುಲಭವಾಗಿ ಸಾಗಲಿಲ್ಲ. ಅವರ ಸೈನ್ಯವನ್ನು ತಡೆಗಟ್ಟಿದ ಪಶ್ಚಿಮಗಾಂಧಾರದ ಪುಷ್ಕಲಾವತೀ ನಗರವನ್ನು ಕಬಳಿಸಿ ಮುನ್ನುಗ್ಗಲು ಯವನರಿಗೆ ೩೦ ದಿನಗಳು ಬೇಕಾಗಿಬಂತು. ಇಪ್ಪತ್ತು ಸಾವಿರ ಸವಾರರನ್ನೂ ಮೂವತ್ತು ಸಾವಿರ ಕಾಲಾಳುಗಳನ್ನೂ ಒಳಗೊಂಡಿದ್ದ ಅಶ್ವಕರ ಸೇನೆಯೊಂದಿಗೆ ಒಂದು ಘೋರ ಯುದ್ಧ ನಡೆಯಿತು. ರಾಜಧಾನಿಯ ಸುತ್ತಣ ಕಾಳಗಗಳಲ್ಲಿ ಮಡಿದ ತಮ್ಮ ಪತಿಗಳನ್ನು ಹಿದಿರಲು ಮನಸ್ಸಿಲ್ಲದೆ, ಅಶ್ವಕ ರಮಣಿಯರು ಕಾಳಗದಲ್ಲಿ ವೀರಾವೇಶದಿಂದ ಹೋರಾಡಿ ಮಡಿದರೆಂದು ಯವನ ಚರಿತ್ರೆಕಾರರು ಅಚ್ಚರಿಯಿಂದ ಬರೆಯುತ್ತಾರೆ.

ಝೀಲಂ ಚೇನಾಬ್ ನದಿಗಳ ನಡುವಣ ಪ್ರಾಂತದ ಅಧಿಪತಿಯಾಗಿದ್ದ ಪೌರವರಾಜನು ನಾಡಿನ ಮಾನಸಂರಕ್ಷಣೆಗಾಗಿ ಅನೇಕ ಅರಸರನ್ನೂ ಗಣರಾಷ್ಟ್ರಗಳನ್ನೂ ಹುರಿದುಂಬಿಸಿ ಸಜ್ಜುಗೊಳಿಸಿ ಅಲೆಕ್ಸಾಂಡರನ್ನು ತಡೆದು ನಿಲ್ಲಿಸಲು ಸಿದ್ಧನಾದನು. ಭಾರತವರ್ಷದಲ್ಲಿ ಬಳಕೆಯಲ್ಲಿದ್ದ ಆಗಿನ ಯುದ್ಧಶಾಸ್ತ್ರಕ್ಕನುಗುಣವಾಗಿ ಅಣಿಯಾಗಿದ್ದ ಆ ಚತುರಂಗಸೇನೆಯನ್ನು ಕಂಡಾಗ

" ಕಡೆಗೂ ನನ್ನ ಸಂಗ್ರಾಮನೈಪುಣ್ಯಕ್ಕೆಣೆಯಾದ ಒಬ್ಬ ವೈರಿ ಸಿಕ್ಕಿದನು! ಇಂದಿನ ಕಾಳಗ ಕೇವಲ ಮಾನವರದಲ್ಲ; ಘೋರ ಮೃಗಗಳದು! ವೀರ ಶೂರರದು!" ಎಂದು ಹೇಳುತ್ತಾ ಅಲೆಕ್ಸಾಂಡರನು ಹಿಗ್ಗಿದನಂತೆ. ಆದರೆ ಭೂಮಧ್ಯಸಾಗರದ ತೀರದಿಂದಲೂ ಫಾರ್ಸಿ ಸಾಮ್ರಾಜ್ಯದ ನಾನಾಭಾಗಗಳಿಂದಲೂ ಹಿಂದೂದೇಶದ ಎಲ್ಲೆಗಳಿಂದಲೂ ಮಧ್ಯ ಏಷ್ಯಾದಿಂದಲೂ ಕೇವಲ ಯುದ್ಧಾಸಕ್ತಿಯಿಂದ ಬಂದ ಸಾವಿರಾರು ಯೋಧರನ್ನೊಳಗೊಂಡ ಯವನಸೇನೆಯ ನವೀನಯುದ್ಧಕ್ರಮದೆದುರು ಪೌರವನು ನಿಲ್ಲಲಾರದೆ ಹೋದನು. ಹಿಂದೆ ಅರ್ಬೆಲಾ ಅಪಜಯದ ನಸುಗತ್ತಲಲ್ಲೇ ಫಾರ್ಸಿಚಕ್ರವರ್ತಿ ಕಾಲಿಗೆ ಬುದ್ಧಿ ಹೇಳಿದ್ದನು. ಆದರೆ ಪೌರವನು ಮಾತ್ರ ಹಾಗೆ ಮಾಡಲಿಲ್ಲ. ತಮ್ಮ ಸೈನ್ಯದವರು ಚೆದರದೆ ಒಟ್ಟಾಗಿ ನಿಂತು ಕಾದಾಡುತ್ತಿದ್ದ ಕೊನೆಯ ನಿಮಿಷದತನಕ ತಾನೂ ಅವರ ಮುನ್ನಣಿಯಲ್ಲೇ ನಿಂತು ಅವರನ್ನು ಮುನ್ನಡೆಯಿಸಿದನು. ಕಡೆಗೆ, ಸೋತು ಸೆರೆಸಿಕ್ಕಿದಾಗ ಅವನ ಮೈಮೇಲೆ ಒಂಬತ್ತು ಗಾಯಗಳಿದ್ದುವಂತೆ. ಪೌರವನ ದೇಶಭಕ್ತಿಯನ್ನೂ ಧೈರ್ಯವನ್ನೂ ಕಂಡು ಬೆರಗಾದ ಅಲೆಕ್ಸಾಂಡರನು " ನನ್ನನ್ನು ರಾಜನಂತೆ ಗೌರವಿಸಬೇಕು " ಎಂಬ ಅವನ ಬೇಡಿಕೆಯಂತೆಯೇ ರಾಜ್ಯವನ್ನು ಮತ್ತಷ್ಟು ವಿಸ್ತರಿಸಿ ಅವನನ್ನು ತನ್ನ ಮುಖ್ಯ ಸಾಮಂತನನ್ನಾಗಿ ನಿಯಮಿಸಿದನು.

ಅನಂತರ ಅಲೆಕ್ಸಾಂಡರನು ಚೀನಾಬ್ ನದಿಯನ್ನು ದಾಟಿದನು. ಅಲ್ಲಿ ರಾಜನಾಗಿದ್ದ " ಪೌರವ "ನೆಂಬ ಇನ್ನೊಬ್ಬ ದೊರೆ ಸೋತು, ಗಂಗಾತೀರಕ್ಕೆ ಓಡಿಹೋದನು. ಮುಂದೆ ಯವನರು ರಾವಿಯನ್ನೂ ದಾಟಿ ಕೆಲವು ಸ್ವತಂತ್ರ 'ಗಣ' ರಾಷ್ಟ್ರಗಳನ್ನೂ ಅರಸರುಗಳನ್ನೂ ಯುದ್ಧದಲ್ಲಿ ಜಯಿಸಿದರು. ಹೀಗೆಯೇ, ಬೀಯಾಸ್‌ನ ತೀರಕ್ಕೆ ಬಂದಾಗ ಪೂರ್ವದೇಶಗಳ ಪರಿಸ್ಥಿತಿ ಅಲೆಕ್ಸಾಂಡರನಿಗೆ ತಕ್ಕಮಟ್ಟಿಗೆ ತಿಳಿಯಿತು. ಸೌಭೂತಿ, ಶಶಿಗುಪ್ತ, ಸಂಜಯ ಮುಂತಾದ ರಾಜರು ಅವನಿಗೆ ಗಂಗಾತಟದ ಪ್ರಾಚ್ಯರಾಜ್ಯಗಳನ್ನು ಆಗ ಆಳುತ್ತಿದ್ದ ನಂದರಾಜರ ಸೈನ್ಯಬಲವನ್ನೂ ಧನಬಲವನ್ನೂ ವಿಶದಪಡಿಸಿದರು.

ಆಗ್ಗೆ ಎರಡು ಶತಮಾನಗಳಿಂದಲೂ ಕಾಶಿ ಕೋಸಲ ಅಂಗ ವಂಗ ಮುಂತಾದ ಗಂಗಾತಟದ ಪ್ರದೇಶಗಳನ್ನು ಮಗಧರಾಜರು ಕ್ರಮವಾಗಿ ಗೆಲ್ಲುತ್ತಾ ಬಂದಿದ್ದರು. ಜರಾಸಂಧನ ರಾಜಧಾನಿಯೆಂದು ಮಹಾಭಾರತದಲ್ಲಿ ಪ್ರಖ್ಯಾತವಾಗಿರುವ ಗಿರಿವ್ರಜವೇ ಅವರ ರಾಜಧಾನಿಯಾಗಿತ್ತು. ಗೌತಮ ಬುದ್ಧನ ಸಮಕಾಲೀನರಾದ ಬಿಂಬಿಸಾರನೂ ಅಜಾತಶತ್ರುವೂ ಮಗಧ ಸಾಮ್ರಾಜ್ಯವನ್ನು ಉತ್ತಮಸ್ಥಿತಿಗೆ ತಂದರು. ಬಿಂಬಿಸಾರನ ಆಡಳಿತಕ್ಕೊಳ

ಪಟ್ಟು ೮೦,೦೦೦ ಗ್ರಾಮಗಳಿದ್ದುವೆಂದು ಬೌದ್ಧಗ್ರಂಥಗಳು ಹೇಳುತ್ತವೆ. ಅಜಾತಶತ್ರು ಕಾಶಿ ಕೋಸಲಗಳನ್ನೂ ಹದಿನೆಂಟು ಗಣರಾಷ್ಟ್ರಗಳನ್ನೂ ಗೆದ್ದು ತಂದನು. ಅನೇಕ ಶತಮಾನಗಳವರೆಗೂ ಮಗಧರಾಜಧಾನಿಯಾಗಿದ್ದ ಪಾಟಲೀಪುತ್ರ ನಗರವನ್ನು ನಿರ್ಮಿಸಿದವನು ಅಜಾತಶತ್ರು ಮಹಾರಾಜನೇ.

ಅಜಾತಶತ್ರು ಗೌತಮಬುದ್ಧನನ್ನು ಗೌರವಿಸಿ ಅವನ ಉಪದೇಶಕ್ಕೆ ಮನ ಸೋತಿದ್ದನು. ಅವನು ಸಕಲ ರಾಜಮರ್ಯಾದೆಯೊಡನೆ ಬುದ್ಧನಲ್ಲಿಗೆ ಬಂದು ಗುರುವನ್ನು ವಂದಿಸುವ ದೃಶ್ಯವನ್ನು ಭರ್ಹತ್ ಸ್ತೂಪದಲ್ಲಿ ಶಿಲ್ಪಿಗಳು ಚಿತ್ರಿಸಿರುವರು. ಬುದ್ಧನ ಪರಿನಿರ್ವಾಣ ಸಮಾಚಾರವನ್ನು ಕೇಳಿ ಕಂಬನಿಗರೆದು ಅವನು 'ನಾನು ಕ್ಷತ್ರಿಯ; ಭಗವಾನರೂ ಕ್ಷತ್ರಿಯರು. ನನಗೆ ಭಗವಾನರ ಧಾತುವನ್ನು ಸ್ವೀಕರಿಸುವ ಅಧಿಕಾರವಿದೆ' ಎಂದು ಹೇಳಿ ರಾಜಗೃಹದಲ್ಲೇ ರಮಣೀಯವಾದ ಒಂದು ಸ್ತೂಪವನ್ನು ನಿರ್ಮಿಸಿದನಂತೆ. ಬುದ್ಧನ ಶಿಷ್ಯವರ್ಗದವರೆಲ್ಲರೂ ಸಂಘದ ಮೊದಲನೆಯ ಪರಿಷತ್ತನ್ನು ಮಾಡಿದಾಗ ಅವರ ಧರ್ಮಸಂಗೀತಿಗಾಗಿ ಅಜಾತಶತ್ರು ಒಂದು ಮಂದಿರವನ್ನು ಕಟ್ಟಿಸಿಕೊಟ್ಟನಂತೆ. ಅಜಾತಶತ್ರುವಿನ ಮರಣಾನಂತರ ಕೆಲವು ವರ್ಷಗಳ ಮೇಲೆ ಶಿಶುನಾಗ ಅಥವ ಕಾಕವರ್ಣ ಎಂಬವರು ಮಗಧಾಧಿಪತಿಗಳಾದರೆಂದು ಹೇಳುತ್ತಾರೆ. ನಂದರಾಜವಂಶದ ಮೊದಲಿಗನು ಕಾಕವರ್ಣನನ್ನು ಕೊಂದು ಸಿಂಹಾಸನವನ್ನೇರಿದನು. ನವನಂದರಲ್ಲಿ ಕಡೆಯವನಾದ ಮಹಾಪದ್ಮ ಅಥವಾ ಧನನಂದನು ಅಲೆಕ್ಸಾಂಡರನ ಕಾಲದಲ್ಲಿ ಮಗಧವನ್ನಾಳುತ್ತಿದ್ದನು.

ಧನನಂದ ಎಂಬ ಹೆಸರಿಗೆ ಅವನ ಐಶ್ವರ್ಯವೇ ಕಾರಣವಾಗಿತ್ತು. ಅವನು ಗಂಗಾನದಿಯ ತಳದಲ್ಲೇ ನೆಲಮಾಳಿಗೆಗಳನ್ನು ಮಾಡಿ ಅಲ್ಲಿ ೮೦ ಕೋಟಿ ಸುವರ್ಣವನ್ನು ಗೋಪ್ಯವಾಗಿಟ್ಟಿದ್ದನೆಂದು ಪ್ರಜೆಗಳು ಆಡಿಕೊಳ್ಳುತ್ತಿದ್ದರು. ಒಂಬತ್ತು ಶತಮಾನಗಳನಂತರ ಈ ದೇಶಕ್ಕೆ ಬಂದ ಹ್ಯುಯೆನ್‌ತ್ಸಾಂಗ್ ಪಾಟಲೀಪುತ್ರದಲ್ಲಿ ತಾನು ಕಂಡ ಐದು ದೊಡ್ಡ ಕಟ್ಟಡಗಳನ್ನು ಧನನಂದನ ಕೋಶಾಗಾರಗಳೆಂದು ಹೇಳುತ್ತಾನೆ.

ಧನಮದದಿಂದ ಪ್ರಜಾವಿಶ್ವಾಸವನ್ನು ಕಳೆದುಕೊಂಡಿದ್ದ ನಂದರನ್ನು ಸುಲಭದಲ್ಲಿ ಸೋಲಿಸಿಬಿಡಬಹುದೆಂದು ಅವರ ಸಂಬಂಧಿಕನಾದ "ಸಂದ್ರಕೊಟ್ಟಸ್" ಎಂಬ ಯುವಕನೊಬ್ಬನು ಅಲೆಕ್ಸಾಂಡರನ ಕಿವಿಯಲ್ಲುಸುರಿದನಂತೆ. ಇದಕ್ಕಾಗಿಯೇ ಅವನು ಯವನರ ಪಾಳಯಕ್ಕೆ ಬಂದು ಮುಖ್ಯದಂಡನಾಯಕರನ್ನೆಲ್ಲ ನೋಡಿ ಮಾತನಾಡಿದನು. ನಂದರಾಜರು ಅಧಾರ್ಮಿಕರು, ನೀಚ ಕುಲದವರು, ಎಂದು ಮುಂತಾಗಿ ಪುರಾಣಗಳು ದೂಷಿಸುತ್ತವೆ. ಈ

ಅಪವಾದಗಳಿಗೆ ಅಲ್ಪಸ್ವಲ್ಪವಾದರೂ ಆಧಾರವಿದ್ದಿರಲೇಬೇಕು. ನಂದರು ಕಲಿಂಗದೇಶದ ಮೇಲೆ ದಂಡೆತ್ತಿ ಹೋಗಿ, ಪರಮಪವಿತ್ರವೆಂದು ಭಾವಿಸಿ ಜಿನಧರ್ಮದವರು ಪೂಜಿಸುತ್ತಿದ್ದ ಪ್ರತಿಮೆಗಳನ್ನು ಅಲ್ಲಿಂದ ತಮ್ಮ ರಾಜಧಾನಿಗೆ ಸಾಗಿಸಿದರೆಂದು ಮುಂದೆ ಆ ರಾಜ್ಯವನ್ನಾಳಿದ ಖಾರವೇಲನು ಹೇಳುತ್ತಾನೆ. ಆದ್ದರಿಂದ, ನಂದರಾಜರಿಗೆ ಹೆಚ್ಚು ಸೇನಾಬಲವಿದ್ದರೂ, ಅವರಲ್ಲೊಬ್ಬನಾದ ಮಹಾಪದ್ಮನನ್ನು ಪುರಾಣಗಳಲ್ಲಿ ಎರಡನೆಯ ಪರಶುರಾಮ ಎಂದು ಸ್ತೋತ್ರಮಾಡಿದ್ದರೂ, ನಂದಸಾಮ್ರಾಜ್ಯ ಸುಲಭದಲ್ಲೇ ಕುಸಿದು ಬೀಳುವುದೆಂದು ಅನೇಕರು ಅಲೆಕ್ಸಾಂಡರನ್ನು ಹುರಿದುಂಬಿಸಿದರು. "ಸಂಡ್ರಕೊಟ್ಟಸ್" ಎಂಬ ರಾಜಕುಮಾರನು ತನಗೆ ನಂದರಾಜ್ಯದ ಒಳಮರ್ಮಗಳನ್ನೆಲ್ಲಾ ತಿಳಿಸಿ ನೆರವಾಗುವನೆಂದು ಯವನನಾಯಕನು ಹಿಗ್ಗಿದನು.

ಆದರೆ, ಬೀಯಾಸ್ ನದಿಯನ್ನು ದಾಟುವಷ್ಟರಲ್ಲೇ ಯವನಸೈನ್ಯದಲ್ಲಿ ಕೋಲಾಹಲವೆದ್ದಿತು. ಎರಡು ಸಾವಿರ ಮೈಲಿಗಳ ಹಿಂದೆ, ಎಂಟು ಹತ್ತು ತಿಂಗಳ ಪ್ರವಾಸದ ಅಂತರದಲ್ಲಿದ್ದ ತಮ್ಮ ಮಡದಿಮಕ್ಕಳ ನೆನಪು ಸೈನಿಕರಲ್ಲಿ ಬಲವಾಯಿತು. ಪೂರ್ವದಿಗಂತವನ್ನು ಮೆಟ್ಟಿ ನಿಲ್ಲಲು ಹೊರಟ ತಮ್ಮ ನಾಯಕನನ್ನು ಅವರು ದೂಷಿಸಿದರು. ಕೊನೆಯರಿಯದ ಆ ವಿಜಯ ಯಾತ್ರೆಗೆ ಅವರ ಉತ್ಸಾಹ ಕುಂದಿತು. ಪ್ಲೂಟಾರ್ಕನು ಹೇಳಿರುವಂತೆ "ಗಂಗಾನದಿಯ ಕಡೆಗೆ ಮುನ್ನುಗ್ಗಿ" ಎಂದು ಅಲೆಕ್ಸಾಂಡರನು ಆಜ್ಞಾಪಿಸಿದಾಗ ಇಡೀ ಸೈನ್ಯ ಮೊಂಡುಹಿಡಿದು ಕಾಲೂರಿ ನಿಂತುಬಿಟ್ಟಿತು. ಅದರ ಅಗಲ ಎರಡೂವರೆ ಮೈಲಿಗಳೆಂದೂ, ಆಳ ಆರುನೂರು ಅಡಿಗಳೆಂದೂ ಕೇಳಿ ಯವನರು ಸ್ತಬ್ಧರಾದರು. "ಪೌರವನ ಸೈನ್ಯಕ್ಕಿಂತಲೂ ಹೆಚ್ಚಿನ ಬಲವೊಂದು ಗಂಗಾನದಿಯ ಆಚೆ ದಡದಲ್ಲಿ ನೆರೆದು ನಿಂತಿದೆ" ಎಂಬ ಸುದ್ದಿಯೂ ಬಂತು. ೬,೦೦೦ ರಣಗಜಗಳು, ೮೦,೦೦೦ ಅಶ್ವಗಳು, ೮,೦೦೦ ರಥಗಳು, ೨ ಲಕ್ಷ ಪದಾತಿಗಳ ಸಮೇತ ನಂದರು ಯುದ್ಧಸನ್ನದ್ಧರಾಗಿರುವರೆಂಬ ವಾರ್ತೆ ಪಾಳಯದಲ್ಲೆಲ್ಲ ಅಲ್ಲೋಲಕಲ್ಲೋಲವನ್ನೆಬ್ಬಿಸಿತು. ಅಲ್ಲದೆ, ಯವನದೇಶದಿಂದ ಮುಂದೆ ಬರುತ್ತಾ ಬರುತ್ತಾ ಅಲೆಕ್ಸಾಂಡರನ ಒಲವೂ ಕೃಪಾಕಟಾಕ್ಷವೂ ಹೆಚ್ಚುಹೆಚ್ಚಾಗಿ ಏಷ್ಯಾ ಜನಾಂಗದವರ ಮೇಲೆಯೇ ಬೀಳಲಾರಂಭಿಸಿತ್ತು. ಅವನು ಏಷ್ಯಾದವರ ನಡೆನುಡಿಗಳನ್ನೇ ಮೆಚ್ಚಿ, ಏಷ್ಯಾದ ಆಸ್ಥಾನಗಳಂತೆಯೇ ತನ್ನ ಆಸ್ಥಾನವನ್ನೂ ಅಳವಡಿಸತೊಡಗಿದ್ದನು. ಇದರಿಂದಾಗಿ ಯವನನಾಯಕರನೇಕರಿಗೆ ತುಂಬಾ ಅಸಮಾಧಾನವುಂಟಾಯಿತು. ಹೀಗೆ ಮುಂಬರಿಯುತ್ತಾ

ಹೋದರೆ, ಅಲೆಕ್ಸಾಂಡರನು ಸಂಪೂರ್ಣವಾಗಿ ಯವನ ಪದ್ಧತಿಗಳನ್ನೇ ತ್ಯಜಿಸು ವನು ಎಂಬ ಭೀತಿ ಅವರಲ್ಲಿ ಅಂಕುರಿಸಿತು.

ಈ ಎಲ್ಲ ಕಾರಣಗಳಿಂದಲೂ ಯವನಸೈನಿಕರು ಕೆರಳಿದರು. ಪಾಳೆಯ ದಲ್ಲಿ ಅಲೆಕ್ಸಾಂಡರಿಂದಲೂ ಬಿಡಿಸಲಸಾಧ್ಯವಾದ ಒಂದು ಬಿಕ್ಕಟ್ಟುಂಟಾ ಯಿತು. ಅವನ ಆಜ್ಞೆಯಂತೆ ಪೂರ್ವಕ್ಕೆ ಮುನ್ನುಗ್ಗಲು ತಮ್ಮಿಂದ ಸಾಧ್ಯ ವಿಲ್ಲವೆಂದು ಅವರು ಹಠಹಿಡಿದರು. ಹೀಗೆ ತನ್ನ ಆಪ್ತರಲ್ಲೇ ತಲೆದೋರಿದ ಅವಿಧೇಯತೆಗಾಗಿ ಅವನು ಮನನೊಂದನು. ಮೂರು ದಿನಗಳ ತನಕ ತನ್ನ ಬಿಡಾರದೊಳಗೆ ಒಬ್ಬನೇ ಕುಳಿತು ಅವನು ಕೊರಗಿದನಂತೆ. ಕಡೆಗೆ ತನಗಾದ ತೇಜೋವಧೆಯನ್ನು ನುಂಗಿಕೊಂಡು ಸೈನಿಕರ ಮಾತಿಗೆ ಸೈ ಎಂದು, ಹಿಂತಿರುಗಲು ಅನುಮತಿ ಇತ್ತನು. ಸಂದ್ರಕೊಟ್ಟಸ್ಸನನ್ನು ಕೈ ಬಿಟ್ಟನು.

ಸಾವಿರಾರು ಹಡಗುಗಳನ್ನು ಶೇಖರಿಸಿ ಸಿಂಧೂನದಿಯ ಮೇಲೆ ಸಮುದ್ರ ತೀರದ ಕಡೆ ಹೊರಟನು. ದಾರಿಯಲ್ಲಿ ಮಾಳವರು ಕ್ಷುದ್ರಕರು ಅರ್ಜುನಾಯರು ಶಿಬಿಯರು ಅಂಬಷ್ಠರು ಮೂಷಿಕರು ಮೊದಲಾದ " ಸಂಘ "ರಾಜ್ಯಗಳನ್ನೆದುರಿಸಿ ಅವರಿಂದ ಆದರಾತಿಥ್ಯಗಳನ್ನೂ ಕಪ್ಪಕಾಣಿಕೆಗಳನ್ನೂ ತೆಗೆದುಕೊಂಡನು. ಸಿಂಧೂನದಿಯ ಮುಖಜಭೂಮಿಯವರೆಗೂ ಹೋಗಿ, ಸಮುದ್ರತೀರದಲ್ಲಿದ್ದ ಪಟಲ ಎಂಬ ನಗರವನ್ನು ವಶಪಡಿಸಿಕೊಂಡು ಬಲಪಡಿಸಿದನು. ಅನಂತರ ತನ್ನ ಸೈನ್ಯವನ್ನು ಇಬ್ಭಾಗಮಾಡಿ ಒಂದನ್ನು ಸಮುದ್ರಮಾರ್ಗವಾಗಿ ಫಾರ್ಸಿ ಕೊಲ್ಲಿಗೆ ಕಳುಹಿಸಿದನು. ಮತ್ತೊಂದನ್ನು ತನ್ನ ನೇತೃತ್ವದಲ್ಲಿ ಈಗಿನ ಬೆಲೂಚಿಸ್ತಾನದ ಮೂಲಕ ಮೆಸೊಪೊಟೇಮಿಯಾ ಪ್ರಾಂತಕ್ಕೆ ಕರೆದುಕೊಂಡು ಅಲೆಕ್ಸಾಂಡರನು ಹಿಂದೂಸ್ತಾನದಿಂದ ತೆರಳಿದನು.

ಅಂತೂ ಅಲೆಕ್ಸಾಂಡರನ ದಿಗ್ವಿಜಯದ ಫಲವಾಗಿ ಈಗಿನ ಸಿಂಧ್, ಪಂಜಾಬ್ ಪ್ರಾಂತಗಳನ್ನು ಯವನರು ಗೆದ್ದಹಾಗಾಯಿತು. ಇತರ ಕೆಲವು ಪ್ರದೇಶಗಳ ರಾಜರು ಅವನ ಆಶ್ರಿತರಾದರು. ಸಿಂಧ್‌ನಲ್ಲಿ ಪೈಥಾನ್ ಎಂಬ ಯವನಕ್ಷತ್ರಪನನ್ನೂ, ಪಂಜಾಬ್‌ನಲ್ಲಿ ಪೌರವನನ್ನೂ, ಕಾಶ್ಮೀರದಲ್ಲಿ ಅಭಿಸಾರ ಎಂಬ ಸಾಮಂತನನ್ನೂ ತಕ್ಷಶಿಲೆಯಲ್ಲಿ ಫಿಲಿಪ್ ಎಂಬ ಯವನನಾಯಕ ನನ್ನೂ ಅಫ್‌ಗಾನಿಸ್ತಾನದಲ್ಲಿ ತನ್ನ ಮಾವ ಅಕ್ಸಿಯಾರ್ಟಿಸ್ ಎಂಬವನನ್ನೂ ಯವನ ಸಾಮ್ರಾಜ್ಯದ ರಕ್ಷಣೆಗಾಗಿ ಅಲೆಕ್ಸಾಂಡರನು ನಿಯಮಿಸಿದನು. ಆದರೆ, ಅವನು ಹಿಂದೂಸ್ತಾನಕ್ಕೆ ಬೆನ್ನುತೋರಿಸಿದ ಕೂಡಲೇ ಈ ವ್ಯವಸ್ಥೆ ಸಡಿಲವಾಯಿತು. ತಕ್ಷಶಿಲಾನಗರದ ಪ್ರಜೆಗಳು ದಂಗೆ ಎದ್ದು ಫಿಲಿಪ್ ಎಂಬ ಕ್ಷತ್ರಪನನ್ನು ಹಿಡಿದು ಹಿಂಸಿಸಿ ಕೊಂದರು. ಹಿಂದೂಸ್ತಾನದ ಗಡಿಯಿಂದಾ

ಚೆಗೆ ಬಹುದೂರ ಹೋಗುವ ಮುನ್ನ ಈ ಕರಾಳ ಸುದ್ದಿ ಅಲೆಕ್ಸಾಂಡರನ ಕಿವಿಗೆ ಬಡಿಯಿತು. ಆದರೂ, ಅವನು ಪ್ರತೀಕಾರ ಮಾಡಲು ಶಕ್ತನಾಗಿರಲಿಲ್ಲ. ಕೂಡಲೇ ಯವನ ಶಿಬಿರಗಳನ್ನೆಲ್ಲಾ ಭಾರತೀಯರು ಬಳಸಿದರು. ಸಿಂಧ್ ಪ್ರಾಂತದ ಕ್ಷತ್ರಪನನ್ನು ಅಲೆಕ್ಸಾಂಡರನು ವಾಯವ್ಯಪ್ರಾಂತಕ್ಕೆ ವರ್ಗಾಯಿಸಿದನು. ಆದರೂ ಪರಿಸ್ಥಿತಿ ಉತ್ತಮಗೊಳ್ಳಲಿಲ್ಲ. ಹಿಂದೂಸ್ತಾನವನ್ನು ಬಿಟ್ಟ ಎರಡನೆಯ ವರ್ಷದಲ್ಲಿ ಅಲೆಕ್ಸಾಂಡರನು ಕೇವಲ ತನ್ನ ೩೨ನೆಯ ವಯಸ್ಸಿನಲ್ಲೇ ಕಾಲವಶನಾದನು. ಪ್ರಪಂಚವನ್ನೇ ಬೆರಗುಮಾಡಿದ ಅವನ ಶಕ್ತಿ ಸಾಹಸಗಳು ನಂದಿದುವು. ಅವನ ಆಪ್ತ ಸೇನಾಪತಿಗಳೂ ನಚ್ಚಿನ ಸಚಿವರೂ ತಮತಮಗೆ ಬೇಕಾದ ಪ್ರಾಂತಗಳನ್ನು ಬೇಗ ಬೇಗ ಕಬಳಿಸಿಕೊಳ್ಳಲು ಪರದಾಡುತ್ತಾ ಗುಲ್ಲೆಬ್ಬಿಸಿದರು. "ಹಿಂದು"ದೇಶದಲ್ಲಿದ್ದ ಯವನಕ್ಷತ್ರಪರಲ್ಲಿ ಒಳಜಗಳಗಳು ಮೊಳೆತುವು. ಬಿರುಗಾಳಿಯಂತೆ ನಾಲ್ಕುಕಡೆಗಳಿಂದಲೂ ಬೀಸಿ ಬರುತ್ತಿದ್ದ ಪ್ರಜೆಗಳ ಆಕ್ರೋಶಕ್ಕೆ ಹೆದರಿ ಯವನನಾಯಕರು ತಲೆತಪ್ಪಿಸಿಕೊಂಡು ಓಡಿದರು.

ಆಗಿನ ವಿಪ್ಲವಕ್ಕೆ "ಸಂದ್ರಕೊಟ್ಟಸ್" ಎಂಬ ಭಾರತೀಯ ನಾಯಕ ಬಹುಮಟ್ಟಿಗೆ ಕಾರಣನಾಗಿದ್ದನೆಂದು ತೋರುತ್ತದೆ. 'ಸಂದ್ರಕೊಟ್ಟಸ್' ಎಂದು ಯವನರು ಹೇಳುವುದು ಮೌರ್ಯವಂಶಸ್ಥಾಪಕನಾದ ಚಂದ್ರಗುಪ್ತನನ್ನೇ! ದಾಸ್ಯಮನೋಭಾವವನ್ನು ಹಳಿದು ಪರಕೀಯರ ಆಳಿಕೆಯನ್ನು ಕಿತ್ತೊಗೆದು ಸ್ವಾತಂತ್ರ್ಯವನ್ನು ಸ್ಥಾಪಿಸಿದ್ದು ಸಂದ್ರಕೊಟ್ಟಸ್‌ನ ನಾಯಕತ್ವದಲ್ಲೇ ಎಂದು ಜಸ್ಟಿನ್ ಎಂಬ ಪ್ರಾಚೀನ ಯವನಚರಿತ್ರಕಾರನು ಬರೆದಿರುತ್ತಾನೆ. ಮುದ್ರಾರಾಕ್ಷಸ ನಾಟಕದಲ್ಲಿ "ಮ್ಲೇಚ್ಛೈರುದ್ವಿಜ್ಯಮಾನಾ ಭುಜಯುಗಮಧುನಾ ಸಂಸ್ಕೃತಾ ರಾಜಮೂರ್ತೇಃ" ಎಂದು ವಿಶಾಖದತ್ತನು ಚಂದ್ರಗುಪ್ತನನ್ನು ಹೊಗಳಿದ್ದಾನೆ. ಯವನರ ಮೇಲೆ ದಾಳಿ ನಡೆಸಲು ಚಂದ್ರಗುಪ್ತನು ಹೊರಟಾಗ ಕೆಲವು ಶುಭಶಕುನಗಳಾದುವೆಂದೂ ಅವುಗಳಿಗೆ ಮರುಳಾಗಿ ಜನರು ಅವನನ್ನನುಸರಿಸಿದರೆಂದೂ ಯವನ ಚರಿತ್ರಕಾರರು ಹೇಳುತ್ತಾರೆ. ಮದಗಜವೊಂದು ಅಬ್ಬರಿಸುತ್ತಾ ಓಡಿಬಂದು ಚಂದ್ರಗುಪ್ತನನ್ನು ಕಂಡಕೂಡಲೇ ಶಾಂತವಾಗಿ ಅವನನ್ನು ಸೊಂಡಿಲಿಂದ ಹಿಡಿದೆತ್ತಿ ಬೆನ್ನಮೇಲೆ ಕೂರಿಸಿಕೊಂಡು ರಣರಂಗಕ್ಕೆ ನುಗ್ಗಿತಂತೆ. ಇಂತಹ ಹಲವು ಕತೆಗಳನ್ನು ಯವನರು ತಮ್ಮ ಚರಿತ್ರೆಗಳಲ್ಲಿ ಉಲ್ಲೇಖಿಸಿರುವುದನ್ನು ನೋಡಿದರೆ, ಅವರಿಗೆ ಚಂದ್ರಗುಪ್ತನ ಸಾಹಸಪರಾಕ್ರಮಗಳಲ್ಲಿ ಇದ್ದ ಆಶ್ಚರ್ಯಪೂರಿತವಾದ ಭಯವೆಷ್ಟೆಂಬುದು ಗೊತ್ತಾಗುತ್ತದೆ.

ಚಂದ್ರಗುಪ್ತನನ್ನು ಮೌರ್ಯಪುತ್ರನೆಂದೂ, ನಂದಾನ್ವಯನೆಂದೂ ವಿಶಾಖ ದತ್ತನು ಹೇಳುತ್ತಾನೆ. ಮುದ್ರಾರಾಕ್ಷಸದ ವ್ಯಾಖ್ಯಾನಕಾರರು ಚಂದ್ರಗುಪ್ತನ ವಂಶವನ್ನು ಪ್ರತಿಪಾದಿಸುತ್ತಾ, ಸರ್ವಾರ್ಥಸಿದ್ಧಿ ಎಂಬ ನಂದರಾಜನು ಮುರಾ ಎಂಬ ಶೂದ್ರಹೆಂಗಸನ್ನು ಮದುವೆಯಾಗಿದ್ದನೆಂದೂ ಆತನ ಹಿರಿಯಮಗನಿಗೆ ಮೌರ್ಯ ಎಂಬ ಹೆಸರಿತ್ತೆಂದೂ ಆತನ ಮಗನೇ ಚಂದ್ರಗುಪ್ತ ಎಂದೂ ಹೇಳುತ್ತಾರೆ. ಆದರೆ, ಬೌದ್ಧಗ್ರಂಥಗಳಲ್ಲಿ ಮೌರ್ಯರನ್ನು ಕ್ಷತ್ರಿಯಕುಲದವ ರೆಂದೇ ಉದ್ದಕ್ಕೂ ವಿವರಿಸುತ್ತಾರೆ. ಮೌರ್ಯರು ಎಂಬ ಕ್ಷತ್ರಿಯರು ಗೌತಮ ಬುದ್ಧನ ಕಾಲದಲ್ಲಿ ನೇಪಾಳದ ದಕ್ಷಿಣಭಾಗದಲ್ಲಿ ಸ್ವತಂತ್ರರಾಗಿದ್ದರು. ಪಿಪ್ಪಲಿವನ ಎಂಬುದೇ ಅವರ ಮುಖ್ಯನಗರವಾಗಿತ್ತು. ಕೆಲವು ವರ್ಷ ಗಳಲ್ಲೇ ಮೌರ್ಯರನ್ನು ಮಗಧದೇಶದ ಬಿಂಬಿಸಾರನು ಯುದ್ಧದಲ್ಲಿ ಸೋಲಿಸಿ ದನು. ಅವರು ಮಗಧಸಾಮ್ರಾಜ್ಯದ ಪ್ರಜಾಸಮೂಹದಲ್ಲಿ ಲೀನವಾದರು. ನಂದರಾಜರ ಆಡಳಿತದಿಂದ ನೊಂದ ಪ್ರಜೆಗಳು ಮೌರ್ಯವೀರನಾದ ಚಂದ್ರ ಗುಪ್ತನನ್ನು ಮರೆಹೊಕ್ಕರು. ಕಡೆಯ ನಂದನಾದ ಧನನಂದನು ಹಣದಾಸೆ ಯಿಂದ ವಿಧವಿಧವಾದ ತೆರಿಗೆಗಳನ್ನು ವಿಧಿಸಿ ಮರಗಳಮೇಲೂ ಕಲ್ಲಿನ ಮೇಲೂ ಕಂದಾಯ ಹೊರಿಸಿ ಕೋಶವನ್ನು ತುಂಬಿಸಿದನೆಂದು "ಮಹಾವಂಶ"ದಲ್ಲಿ ಹೇಳಿದೆ. ಆದ್ದರಿಂದ, ದೇಶದಲ್ಲೆಲ್ಲ ಕ್ರಾಂತಿಯ ತರಂಗಗಳೆದ್ದುವು. ಈ ಸನ್ನಿ ವೇಶವನ್ನು ತನ್ನ ಏಳಿಗೆಗಾಗಿಯೂ ಪ್ರಜೆಗಳ ಕ್ಷೇಮಕ್ಕಾಗಿಯೂ ಉಪಯೋ ಗಿಸಿಕೊಳ್ಳುವ ಚತುರತೆ ಚಂದ್ರಗುಪ್ತನಿಗಿತ್ತು.

ಚಂದ್ರಗುಪ್ತನು ಮೊದಲು ಮಗಧರಾಜ್ಯವನ್ನು ಗೆದ್ದು ಅನಂತರ ಯವನ ರನ್ನು ಸೋಲಿಸಿದನೋ ಅಥವಾ ಯವನರ ಮೇಲೆ ದಂಡೆತ್ತಿಹೋಗಿ ವಿಜಯಿ ಯಾದ್ದರಿಂದ 'ದೇಶೋದ್ಧಾರಕ' 'ಧರ್ಮೋದ್ಧಾರಕ' ಎಂಬ ಕೀರ್ತಿಯನ್ನು ಪಡೆದು ತನ್ಮೂಲಕ ನಂದರನ್ನು ಸೋಲಿಸಿದನೋ ಹೇಳುವುದು ಕಷ್ಟ. ಬಹುಶಃ ಯವನರ ಪಾಳಯಕ್ಕೆ ಬಂದು ಅಲೆಕ್ಸಾಂಡರನ್ನು ಕಾಣುವ ಮೊದಲೇ ಅವನು ಒಂದು ಸಲ ಮಗಧವನ್ನು ಗೆಲ್ಲಲು ಹವಣಿಸಿರಬಹುದು. 'ಮಹಾ ವಂಶಟೀಕೆ'ಯಲ್ಲಿ ಕಾಣಬರುವ ಆಗಿನ ಕಾಲದ ಒಂದು ಲೋಕೋಕ್ತಿಯಿಂದ ನಾವು ಕೆಲವು ವಿಷಯಗಳನ್ನು ಊಹಿಸಬಹುದಾಗಿದೆ. ತಾನು ಕೊಟ್ಟ ರೊಟ್ಟಿಯನ್ನು ಯುವಕನೊಬ್ಬನು ತಿಂದ ರೀತಿಯನ್ನು ಕಂಡು ರೇಗಿದ ಮುದುಕಿಯೊಬ್ಬಳು, "ತಪ್ಪು! ತಪ್ಪು! ಚಂದ್ರಗುಪ್ತನ ರಾಜ್ಯ ಸಂಪಾದನೆಯ ತಂತ್ರದ ಹಾಗಿದೆ ನಿನ್ನ ರೀತಿ!" ಎಂದಳಂತೆ. ಆಗ ಯುವಕನು ಬೆರಗಾಗಿ 'ಆ ತಂತ್ರದಲ್ಲಿ ತಪ್ಪೇನು' ಎಂದು ಕೇಳಿದನಂತೆ. "ತಪ್ಪೇ? ಅವನು ನೆಟ್ಟಗೆ

ನಡುವಣ ಪ್ರಾಂತವನ್ನೇ ಆಕ್ರಮಿಸಿ ಅಪಜಯಹೊಂದಿದ. ಮೊದಮೊದಲು ಸುತ್ತಣ ಅಂಚನ್ನೆಲ್ಲ ಕೈವಶ ಮಾಡಿಕೊಂಡು ಅನಂತರ ಮಗಧ ರಾಜಧಾನಿಯ ಕಡೆಗೆ ನುಗ್ಗಬೇಕಾಯಿತು. ನೀನೂ ಹಾಗೆಯೇ ಮಾಡು!" ಎಂದಳಂತೆ. ಆ ಯುವಕನೇ ಚಂದ್ರಗುಪ್ತ! ಮುದುಕಿಯ ಉಪದೇಶದಂತೆ ಅವನು ತನ್ನ ಯುದ್ಧಕ್ರಮವನ್ನು ಪರಿಷ್ಕರಿಸಿ ಜಯವನ್ನು ಪಡೆದನು. ಈ ಕಥೆಯನ್ನು ನಾವು ಅಲ್ಲಗಳೆಯುವ ಹಾಗಿಲ್ಲ.

ಮುದ್ರಾರಾಕ್ಷಸ ನಾಟಕದಲ್ಲಿ ಚಾಣಕ್ಯನ ತಂತ್ರಶಕ್ತಿಯೂ ಪರ್ವತ ರಾಜನ ಸೈನ್ಯಬಲವೂ ಚಂದ್ರಗುಪ್ತನಿಗೆ ದೊರಕಿದುವೆಂದು ಹೇಳಿದೆ. ಚಾಣಕ್ಯನು ತಕ್ಷಶಿಲಾ ನಗರದಲ್ಲಿ ಸಾವಿರಾರು ಶಿಷ್ಯರೊಂದಿಗೆ ವಿದ್ಯಾಪೀಠದಲ್ಲಿದ್ದನೆಂದು ಐತಿಹ್ಯವಿದೆ. ಪರ್ವತರಾಜನ ಸಹಾಯವನ್ನು ಅದೇ ಪ್ರಾಂತದಲ್ಲೇ ಚಂದ್ರಗುಪ್ತನು ಸಂಪಾದಿಸಿಕೊಂಡಿರಬೇಕು. ನಂದರಾಜರ ಮೇಲೆ ಕಾರಣಾಂತರದಿಂದ ಕೋಪಗೊಂಡ ಚಾಣಕ್ಯನು ಅವರನ್ನು ಸಿಂಹಾಸನದಿಂದ ಕೆಳಕ್ಕೆ ತಳ್ಳಿ ಚಂದ್ರಗುಪ್ತನಿಗೆ ಪಟ್ಟಕಟ್ಟಿ ಬಹುಕಾಲದಿಂದಲೂ ಅಮಾತ್ಯನಾಗಿದ್ದ ರಾಕ್ಷಸನನ್ನೇ ಅವನ ಮಂತ್ರಿಯಾಗಿರಿಸಿಕೊಟ್ಟನು ಎಂಬ ಕಥೆ ನಮ್ಮ ದೇಶದಲ್ಲಿ ಪೂರ್ವದಿಂದಲೂ ಜನಜನಿತವಾಗಿದೆ. ಅದನ್ನೇ ಮೂಲವಾಗಿಟ್ಟುಕೊಂಡು ವಿಶಾಖದತ್ತನು ಚಾಣಕ್ಯನ ರಾಜತಂತ್ರ ಸರಣಿಯನ್ನೂ ರಾಕ್ಷಸನ ಸುತ್ತ ಅವನು ರಚಿಸಿದ ತಂತ್ರವ್ಯೂಹವನ್ನೂ ಬಹು ಚೆನ್ನಾಗಿ ಚಿತ್ರಿಸಿರುವನು. ಈ ನಾಟಕದಲ್ಲಿನ ಸನ್ನಿವೇಶಗಳೆಲ್ಲವೂ ಸಾಕ್ಷಾತ್ತಾಗಿ ನಡೆದುವೆಂದು ಹೇಳುವುದು ಸರಿಯಲ್ಲವಾದರೂ, ದೇಶದಲ್ಲಿ ಯಾವುದೋ ಒಂದು ತೆರನ ರಾಜಕೀಯ ಹಾಗೂ ಧಾರ್ಮಿಕ ಆಂದೋಳನ ಎದ್ದು, ಚಂದ್ರಗುಪ್ತಮೌರ್ಯ ಎಂಬ ಜನನಾಯಕನಿಗೆ ವೈದಿಕಧರ್ಮದಲ್ಲಿ ನಿಶ್ಚಲಭಕ್ತಿ ಇರುವವರ ಸಹಾಯವೂ ಇತರ ಕ್ಷತ್ರಿಯರಾಜರ ಸಹಕಾರವೂ ಲಭಿಸಿ, ಹಿಂದಿನ ರಾಜವಂಶ ಕುಸಿದುಬಿದ್ದು ಮೌರ್ಯರೇ ರಾಜರಾದರೆಂಬುದು ಸಿದ್ಧ. ವಾಯುವ್ಯಗಡಿಯಾಚೆಯಿಂದ ಯವನರ ದಂಡಯಾತ್ರೆ ಮತ್ತೊಮ್ಮೆ ಬರುವುದರೊಳಗಾಗಿ ತಮ್ಮತಮ್ಮೊಳಗಿನ ಕಿಲುಬುಗಳನ್ನು ಆದಷ್ಟು ಬೇಗ ಮರೆತು ಇಡಿಯ ಉತ್ತರಾಪಥ ಒಂದಾಗಿ ಮುಂದಾಗಿ ನಿಲ್ಲಬೇಕೆಂಬ ಉತ್ಸಾಹವೂ ಆತುರವೂ ಚಂದ್ರಗುಪ್ತನ ವಿಜಯಕ್ಕೆ ಕಾರಣಗಳಾಗಿರಬಹುದು.

ಅಂತು, ಕ್ರಿ.ಪೂ. ೩೦೬ ರಲ್ಲಿ ಆ ದಂಡಯಾತ್ರೆ ಹಿಂದೂಸ್ತಾನಕ್ಕೆ ಬಂತೇ ಬಂತು! ಅಲೆಕ್ಸಾಂಡರನ ಸೇನಾಪತಿಗಳಲ್ಲಿ "ವಿಜಯ" ಎಂಬ ಬಿರುದನ್ನು ಹೊಂದಿದ್ದ ಸೆಲ್ಯೂಕಸ್ ಇತರ ದಂಡನಾಯಕರಿಗಿಂತ ಖ್ಯಾತಿ

ವಂತನಾಗಿದ್ದನು. ತನ್ನ ಸ್ವಾಮಿಯ ಅಕಾಲಮರಣದಿಂದ ಸಾಮ್ರಾಜ್ಯ ದಲ್ಲೆಲ್ಲ ಹಾಹಾಕಾರವೆದ್ದಾಗ ಸೆಲ್ಯೂಕಸ್ಸನು ಮೆಸೊಪೊಟೇಮಿಯಾದ ಬೇಬಿಲನ್ ನಗರವನ್ನು ಸ್ವಾಧೀನಪಡಿಸಿಕೊಂಡು ಅಲ್ಲಿಂದ ಪೂರ್ವದೇಶಗಳ ಕಡೆಗೆ ದಂಡೆತ್ತಿ ಬಂದನು. ಹಿಂದೆ ಅಲೆಕ್ಸಾಂಡರನಿಗೆ ಶಿರಬಾಗಿದ್ದ ಅನೇಕ ಪ್ರದೇಶಗಳನ್ನು ಅವನು ಮತ್ತೆ ಆಕ್ರಮಿಸಿ ಗೆದ್ದನು. ಬ್ಯಾಕ್ಟ್ರಿಯಾ ದೇಶವನ್ನು ಪ್ರವೇಶಿಸಿ ಅಲ್ಲಿಯ ರಾಜಪದವಿಯನ್ನು ತಾನೇ ಸ್ವೀಕರಿಸಿಕೊಂಡನು. ಆಮೇಲೆ, ಅವನು ಹಿಂದೂಸ್ಥಾನಕ್ಕೂ ಬಂದನು. ಹಿಂದಿನ ಒಡಕು ಬಿರುಕು ಗಳು ಯಾವುವೂ ಇಲ್ಲಿ ಅವನಿಗೆ ಕಾಣಬರಲಿಲ್ಲ. ಐದು ಲಕ್ಷ ಸೈನಿಕರೊಂದಿಗೆ "ಸಂದ್ರಕೊಟ್ಟಸ್"ನು ಅವನನ್ನು ತಡೆದು ಕಾಳಗಕ್ಕೆ ಕರೆದನು! ಸೆಲ್ಯೂಕಸ್ಸಿಗೆ ಕಾಳಗ ರುಚಿಸಲಿಲ್ಲ. ಅವನು ಕರಾರು ಮಾಡಿಕೊಳ್ಳಲು ಕಾತರನಾದನು. ಅಲ್ಲದೆ, ಅಷ್ಟರಲ್ಲೇ ಭೂಮಧ್ಯಸಾಗರತೀರದಲ್ಲಿದ್ದ ತನ್ನ ಅನುಯಾಯಿಗಳನ್ನು ಆನ್‌ಟಿಗೋನಸ್ ಎಂಬ ತನ್ನ ಸಹೋದ್ಯೋಗಿ ಸದೆಬಡಿ ದಾಗ ಅಲ್ಲಿಂದ ಬಂದ ಆರ್ತನಾದ ಅವನ ಕಿವಿ ಮುಟ್ಟಿತು. ಆದ್ದರಿಂದ ಸೆಲ್ಯೂಕ ಸ್ಸನು ಅಲೆಕ್ಸಾಂಡರನ ಸಾಮ್ರಾಜ್ಯಕ್ಕೆ ಸೇರಿದ್ದ ಹಿಂದೂಸ್ಥಾನದ ಎಲ್ಲ ಪ್ರಾಂತಗಳನ್ನೂ ಚಂದ್ರಗುಪ್ತನಿಗೆ ದಾನಮಾಡಿದನು. ಅಲ್ಲದೆ ಯವನಕ್ಷತ್ರಪರ ಅಧಿಕಾರವಲಯವಾಗಿದ್ದ ಈಗಿನ ಆಫ್ಘಾನಿಸ್ಥಾನ ಮತ್ತು ಬೆಲೂಚಿಸ್ಥಾನ ಗಳನ್ನೂ ಕಾಣಿಕೆಯಾಗಿ ಕೊಟ್ಟನು. ಆಗ ಸೆಲ್ಯೂಕಸ್ಸನಿಗೆ ಅತ್ಯಾವಶ್ಯಕವಾಗಿದ್ದ ಐನೂರು ರಣಗಜಗಳನ್ನು ಚಂದ್ರಗುಪ್ತನೂ ಕೊಟ್ಟು ಸನ್ಮಾನಿಸಿದನು. ಸೆಲ್ಯೂಕಸ್ಸನೂ ಚಂದ್ರಗುಪ್ತನೂ ಮುಂದೆ ಸ್ನೇಹದಿಂದಿರಬೇಕೆಂದೂ ಕರಾರಿ ನಲ್ಲಿ ಸೂಚಿತವಾಗಿತ್ತು. ಯವನರ ಮಾತಿನಲ್ಲಿ ಇಂತಹ ನಿಕಟಸ್ನೇಹಕ್ಕೆ "ಕೊಟ್ಟು ಕೊಳ್ಳುವ ಸಂಬಂಧ" ಎಂದು ಹೇಳುವುದು ವಾಡಿಕೆ. ಕರಾರಿನಲ್ಲೂ ಆ ಮಾತನ್ನೇ ಉಪಯೋಗಿಸಿದ್ದರು. ಇದನ್ನು ಓದಿದ ಕೆಲವು ಚರಿತ್ರಕಾರರು ವಾಸ್ತವವಾಗಿಯೂ ಚಂದ್ರಗುಪ್ತನು ಸೆಲ್ಯೂಕಸ್ಸನ ಮಗಳನ್ನೇ ಮದುವೆ ಯಾದನೆಂದೂ ಬಿಂದುಸಾರನು ಆ ಯವನ ರಾಣಿಯ ಮಗನೆಂದೂ ಅಶೋಕನು ಸೆಲ್ಯೂಕಸ್ಸನ ಮೊಮ್ಮಗನ ಮಗನೆಂದೂ ಊಹಿಸುವರು. ಇದು ತೀರ ದೂರದ ಅನುಮಾನ. ಆಕೆ ಯವನ ರಾಣಿಯಲ್ಲದಿದ್ದರೂ ಸಿರಿಯಾ ದೇಶದ ಒಬ್ಬಳು ರಾಜಕುಮಾರಿಯಾಗಿರಬೇಕೆಂಬುದು ಮತ್ತೆ ಕೆಲವರ ಹಟ[1]! ಆದರೆ ಸ್ಟ್ರಾಬೊ ಹೇಳಿರುವ ಮೇಲಿನ ಮಾತಿನ ಪಾರಿಭಾಷಿಕ ಅರ್ಥವನ್ನು ತಿಳಿದುಕೊಂಡರೆ ಇಂತಹ ಊಹಾಪೋಹಗಳಿಗೆ ಬುಡವಿಲ್ಲವೆಂದು ಸ್ಪಷ್ಟವಾಗುತ್ತದೆ.[2]

---

[1] Rawlinson, p. 39. [2] C.H. of I, Vol. I, p. 431.

ಸೆಲ್ಯೂಕಸ್ಸಿಗೂ ಮೌರ್ಯಚಕ್ರವರ್ತಿಗಳಿಗೂ ಆದ ಈ ಸಖ್ಯದ ಫಲವಾಗಿ ಮೆಗಾಸ್ತನೀಸ್ ಮೊದಲಾದ ಯವನ ರಾಯಭಾರಿಗಳು ಪಾಟಲೀಪುತ್ರಕ್ಕೆ ಆಗಾಗ ಬಂದುಹೋದರು. ಮೆಗಾಸ್ತನೀಸನು ಬೆಲೂಚಿಸ್ತಾನದ ಹತ್ತಿರದಲ್ಲಿದ್ದ ಸೈಬರ್ಟಿಯಸ್ ಎಂಬ ಯವನ ದಳಪತಿಯ ಸಂಗಡ ಇದ್ದವನು. ಅಲ್ಲಿಂದ ಅವನು ವಿಶೇಷ ಕೆಲಸಗಳ ಮೇಲೆ ಮಾತ್ರ ಮಗಧರಾಜಧಾನಿಗೆ ಬಂದುಹೋಗುತ್ತಿದ್ದನು. ಗಾಂಧಾರ ಪ್ರಾಂತದ ಮುಖ್ಯನಗರವಾದ ಪುಷ್ಕಲಾವತಿಯಿಂದ ತಕ್ಷಶಿಲಾನಗರ ಹಸ್ತಿನಾಪುರ ಕನ್ಯಾಕುಬ್ಜ ಪ್ರಯಾಗ ಕಾಶಿ ಮೂಲಕವಾಗಿ ಪಾಟಲೀಪುತ್ರದವರೆಗೂ ಇದ್ದ ರಾಜಮಾರ್ಗದ ಮೂಲಕ ಅವನು ಪ್ರಯಾಣ ಮಾಡುತ್ತಿದ್ದನು. ಈ ಮಾರ್ಗದ ಎರಡು ಕಡೆಗಳಲ್ಲೂ ಕಂಡುಬರುವ ಗ್ರಾಮಗಳನ್ನೂ ನಗರಗಳನ್ನೂ ಅಲ್ಲದೆ ಸಾಮ್ರಾಜ್ಯದ ಇತರ ಯಾವ ಭಾಗವನ್ನೂ ಅವನು ಅರಿಯನು. ಇಷ್ಟು ಸಂಕುಚಿತವಾದ ಅನುಭವದ ಆಧಾರದ ಮೇಲೆ ಅವನು ಇಂಡ್ಯನರ ನಡೆನುಡಿಗಳು ಆಚಾರ ವ್ಯವಹಾರಗಳು ಸಾಮಾಜಿಕ ಮತ್ತು ರಾಷ್ಟ್ರೀಯ ಸ್ಥಿತಿಗತಿಗಳು, ಯವನ ದೇಶದವರಿಗೆ ತಿಳಿವಳಿಕೆಯನ್ನೂ ಅಚ್ಚರಿಯನ್ನೂ ಉಂಟುಮಾಡುವ ವಿಶೇಷ ಸಂಗತಿಗಳು, ಅವರ ಕುತೂಹಲವನ್ನು ಕೆರಳಿಸುವ ಹೊಸ ಆಚಾರಗಳು ಪದ್ಧತಿಗಳು,—ಇವುಗಳನ್ನು ಬರೆದಿಟ್ಟನು. ಅನೇಕ ವೇಳೆ ಸ್ವಾರಸ್ಯವನ್ನು ಹೆಚ್ಚಿಸುವ ಉದ್ದೇಶದಿಂದ ಅವನು ವಿಷಯಗಳಿಗೆ ಬಣ್ಣಕಟ್ಟಿ ಮಾತುಗಳಿಗೆ ಖಾರ ಸೇರಿಸಿದ್ದೂ ಉಂಟು. ಆದ್ದರಿಂದಲೇ ಮೆಗಾಸ್ತನೀಸ್ ಎಂದರೆ ಸುಳ್ಳು ಹೇಳುವುದರಲ್ಲಿ ಜಾಣ ಎಂದು ಸ್ಟ್ರಾಬೊ ಹೇಳುವುದು.[1] ಆದ್ದರಿಂದ ಮೆಗಾಸ್ತನೀಸನ ವಿವರಣೆಗಳಿಗೆ ನಾವು ಹೆಚ್ಚು ಬೆಲೆ ಕೊಡುವಹಾಗಿಲ್ಲ. ಅಲ್ಲದೆ ಅವನು ಬರೆದ 'ಇಂಡಿಕ' ಎಂಬ ಗ್ರಂಥದಲ್ಲಿನ ನಾಲ್ಕು ಭಾಗಗಳಲ್ಲಿ ಒಂದೂ ಪೂರ್ತಿಯಾಗಿ ನಮಗೆ ದೊರೆತಿಲ್ಲ. ಅವನ ಅನಂತರ ಪೂರ್ವದೇಶಗಳ ವೃತ್ತಾಂತವನ್ನು ಬರೆದ ಯವನರೂ ಅಲೆಕ್ಸಾಂಡರನ ಚರಿತ್ರೆಯನ್ನು ಬರೆದವರೂ ಏಷ್ಯಾಖಂಡದಲ್ಲಿ ಬೀಡುಬಿಟ್ಟ ಯವನರಾಷ್ಟ್ರಗಳ ಆಗುಹೋಗುಗಳನ್ನು ವಿಮರ್ಶಿಸಿದವರೂ, 'ಇಂಡಿಕ'ದಿಂದ ಕೆಲವು ವಾಕ್ಯಗಳನ್ನು ಉದ್ಧರಿಸಿರುವರು; ಅವನ ವಿವರಣೆಗಳನ್ನು ಸಂಕ್ಷೇಪಿಸಿರುವರು. ನೂರಾರು ವರ್ಷಗಳ ಅನಂತರ ಸ್ಟ್ರಾಬೊ, ಪ್ಲೈನಿ ಅರಿಯನ್, ಡಯಡೊರಸ್ ಮುಂತಾದವರು ಹೀಗೆ 'ಇಂಡಿಕ'ದಿಂದ ಆರಿಸಿ ತೆಗೆಯುವಾಗ ಎಷ್ಟು ಗಳಿಸಿದರೋ ಎಷ್ಟು ಉಳಿಸಿದರೋ ಯಾವುದನ್ನು ಸೊಟ್ಟೆಂದು ನೆಟ್ಟಗೆ ಮಾಡಿದರೋ, ಯಾವುದನ್ನು ನಿಜವೆಂದು ಮೋಸಹೋಗಿ

[1] Dikshitar, p. 32.

ಒತ್ತಿ ವಿಸ್ತರಿಸಿದರೋ ಹೇಳುವುದಕ್ಕಾಗುವುದಿಲ್ಲ. ಆದ್ದರಿಂದ ನಮ್ಮ ದೇಶದ ಆಡಳಿತದ ರೀತಿ, ನಮ್ಮ ಜನಗಳ ಗುಣಶೀಲಗಳು, ವರ್ಣಾಶ್ರಮಪದ್ಧತಿ ಇವು ಒಬ್ಬ ಯವನನಿಗೆ ಬಹುಶಃ ಹೇಗೆ ಕಂಡುಬಂದುವು ಎಂದು ತಿಳಿಯಲು ಮಾತ್ರ ಮೆಗಾಸ್ತನೀಸನ ಮಾತನ್ನು ಗಮನಿಸಬಹುದಾಗಿದೆ. ಇತರ ಯಾವೊಂದು ನಿದರ್ಶನದಿಂದಲೂ ಸ್ಪಷ್ಟವಾಗದ ಇಂಥ ಸಂಗತಿಯನ್ನು ಮೆಗಾಸ್ತನೀಸನ ಮಾತೊಂದರಿಂದಲೇ ಸಾಧಿಸುವುದು ಧಾರ್ಷ್ಟ್ಯದ ಕೆಲಸ.

ಚಂದ್ರಗುಪ್ತನ ಆಸ್ಥಾನದ ಪ್ರಭಾವವನ್ನೂ ಅರಮನೆಯ ವೈಭವವನ್ನೂ ಕಂಡು ಮೆಗಾಸ್ತನೀಸನು ಬೆರಗಾದನು. ಅವನ ವಿವರಣೆಗಳಿಗೆ ಮನಸೋತು ಈಲಿಯನ್ ಎಂಬ ಯವನ ಗ್ರಂಥಕರ್ತನು ಹೀಗೆ ಹೇಳುತ್ತಾನೆ: "ಪಾರಸಿಕರು ತಮ್ಮ ಚಕ್ರಾಧಿಪತ್ಯದ ಮುಖ್ಯ ಪಟ್ಟಣಗಳಾದ ಸೂಸ ಮತ್ತು ಎಕ್ಬಟಾನ ದಷ್ಟೇ ಇಣ್ಡಿಯಾ ರಾಜಧಾನಿ ಎಂದು ಹೇಳಿಕೊಳ್ಳುತ್ತಾರೆ. ಆದರೆ ಅದು ಬರಿಯ ದುರಹಂಕಾರದ ಮಾತು. ಸೂಸದ ಸೊಬಗಿಗಿಂತ ಎಕ್ಬಟಾನದ ವೈಭವಕ್ಕಿಂತ ಇಣ್ಡಿಯಾ ರಾಜಧಾನಿಯ ಅಂದವೂ ಬಲವೂ ಮೇಲಾಗಿವೆ. ಇಲ್ಲಿಯ ಉದ್ಯಾನಗಳಲ್ಲಿ ಓಡಾಡುವ ನವಿಲುಗಳು, ಬಹು ವಿಧವಾದ ಪಕ್ಷಿವಿಶೇಷ ಗಳು, ಅಕ್ಕರೆಯಿಂದ ಪೋಷಿಸಿ ಬೆಳೆಸಿದ ವೃಕ್ಷಗಳು, ಜಾಣತನದಿಂದ ಬಗ್ಗಿಸಿ ಹಸುರು ಚಪ್ಪರದಂತೆ ಹಬ್ಬಿಸಿದ ಲತಾಗೃಹಗಳು—ಇವೆಲ್ಲ ಮನಮೋಹಕ ವಾಗಿವೆ. ಅಲ್ಲಲ್ಲಿ ಕೃತಕವಾದ ಸುಂದರ ತಟಾಕಗಳಿವೆ. ಅವುಗಳಲ್ಲಿ ಬಗೆ ಬಗೆಯ ಮೀನುಗಳನ್ನು ಸಾಕಿರುವರು. ಮುಳುಗುವ ಭೀತಿ ಇಲ್ಲದೆ ಈ ತಟಾಕಗಳಲ್ಲಿ ಅರಸುಮಕ್ಕಳು ಮೀನುಗಳನ್ನು ಹಿಡಿಯುವ ನೆವದಿಂದ ದೋಣಿ ಗಳಲ್ಲಿ ಆಟವಾಡುತ್ತಾರೆ." ಸ್ಟ್ರಾಬೊ ಕೂಡ "ದೇಶ ಶಾಂತವಾಗಿರುವಾಗ, ರಾಜನು ಅರಮನೆಯಿಂದ ಹೊರಕ್ಕೆ ಬಿಜಯ ಮಾಡುವುದು ವ್ಯವಹಾರ ಗಳನ್ನು ತೀರ್ಮಾನಿಸುವುದಕ್ಕೂ ಯಾಗಯಜ್ಞಾದಿಗಳನ್ನು ನೋಡುವುದಕ್ಕೂ ಮೃಗಯಾ ವಿಹಾರಕ್ಕೂ ಮಾತ್ರವೇ. ಉತ್ಸವಾದಿಗಳಲ್ಲಿ ರಾಜನ ಮೆರವಣಿಗೆ ಬಹು ವಿಜೃಂಭಣೆಯಿಂದ ನಡೆಯುತ್ತದೆ. ಚಿನ್ನ ಬೆಳ್ಳಿಯ ಒಡವೆಗಳಿಂದಲಂಕೃತ ವಾದ ಅನೇಕ ಆನೆಗಳು, ನಾಲ್ಕು ಕುದುರೆಗಳನ್ನು ಕಟ್ಟಿರುವ ರಥಗಳು, ಜೊತೆ ಜೊತೆಯಾಗಿ ಎತ್ತುಗಳು, ಇವೆಲ್ಲವೂ ಸಾಲಾಗಿ ಮುಂಬರುತ್ತವೆ. ಅವುಗಳ ಹಿಂದೆ ಸೊಗಸಾದ ಉಡುಗೆತೊಡುಗೆಗಳೊಡನೆ ಸಾವಿರಾರು ಸೇವಕರು ನಡೆದು ಬರುವರು. ದೊಡ್ಡ ದೊಡ್ಡ ತಟ್ಟೆಗಳು, ಆರಡಿಯಷ್ಟು ಅಗಲದ ಹರಿವಾಣಗಳು ಪೀಠಗಳು ರತ್ನಖಚಿತವಾದ ಭದ್ರಾಸನಗಳು ಬಟ್ಟಲುಗಳು ಜರಿವಸ್ತ್ರಗಳು ಇವು ಗಳನ್ನು ಅವರು ಹೊತ್ತು ತರುವರು. ಸಿಂಹ ಚಿರತೆ ಕಾಡುಕೋಣ ಮುಂತಾದ

ಅನೇಕ ಕ್ರೂರ ಮೃಗಗಳನ್ನೂ ಬಣ್ಣ ಬಣ್ಣದ ಪಕ್ಷಿಗಳು, ಕಿವಿಗಿಂಪಾಗಿ ಗಾನಮಾಡಬಲ್ಲ ಹೊಸ ಜಾತಿಯ ಪಕ್ಷಿಗಳು, ಇವುಗಳನ್ನೂ ಅವರು ಮೆರವಣಿಗೆಯಲ್ಲಿ ಸಾಲಾಗಿ ತರುವರು. ದೊಡ್ಡ ಎಲೆಗಳುಳ್ಳ ಒಂದು ಮರವನ್ನೇ ನಾಲ್ಕು ಚಕ್ರದ ಬಂಡಿಯೊಂದರ ಮೇಲಿರಿಸಿ ನೂಕುವರು. ಆ ಮರದ ಕೊಂಬೆಗಳಿಂದ ನೂರಾರು ಪಂಜರಗಳು ನೇತಾಡುವುವು. ಅವುಗಳೊಳಗೆ ನಯನ ಮನೋಹರವಾದ ಪಕ್ಷಿಗಳು ಹಾರಾಡುವುವು ; ಕೆಲವು ಪಂಜರಗಳಿಂದ ಕರ್ಣಾನಂದಕರವಾದ ಗಾನ ಕೇಳಿಬರುವುದು."

ಚಂದ್ರಗುಪ್ತನ ಕಾಲದಲ್ಲಿನ ಸ್ಥಿತಿಗಳನ್ನು ತಿಳಿಯಲು ಮೆಗಾಸ್ತನೀಸನಿಂದಲ್ಲದೆ ಕೌಟಿಲ್ಯನ ಅರ್ಥಶಾಸ್ತ್ರದಿಂದಲೂ ತುಂಬಾ ಸಹಾಯವಾಗುತ್ತದೆ. ನಂದರಾಜರನ್ನು ಕೊಂದು ಚಂದ್ರಗುಪ್ತನನ್ನು ಸಿಂಹಾಸನದಲ್ಲಿರಿಸಲು ಕೌಟಿಲ್ಯ ಅಥವಾ ಚಾಣಕ್ಯ ಎಂಬ ಬ್ರಾಹ್ಮಣನು ನೆರವಾದನೆಂದು ವಿಷ್ಣುಪುರಾಣ ಮೊದಲಾದ ಪುರಾಣಗಳಲ್ಲಿ ಹೇಳಿದೆ.[1] ಹಾಗೆಯೇ ಕಾಮಂದಕನ ನೀತಿಸಾರ, ಬಾಣನ ಕಾದಂಬರಿ, ಸೋಮದೇವನ ನೀತಿವಾಕ್ಯಾಮೃತ, ವಿಶಾಖದತ್ತನ ಮುದ್ರಾರಾಕ್ಷಸ, ದಂಡಿಯ ದಶಕುಮಾರಚರಿತ ಎಂಬ ಗ್ರಂಥಗಳಿಂದಲೂ ಕೌಟಲ್ಯ ಕೌಟಿಲ್ಯ ಚಾಣಕ್ಯ ವಿಷ್ಣುಗುಪ್ತ ಎಂಬ ಹೆಸರಿನ ಬ್ರಾಹ್ಮಣನೊಬ್ಬನು ತನ್ನ ರಾಜತಂತ್ರದಿಂದ ಮೌರ್ಯರಿಗೆ ಸಿಂಹಾಸನ ಕೊಡಿಸಿದನೆಂದು ಗೊತ್ತಾಗುತ್ತದೆ. ಸಿಂಹಳದ್ವೀಪದ ಮಹಾವಂಶ ಎಂಬ ಗ್ರಂಥದಲ್ಲಿ ಕೌಟಿಲ್ಯನ ಪ್ರಸ್ತಾಪವಿದೆ. ಆತನು ತಕ್ಷಶಿಲೆಯಲ್ಲಿದ್ದನೆಂದೂ ರಾಜನಿಗೆ ನಾಣ್ಯಗಳಲ್ಲಿನ ಲೋಹವನ್ನು ಕಡಮೆಮಾಡುವುದರಿಂದ ಅಪಾರವಾದ ದ್ರವ್ಯವನ್ನು ಕೂಡಿಸಬಹುದೆಂಬ ಸೂಚನೆ ಇತ್ತನೆಂದೂ ಹೇಳಿದೆ. ಇದನ್ನೆಲ್ಲಾ ಯೋಚಿಸಿದರೆ, ಜನಜನಿತವಾಗಿರುವ "ಚಾಣಕ್ಯನ ತಂತ್ರ" ಎಂಬ ಮಾತಿಗೆ ಐತಿಹಾಸಿಕ ಆಧಾರವಿದೆ ಎಂದು ಗೊತ್ತಾಗುತ್ತದೆ.

ಕೌಟಿಲ್ಯನು ರಚಿಸಿದ ಈ ಅರ್ಥಶಾಸ್ತ್ರವನ್ನು ಇತರ ಶಾಸ್ತ್ರಕಾರರೂ ಕವಿಗಳೂ ಕೊಂಡಾಡುತ್ತಿದ್ದರೂ ಅದರಲ್ಲಿ ಬರುವ ಅಭಿಪ್ರಾಯಗಳನ್ನೂ ಶ್ಲೋಕಗಳನ್ನೂ ತಮ್ಮ ತಮ್ಮ ಗ್ರಂಥಗಳಲ್ಲಿ ಅವರು ಹೇರಳವಾಗಿ ಉದ್ಧರಿಸುತ್ತಿದ್ದರೂ ಬಹುಕಾಲದವರೆಗೆ ಇಡಿಯ ಗ್ರಂಥ ಎಲ್ಲೂ ದೊರೆತಿರಲಿಲ್ಲ. ಕಾಂಚೀಪುರದ ಸಮೀಪದಿಂದ ಸಂಪಾದಿಸಿ ತಂದ ಒಂದು ಓಲೆಗರಿ ಗ್ರಂಥ ಮಾತ್ರ ಮೈಸೂರು ನಗರದ ಪ್ರಾಚ್ಯ ಗ್ರಂಥಾಗಾರದಲ್ಲಿ ಸೇರಿಕೊಂಡಿತ್ತು. ಅದನ್ನು ನೀತಿಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥವೆಂದು ನಂಬಿ ಹಲವಾರು ವರ್ಷಗಳ ಕಾಲ ಮೂಲೆ

[1] Vishnupurana IV, 24.

ಗೊತ್ತಿದ್ದರು. ಕಡೆಗೆ ೧೯೦೫ ರಲ್ಲಿ ಗ್ರಂಥಾಲಯದ ಅಧ್ಯಕ್ಷರಾಗಿದ್ದ ಡಾ|| ಶಾಮಶಾಸ್ತ್ರಿಗಳು ಅದನ್ನು ಬೆಳಕಿಗೆ ತಂದು ಆಂಗ್ಲಭಾಷೆಗೆ ಪರಿವರ್ತಿಸಿ ಜಗದ್ವಿಖ್ಯಾತರಾದರು; ಅರ್ಥಶಾಸ್ತ್ರವಿಶಾರದ ಎಂಬ ಬಿರುದನ್ನು ಪಡೆದರು. ೧೯೦೯ ರಲ್ಲಿ ಅದರ ಮೂಲವನ್ನೂ ೧೯೧೫ ರಲ್ಲಿ ಭಾಷಾಂತರವನ್ನೂ ಪ್ರಕಟಿಸಿ ಮುಗಿಸಿದರು. ೧೯೨೪ ರಲ್ಲಿ ಜಾಲಿ ಮತ್ತು ಷ್ಮಿಟ್ ಎಂಬ ಇಬ್ಬರು ಜರ್ಮನ್ ಪಂಡಿತರು ಪಂಜಾಬ್ ಓರಿಯಂಟಲ್ ಸೀರೀಸ್ ಎಂಬ ಗ್ರಂಥಮಾಲೆಯಲ್ಲಿ ಇನ್ನಿತರ ಹಸ್ತಪ್ರತಿಗಳ ಸಹಾಯವನ್ನೂ ತೆಗೆದುಕೊಂಡು ಅರ್ಥಶಾಸ್ತ್ರವನ್ನು ಪ್ರಕಟಿಸಿದರು. ೧೯೨೪ ರಿಂದ ಮೊದಲುಮಾಡಿ ೧೯೨೬ ರೊಳಗೆ ಕೇರಳದಲ್ಲಿ ಸಿಕ್ಕಿದ ನಾಲ್ಕು ಪ್ರತಿಗಳನ್ನೂ ಪರೀಕ್ಷಿಸಿ ಮಹಾಮಹೋಪಾಧ್ಯಾಯ ಗಣಪತಿಶಾಸ್ತ್ರಿಗಳು ಅರ್ಥಶಾಸ್ತ್ರವನ್ನೂ 'ಶ್ರೀಮೂಲಂ' ಎಂಬ ಹೆಸರಿನಿಂದ ತಾವು ಅದಕ್ಕೆ ಬರೆದ ಸಂಸ್ಕೃತ ವ್ಯಾಖ್ಯಾನವನ್ನೂ ಪ್ರಕಟಿಸಿದರು.

ಮೌರ್ಯವಂಶಪ್ರತಿಷ್ಠಾಪಕನಾದ ಕೌಟಿಲ್ಯನೇ ಈ ಗ್ರಂಥವನ್ನು ಚಂದ್ರಗುಪ್ತನ ಉಪಯೋಗಕ್ಕಾಗಿ ಬರೆದನೆಂಬುದನ್ನು ಈಗ ಸಾಮಾನ್ಯವಾಗಿ ಎಲ್ಲರೂ ಒಪ್ಪುತ್ತಾರೆ.

ಯೇನ ಶಾಸ್ತ್ರಂಚ ಶಸ್ತ್ರಂಚ ನಂದರಾಜಗತಾಚಭೂಃ
ಅಮರ್ಷೇಣೋದ್ಧೃತಾನ್ಯಾಶು ತೇನ ಶಾಸ್ತ್ರಮಿದಂ ಕೃತಂ

ಎಂದು ಅದರಲ್ಲಿ ಹೇಳಿರುವುದು ಸುಳ್ಳಲ್ಲ. ಅದುವರೆಗೂ ದೇಶದಲ್ಲಿ ಪ್ರಚಾರವಾಗಿದ್ದ ಅನೇಕ ಅರ್ಥಶಾಸ್ತ್ರಕಾರರ ರಾಜನೀತಿ ಶಾಸ್ತ್ರಕಾರರ ಅಭಿಪ್ರಾಯಗಳನ್ನು ವಿಮರ್ಶಿಸಿ ಹೊಸ ರಾಜವಂಶಕ್ಕೆ ಹೊಸ ಚೈತನ್ಯವನ್ನು ಕೊಡಲು ಕೌಟಿಲ್ಯನು ತೊಡಗಿದುದರಲ್ಲಿ ಅಸಂಭಾವ್ಯವೇನೂ ಇಲ್ಲ. ಆದರೆ ಅರ್ಥಶಾಸ್ತ್ರದಲ್ಲಿ ಹೇಳಿರುವಂತೆಯೇ ಅಕ್ಷರಶಃ ಆಗಿನ ಕಾಲದಲ್ಲಿ ಕಾನೂನು ಕಟ್ಟಳೆಗಳೂ ಆಡಳಿತದ ವ್ಯವಹಾರಗಳೂ ನಡೆಯುತ್ತಿತ್ತೆಂದು ತಿಳಿಯಲಾಗದು. ಏಕೆಂದರೆ, ಒಬ್ಬ ಮೇಧಾವಿಯ, ಒಬ್ಬ ಪಂಡಿತನ ಲೋಕಾನುಭವ ವಿಚಾರಪರತೆ ಇವುಗಳ ಫಲವಾಗಿ ಅವನಿಗೆ ಯಾವುದು ಚಂದ ಯಾವುದು ಸೂಕ್ತ ಎಂದು ತೋರಿತು ಎಂಬುದನ್ನು ಮಾತ್ರ ಅದರಲ್ಲಿ ನಾವು ಕಾಣಬಹುದು. ಅವುಗಳಲ್ಲಿ ಮೌರ್ಯರಾಜರು ಯಾವುಯಾವುದನ್ನು ಕಾರ್ಯತಃ ಸಾಧಿಸಿದರು, ಯಾವುಯಾವುದು ಆಗಲೇ ಆಚರಣೆಯಲ್ಲಿತ್ತು ಎಂದು ನಿರ್ಧರಿಸುವುದು ಕಷ್ಟ.

ಆದರೆ, 'ಅರ್ಥಶಾಸ್ತ್ರ' ಬರಿಯ ಒಂದು ಗಗನಸದನವಲ್ಲ; ಅದರ ದೃಷ್ಟಿ ಕೇವಲ ವ್ಯಾವಹಾರಿಕದೃಷ್ಟಿ. ಬದುಕನ್ನು ನೇರ್ಪಡಿಸುವುದಕ್ಕೂ ರಾಷ್ಟ್ರದ

ಶಾಂತಿ ಸಂಪತ್ತುಗಳನ್ನು ಅಭಿವೃದ್ಧಿಪಡಿಸುವುದಕ್ಕೂ ಅದರಲ್ಲಿ ಅತ್ಯಮೂಲ್ಯವಾದ ಸಲಹೆಗಳಿವೆ. ಅವುಗಳನ್ನು ನೋಡಿದರೆ ರಾಜ್ಯಸೂತ್ರವನ್ನು ಹಿಡಿದು ನಡೆಸಿದ ಒಬ್ಬ ಕರ್ಮಯೋಗಿಯೇ ಅದನ್ನು ರಚಿಸಿರಬೇಕೆಂದು ಗೊತ್ತಾಗುವುದು. ಚಂದ್ರಗುಪ್ತನಿಗಾಗಿ ಬರೆದ ಈ ಗ್ರಂಥ ಅಶೋಕನಿಗೂ ಮಾದರಿಯಾಗಿದ್ದಿರಬೇಕು. ಏಕೆಂದರೆ ಅಶೋಕನ ಶಾಸನಗಳಲ್ಲಿ ಅರ್ಥವಾಗದೆ ಇದ್ದ ಅನೇಕ ಮಾತುಗಳು ಕೌಟಿಲ್ಯನ ಅರ್ಥಶಾಸ್ತ್ರ ಬೆಳಕಿಗೆ ಬಂದ ಮೇಲೆ ನಮಗೆ ಸ್ಪಷ್ಟವಾಗಿವೆ. ಇದರಿಂದ ಅರ್ಥಶಾಸ್ತ್ರದ ಕಾಲವನ್ನೂ ಅದರ ಗ್ರಂಥಕರ್ತನ ಪ್ರಭಾವವನ್ನೂ ನಾವು ಅರಿತುಕೊಳ್ಳಬಹುದಾಗಿದೆ. ಪ್ರಾದೇಶಿಕ ಮಹಾಮಾತ್ರ ಪುರುಷ ವ್ರಜಭೂಮಿಕ ರಜ್ಜುಕ ನಗರ ವ್ಯವಹಾರಿಕ ಮುಂತಾದ ಅಧಿಕಾರಿಗಳು ಯಾರೆಂದು ಈ ಗ್ರಂಥ ಸಿಕ್ಕುವತನಕ ಖಚಿತವಾಗಿ ಹೇಳಲು ಸಾಧ್ಯವಿರಲಿಲ್ಲ. ಅಷ್ಟಭಾಗ ಪರಿಕ್ಲೇಶ ಪರಿಷತ್ತು ಧರ್ಮವಿಜಯ, ಮುಂತಾದ ಮಾತುಗಳ ಅರ್ಥವ್ಯಾಪ್ತಿಯನ್ನು ಅರ್ಥಶಾಸ್ತ್ರದ ಸಹಾಯದಿಂದಲೇ ನಾವು ಅರಿತುಕೊಳ್ಳಬೇಕಾಗಿದೆ. ಹೀಗೆ ಮೌರ್ಯರ ಕಾಲದ ಅನೇಕ ವಿವರಗಳನ್ನು ತಿಳಿಯಲು ಅರ್ಥಶಾಸ್ತ್ರ ಅತ್ಯಮೂಲ್ಯವಾದ ಗ್ರಂಥವಾಗಿದೆ.

ಚಂದ್ರಗುಪ್ತನು ಕ್ರಿ.ಪೂ. ೩೨೨ ರಿಂದ ೨೯೮ ರ ವರೆಗೆ ೨೪ ವರ್ಷಗಳ ಕಾಲ ಮಗಧಸಾಮ್ರಾಜ್ಯವನ್ನು, ಅಂದರೆ, ಉತ್ತರ ಹಿಂದೂಸ್ತಾನವನ್ನು ಸುಖಶಾಂತಿಗಳಿಂದ ಪರಿಪಾಲಿಸಿದನು. ಸೌರಾಷ್ಟ್ರದಂತಹ ದೂರಪ್ರಾಂತದವರ ಮೇಲೂ ಅವನ ಕೃಪಾದೃಷ್ಟಿ ಇತ್ತೆಂದು ಗಿರಿನಗರದ ಶಿಲಾಶಾಸನದಿಂದ ಗೊತ್ತಾಗುತ್ತದೆ. ಅನೇಕ ಶತಮಾನಗಳವರೆಗೆ ಆ ಪ್ರದೇಶಕ್ಕೆ ನೀರಾವರಿ ಸೌಕರ್ಯವನ್ನು ಒದಗಿಸಿದ ಸುದರ್ಶನತಟಾಕವನ್ನು ಚಂದ್ರಗುಪ್ತನ ಅಧಿಕಾರಿಗಳೇ ಕಟ್ಟಿದರೆಂದು ಅದರಲ್ಲಿ ಹೇಳಿದೆ. "ಮೌರ್ಯಸ್ಯ ರಾಜ್ಞಃ ಚಂದ್ರಗುಪ್ತಸ್ಯ ರಾಷ್ಟ್ರಿಯೇಣ ವೈಶ್ಯೇನ ಪುಷ್ಯಗುಪ್ತೇನ ಕಾರಿತಂ" ಎಂದು ಆ ತಟಾಕದ ವಿಷಯವಾಗಿ ಶಾಸನವಿದೆ. ಚಂದ್ರಗುಪ್ತನ ಪ್ರಜಾವಾತ್ಸಲ್ಯಕ್ಕೂ ದಕ್ಷತೆಗೂ ಇದೊಂದು ಉತ್ತಮವಾದ ನಿದರ್ಶನ.

ಇಳಿವಯಸ್ಸಿನಲ್ಲಿ ಜೈನಗುರುಗಳಾದ ಭದ್ರಬಾಹು ಸಂಗಡ ಚಂದ್ರಗುಪ್ತನು ಸಿಂಹಾಸನವನ್ನು ತ್ಯಜಿಸಿ ಕರ್ಣಾಟಕ ಪ್ರಾಂತವಾದ ಪುನ್ನಾಟಕ್ಕೆ ಬಂದನೆಂದೂ ಮೈಸೂರು ಸಂಸ್ಥಾನದಲ್ಲಿರುವ ಶ್ರವಣಬೆಳುಗೊಳದಲ್ಲಿ ಸಲ್ಲೇಖನದಿಂದ ತನುತ್ಯಾಗಮಾಡಿದನೆಂದೂ ಹಲವು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಶ್ರವಣಬೆಳಗೊಳದಲ್ಲಿರುವ ಕೆಲವು ಶಾಸನಗಳೂ ಜೈನಗ್ರಂಥಗಳಲ್ಲಿನ ಕೆಲವು ಐತಿಹ್ಯಗಳೂ ಈ ಅಭಿಪ್ರಾಯಕ್ಕೆ ಬರುವಂತೆ ಅವರನ್ನು ಪ್ರೇರಿಸಿವೆ.

ಕ್ರಿ. ಶ. ಸುಮಾರು ೬೫೦ ರಲ್ಲಿ ಲಿಖಿತವಾದ, ಅಂದರೆ, ಚಂದ್ರಗುಪ್ತನ ಕಾಲಾನಂತರ ಸುಮಾರು ಸಾವಿರ ವರ್ಷಗಳ ಅನಂತರದ, ಶ್ರವಣಬೆಳುಗೊಳದ ಒಂದು ಶಾಸನದಲ್ಲಿ "ಭದ್ರಬಾಹು ಸಚಂದ್ರಗುಪ್ತ ಮುನೀಂದ್ರ ಯುಗ್ಮದಿ ನೊಪ್ಪೆ" ಎಂದು ಮುಂತಾಗಿಯೂ, ಅಲ್ಲಿಂದೀಚೆಗೆ ಕ್ರಿ. ಶ. ೯೦೦, ೧೧೨೯, ೧೧೬೩, ೧೪೩೨ ಮುಂತಾದ ಕಾಲಗಳಲ್ಲಿ ರಚಿತವಾದ ಶಾಸನಗಳಲ್ಲಿ ಚಂದ್ರ ಗುಪ್ತ ಮುನಿಪತಿ, ಚಂದ್ರಗುಪ್ತ ಎಂಬ ಹೆಸರಿನ ಒಬ್ಬ ಶಿಷ್ಯ ಭದ್ರಬಾಹು ಮುನಿಗಳ ಶುಶ್ರೂಷೆಮಾಡಿದನೆಂದೂ ಅಶನಾದಿಗಳನ್ನು ಬಿಟ್ಟು ಶ್ರವಣ ಬೆಳುಗೊಳದ ಪವಿತ್ರಕ್ಷೇತ್ರದಲ್ಲಿ ಸಲ್ಲೇಖನ ಮಾಡಿದನೆಂದೂ ಹೇಳಿದೆ. ಕ್ರಿ. ಶ. ೯೩೧ ರಲ್ಲಿ ರಚಿತವಾದ ಹರಿಷೇಣನ ಸಂಸ್ಕೃತ ಬೃಹತ್ಕಥಾ ಕೋಶದಲ್ಲಿ ಜೈನಮುನಿಯಾದ ಭದ್ರಬಾಹು ಜೈನ ಶ್ರಾವಕನಾದ ಚಂದ್ರಗುಪ್ತನೆಂಬ ಅರಸನು ಆಳುತ್ತಿದ್ದ ಉಜ್ಜಯಿನಿಗೆ ಬಿಜಯಮಾಡಿ, ಅಲ್ಲಿ ಮುಂದೊದಗಲಿದ್ದ ೧೨ ವರ್ಷದ ಕ್ಷಾಮವನ್ನು ಮುನಗಂಡು ಅರಸನಾದ ಚಂದ್ರಗುಪ್ತನಿಗೆ ದೀಕ್ಷೆಯನ್ನುಕೊಟ್ಟು ಅವನೊಂದಿಗೆ ಪುನ್ನಾಟಕ್ಕೆ ತೆರಳಿದನೆಂದು ಹೇಳಿದೆ. ಇತರ ಜೈನ ಗ್ರಂಥಗಳಲ್ಲೂ ಉಜ್ಜಯಿನಿಯ ಚಂದ್ರಗುಪ್ತನೃಪತಿ, ಚಂದ್ರಗುಪ್ತ ಮುನಿ ಎಂದು ಆ ಶಿಷ್ಯನ ಹೆಸರನ್ನು ಹೇಳಿದೆ.

ಶ್ರೀಮಾನ್. ಎಂ. ಗೋವಿಂದಪೈ ಅವರು "ಕರ್ಣಾಟಕಕ್ಕೆ ಜೈನಧರ್ಮದ ಆಗಮನ" ಎಂಬ ತಮ್ಮ ಲೇಖನದಲ್ಲಿ ಈ ಚರಿತ್ರಾಂಶವನ್ನು ವಿಮರ್ಶೆ ಮಾಡಿದಾರೆ. "ಈ ಕಥೆಯಲ್ಲಿಯ ಘಟನೆಗಳ ಸಂಭಾವ್ಯಕಾಲವಾದ ಕ್ರಿ. ಪೂ. ಶತಕಗಳಲ್ಲಿ ಮೌರ್ಯವಂಶ ಸ್ಥಾಪಕನೊಬ್ಬನಲ್ಲದೆ ಚಂದ್ರಗುಪ್ತ ಎಂಬ ಹೆಸರಿನ ಇತರ ಅರಸರು ಇದ್ದಂತೆ ಇದುವರೆಗೆ ತಿಳಿಯದುದರಿಂದ, ಅಥವಾ ಒಂದು ವೇಳೆ ಇದ್ದರೂ ಆತನಷ್ಟು ಪ್ರಖ್ಯಾತನಾದ ಬೇರೆ ಚಂದ್ರಗುಪ್ತ ನಿದ್ದಿಲ್ಲದುದರಿಂದ, ಇದರಲ್ಲಿ ಭದ್ರಬಾಹುವಿನ ಶಿಷ್ಯನೆಂದಿರುವ ಚಂದ್ರಗುಪ್ತನು ಮೌರ್ಯ ವಂಶಸ್ಥಾಪಕನೇ ಆಗಿರಬೇಕೆಂದು ಊಹಿಸುವುದಾದರೂ ಸಹಜವೇ ಸರಿ" ಎಂದು ಅವರು ತಮ್ಮ ವಿಮರ್ಶೆಗೆ ಪೀಠಿಕೆ ಹಾಕಿಕೊಂಡು ಮುಂದು ವರಿದಿದಾರೆ. ಕ್ಷಾಮ ಭೀತಿಗಾಗಿ ರಾಜನು ಸಿಂಹಾಸನ ತ್ಯಾಗಮಾಡುವುದು ಅಸಹಜ. ಆದರೂ, ಇಳಿವಯಸ್ಸಿನ ಅರಸರು ಮಗನಿಗೆ ರಾಜ್ಯಭಾರವನ್ನು ವಹಿಸಿ ವಾನಪ್ರಸ್ಥ ಸಂನ್ಯಾಸಾಶ್ರಮಗಳಿಗೆ ತೆರಳುವುದು ನಮ್ಮ ದೇಶದ ಪೂಜ್ಯ ಪದ್ಧತಿ. ಆದ್ದರಿಂದ, ಚಂದ್ರಗುಪ್ತ ಸಂನ್ಯಾಸ ದೀಕ್ಷೆವಹಿಸಿ ತೆಂಕಣ ನಾಡುಗಳಿಗೆ ಗುರುಗಳೊಂದಿಗೆ ಹೊರಟ ಸಂಘಟನೆ ಭಾರತವರ್ಷದ ಇತಿಹಾಸ ದಲ್ಲಿ ಅಷ್ಟು ಅಸಂಭಾವ್ಯವಲ್ಲ. ಶ್ರೀಮಾನ್ ಪೈರವರು ಹೇಳುವಹಾಗೆ, "ಬೌದ್ಧ

ಗ್ರಂಥಗಳಲ್ಲಿಯೂ ಉತ್ತರ ಭಾರತದ ಜೈನಗ್ರಂಥಗಳಲ್ಲಿಯೂ ಬೌದ್ಧನೆಂದಾಗಲಿ ಜೈನನೆಂದಾಗಲಿ ಹೇಳಿಲ್ಲದ ಆ ಮೌರ್ಯವಂಶಸ್ಥಾಪಕನು ಕೊನೆಯವರೆಗೂ ಪ್ರತ್ಯಕ್ಷತಃ ಸನಾತನಧರ್ಮೀಯನೇ ವಿನಾ ಬೌದ್ಧನೂ ಅಲ್ಲ, ಜೈನನೂ ಅಲ್ಲ," ಎಂದು ನಾವು ಒಪ್ಪಿಕೊಳ್ಳಲೇ ಬೇಕು. ಶಾಸನಗಳಲ್ಲೂ ಕೂಡ ಭದ್ರಬಾಹು ವಿನೊಂದಿಗೆ ಬಂದಿದ್ದವನು ಮೌರ್ಯವಂಶಸ್ಥಾಪಕನಾದ ಚಂದ್ರಗುಪ್ತನೆಂದು ಹೇಳಿಲ್ಲ. ಅದಕ್ಕೆ ಬದಲಾಗಿ, ಆತನು ಮಧ್ಯದೇಶದ ಅವಂತಿಯ ಅರಸ ನಾಗಿದ್ದನೇ ಹೊರತು ಪೂರ್ವಭಾರತದ ಮಗಧರಾಜನಾಗಿರಲಿಲ್ಲವೆಂಬುದೂ ಸ್ಪಷ್ಟವಾಗುತ್ತದೆ. ಶ್ರೀಮಾನ್ ಗೋವಿಂದಪೈ ಅವರು ತಮ್ಮ ಸಂಶೋಧನೆಯ ಫಲವಾಗಿ ಚಂದ್ರಗುಪ್ತನೆಂದು ಸೂಚಿತವಾದ ರಾಜನು "ಚಂದ್ರಗುಪ್ತನ ಮೊಮ್ಮಗನಾದ ಅಶೋಕನ ಮೊಮ್ಮಗನಾದ ಸಂಪ್ರತಿ ಚಂದ್ರಗುಪ್ತ" ಎಂದು ಇತ್ಯರ್ಥಿಸಿದಾರೆ. ಆದ್ದರಿಂದ, ಚಂದ್ರಗುಪ್ತನ ಸಿಂಹಾಸನತ್ಯಾಗದ ಕಥೆಯನ್ನು, ಎಷ್ಟೇ ಸ್ವಾರಸ್ಯವಾಗಿದ್ದರೂ, ನಂಬಲರ್ಹವಾದದ್ದಲ್ಲವೆಂದು ನಾವು ಒತ್ತಟ್ಟಿಗಿಡಬೇಕಾಗುತ್ತದೆ.

ಚಂದ್ರಗುಪ್ತನ ಮಗನಾದ ಬಿಂದುಸಾರನು ಸುಮಾರು ೨೫ ವರ್ಷಗಳ ಕಾಲ ಮಗಧ ಸಾಮ್ರಾಜ್ಯವನ್ನು ಆಳಿದನೆಂದು ಪುರಾಣಗಳಲ್ಲಿ ಹೇಳಿದೆ. ಅವನಿಗೆ ಅಮಿತ್ರಘಾತ ಎಂಬ ಬಿರುದಿದ್ದಂತೆ ಆಗಿನ ಕಾಲದ ಯವನ ಚರಿತ್ರ ಕಾರರಿಂದ ತಿಳಿದುಬರುತ್ತದೆ. ಯವನರು ಉಪಯೋಗಿಸಿರುವ ಅಮಿತ್ರೊ ಖಾಟಿಸ್ ಎಂಬ ಪದ ಅಮಿತ್ರಖಾದ ಎಂಬುದರ ತದ್ಭವವೂ ಆಗಿರಬಹುದು. ಬಿಂದುಸಾರನು ತನ್ನ ಭುಜಬಲದಿಂದಲೇ ಈ ಬಿರುದನ್ನು ಗಳಿಸಿಕೊಂಡಿರಬೇಕು. ಹಿಮಾಚಲದಿಂದ ವಿಂಧ್ಯಾಚಲದವರೆಗೂ ಹಬ್ಬಿದ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಲು ಬಿಂದುಸಾರನು ದಕ್ಷಿಣಾಪಥದ ಕಡೆ ದಿಗ್ವಿಜಯ ಹೊರಟನೆಂದೂ ಹದಿನಾರು ರಾಜಧಾನಿಗಳನ್ನು ವಶಪಡಿಸಿಕೊಂಡನೆಂದೂ ಪೂರ್ವ ಪಶ್ಚಿಮ ಸಮುದ್ರಗಳ ಮಧ್ಯದೇಶವನ್ನೆಲ್ಲ ಗೆದ್ದನೆಂದೂ, ಕೌಟಿಲ್ಯನೇ ಆತನ ಅಮಾತ್ಯ ನಾಗಿ ಕೆಲಕಾಲ ನಿಂತು ಕಾಪಾಡಿದನೆಂದೂ ಕ್ರಿ.ಶ. ೧೭ ನೆಯ ಶತಮಾನದ ಟಿಬೆಟ್ ದೇಶದ ಚರಿತ್ರಕಾರ ತಾರಾನಾಥನು ಹೇಳುತ್ತಾನೆ.

ತಾರಾನಾಥನು ಕೇಳಿ ನಂಬಿದ ಈ ಕಥೆಗೆ ಆಧಾರವಿದ್ದಿರಬೇಕೆಂದು ನಮಗೂ ತೋರುತ್ತದೆ. ಏಕೆಂದರೆ, ಬಿಂದುಸಾರನ ಮಗ ಅಶೋಕನ ಕಾಲಕ್ಕೆ ಮೌರ್ಯಸಾಮ್ರಾಜ್ಯದ ಎಲ್ಲೆ ಮೈಸೂರು ಸಂಸ್ಥಾನದ ಉತ್ತರಭಾಗದ ವರೆಗೂ ಮುಂಬರಿದಿತ್ತು. ಬಿಂದುಸಾರನ ತಂದೆ ಚಂದ್ರಗುಪ್ತನು ವಿಂಧ್ಯ ಪರ್ವತಪಂಕ್ತಿಯ ದಕ್ಷಿಣಕ್ಕೆ ದಂಡೆತ್ತಿ ಬಂದ ಹಾಗೆ ತೋರುವುದಿಲ್ಲ. ಕಳಿಂಗ

ದೇಶವನ್ನು ಮಾತ್ರ ಅಶೋಕನು ಸಾಮ್ರಾಜ್ಯಕ್ಕೆ ಸೇರಿಸಿದನು. ಹಾಗಾದರೆ, ದಕ್ಷಿಣಾಪಥದ ಇತರ ಪ್ರದೇಶಗಳನ್ನು ಗೆದ್ದವರು ಯಾರು? ಚಂದ್ರಗುಪ್ತನೇ? ಇರಲಾರದು. ಯವನರನ್ನೋಡಿಸಿ ಉತ್ತರಾಪಥವನ್ನು ಗೆದ್ದು ನವನಂದ ರನ್ನುರುಳಿಸಿ ದೇಶವನ್ನು ಸಮಾಧಾನಕ್ಕೆ ತರುವುದೇ ಚಂದ್ರಗುಪ್ತನಿಗೆ ಸಾಕಷ್ಟು ಸಾಹಸದ ಕೆಲಸವಾಗಿದ್ದಿರಬೇಕು. ಅಲ್ಲದೆ, ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಮುಂದೆ ಸಾಮ್ರಾಜ್ಯವನ್ನು ವಿಸ್ತರಿಸಬೇಕಾದರೆ ಅರಸನು ಸೈನ್ಯಸಮೇತನಾಗಿ ಯಾವ ದಿಕ್ಕಿಗೆ ನುಗ್ಗಬೇಕೆಂದು ಚರ್ಚಿಸಿದ್ದಾನೆ. ಕೌಟಿಲ್ಯನ ಗುರುಗಳು ಉತ್ತರಾಭಿಮುಖವಾಗಿ ಹೋಗುವುದೇ ಲಾಭ ಎಂಬ ಅಭಿಪ್ರಾಯ ಹೇಳಿದರಂತೆ. ಆದರೂ, ಕೌಟಿಲ್ಯನು ಅದಕ್ಕೆ ವಿರೋಧವಾಗಿ, ಶಂಖ ವಜ್ರಮಣಿ ಮುಕ್ತಾ ಸುವರ್ಣ ಮೊದಲಾದ ವಸ್ತುಗಳು ಹೇರಳವಾಗಿ ದೊರೆಯುವ ದಕ್ಷಿಣಾಪಥಕ್ಕೇ ಹೋಗಬೇಕೆಂದು ಹೇಳಿರುವನು. ಈ ಉಪ ದೇಶವನ್ನು ಬಿಂದುಸಾರನೂ ಅನುಸರಿಸಿರಬೇಕೆಂದು ನಾವು ಊಹಿಸಬಹು ದಾಗಿದೆ. ಅಮಿತ್ರಘಾತ ಎಂಬ ಬಿರುದೂ ಕೂಡ ಆಗ ಸಾರ್ಥಕವಾಗುತ್ತದೆ.

ತಂದೆಯಿಂದ ಬಂದ ವಿಶಾಲಸಾಮ್ರಾಜ್ಯವನ್ನು ಸರಿಯಾಗಿ ಸಂರಕ್ಷಿಸಿ ದುದಲ್ಲದೆ ಅದನ್ನು ಇಮ್ಮಡಿಯಾಗಿ ವಿಸ್ತರಿಸಿದ ಬಿಂದುಸಾರನು ನಿಜವಾಗಿಯೂ ಸಾಹಸಿ; ರಾಜತಂತ್ರಜ್ಞ. ಆದರೆ, ಅವನ ವಿಷಯವಾಗಿ ಹೆಚ್ಚು ವಿವರಗಳು ದೊರೆತಿಲ್ಲ. ಯವನ ಚರಿತ್ರಕಾರರೂ ನಮಗೆ ಹೆಚ್ಚು ಸಹಾಯಕರಾಗಿಲ್ಲ. ಸೆಲ್ಯೂಕಸ್ಸನ ಆಸ್ಥಾನದಿಂದ ಬಿಂದುಸಾರನ ರಾಜಧಾನಿಗೆ ಡೀಮಾಕೊಸ್ ಎಂಬ ದೂತನು ಬಂದಿದ್ದನು. ಮೆಗಾಸ್ತನೀಸನಂತೆಯೇ ಇವನೂ ತನಗೆ ಸೋಜಿಗವೆನಿಸಿದ ಸಂಗತಿಗಳನ್ನು ಬರೆದು ಪ್ರಕಟಿಸಿದ್ದನು. ಏಕೆಂದರೆ, ಸ್ಟ್ರಾಬೊ "ಇಂಡಿಯಾ ವಿಷಯವಾಗಿ ಬರೆದಿರುವವರೆಲ್ಲರೂ ಸಾಮಾನ್ಯ ವಾಗಿ ಸುಳ್ಳರೇ! ಇವರ ಪೈಕಿ ಡೀಮಾಕೊಸನು ಮೊದಲಿಗನು; ಮೆಗಾಸ್ತ ನೀಸನು ಎರಡನೆಯವನು," ಎಂದು ಹೇಳಿದಾನೆ. ಆಗಿನ ಕಾಲದಲ್ಲಿ ಈಜಿಪ್ಟ್ ದೇಶವನ್ನಾಳುತ್ತಿದ್ದ ಟಾಲೆಮಿ ಫಿಲೊಡೆಲ್ಫಾಸ್ ಎಂಬ ಯವನರಾಜನು ಡಯೋನೀಸಸ್ ಎಂಬ ದೂತನನ್ನು ಪಾಟಲೀಪುತ್ರಕ್ಕೆ ಕಳುಹಿಸಿಕೊಟ್ಟನು. ಇವನೂ ಇಂಡಿಯಾ ವಿಷಯವಾಗಿ ಒಂದು ಗ್ರಂಥ ಬರೆದಿರಬೇಕು. ಏಕೆಂದರೆ, "ಮೆಗಾಸ್ತನೀಸನೂ ಡಯೋನೀಸಸ್ಸೂ ಬರೆದಿರುವ ಪುಸ್ತಕಗಳ್ನು ಓದಿ ಫಲವಿಲ್ಲ. ಅವುಗಳನ್ನು ನಂಬಲೇ ಕೂಡದು. ಒಂದಕ್ಕೊಂದು ವಿರೋಧ ವಾಗಿವೆ" ಎಂದು ಪ್ಲೈನಿ ಟೀಕೆಮಾಡುತ್ತಾನೆ.

ಬಿಂದುಸಾರನನ್ನು ಕುರಿತು ಯವನರು ಒಂದು ಕಥೆ ಹೇಳುತ್ತಾರೆ.

ಸಿರಿಯಾದೇಶದ ಅರಸನಾದ ಅಂಟಿಯೋಕಸ್ ಸೋಟರಿಗೆ ಅವನು ಪತ್ರ ಬರೆದು, ಅಂಜೂರದ ಹಣ್ಣು ದ್ರಾಕ್ಷಾರಸ ಮತ್ತು ಒಬ್ಬ ತತ್ವಶಾಸ್ತ್ರಜ್ಞ ಈ ಮೂರು ಪದಾರ್ಥಗಳನ್ನೂ ಕಳುಹಿಸಿ ಉಪಕಾರಮಾಡಬೇಕೆಂದೂ ಅದಕ್ಕಾಗಿ ತಗಲುವ ಖರ್ಚನ್ನು ತಾನು ಕೊಡುವುದಾಗಿಯೂ ತಿಳಿಸಿದನಂತೆ. ಆದರೆ ಅಂಟಿಯೊಕಸ್ಸನು ಮಧುವನ್ನೂ ಫಲವನ್ನೂ ಮಾತ್ರ ಕಳುಹಿಸಿ, "ತತ್ವ ಶಾಸ್ತ್ರಜ್ಞರನ್ನು ಮಾರುವ ಪದ್ಧತಿ ಯವನ ಧರ್ಮಕ್ಕೆ ವಿರುದ್ಧ"ವೆಂದು ಉತ್ತರವಿತ್ತನಂತೆ. ಈ ಕಥೆಯನ್ನು ಈಜಿಪ್ಟ ದೇಶದ ಚರಿತ್ರಕಾರನಾದ ಅಥಿನೇಯಸ್ ಹೇಳುತ್ತಾನೆ. ಆದರೆ ಇದರಿಂದ ಹೆಚ್ಚು ಕಳಂಕ ತಟ್ಟುವುದು ಯವನ ಅರಸನಿಗೇ ಹೊರತು ಭಾರತೀಯನಿಗಲ್ಲ. ಹೊರದೇಶಗಳಲ್ಲಿ ಜನಾದರಣೆಯನ್ನು ಪಡೆದಿರುವ ತತ್ವಗಳನ್ನು ತಿಳಿಯಬೇಕೆಂಬ ಕುತೂಹಲಕ್ಕೆ ತನ್ನ ಚಮತ್ಕಾರವಾದ ಉತ್ತರದಿಂದ ಅಂಟಿಯೋಕಸ್ಸನು ದ್ರೋಹಮಾಡಿದನು.

## ೩. ಅಶೋಕನ ಜೀವನ ಚರಿತ್ರೆ

ಸಿಂಹಳದ್ವೀಪದ ಧರ್ಮಚರಿತ್ರೆಯನ್ನು ವಿವರಿಸುವ ದ್ವೀಪವಂಶ, ಮಹಾವಂಶ, ಎಂಬ ಬೌದ್ಧಗ್ರಂಥಗಳು ಬಿಂದುಸಾರನಿಗೆ ೧೬ ಜನ ರಾಣಿಯರಿದ್ದರೆಂದೂ ಅವನಿಗೆ ೧೦೧ ಗಂಡುಮಕ್ಕಳಿದ್ದರೆಂದೂ ಹೇಳುತ್ತವೆ. ಆದರೆ ಆ ಮಕ್ಕಳ ಪೈಕಿ ಮೂರು ಜನರ ಹೆಸರನ್ನು ಮಾತ್ರ ಅವು ಸೂಚಿಸುತ್ತವೆ. ಧರ್ಮಾ ಎಂಬ ಅಗ್ರಮಹಿಷಿಗೆ ಅಶೋಕ, ತಿಷ್ಯ ಎಂಬ ಎರಡು ಮಕ್ಕಳೂ ಮತ್ತೊಬ್ಬಳಿಗೆ ಸುಮನ ಎಂಬ ಮಗನೂ ಜನಿಸಿದರಂತೆ. ಆದರೆ ದಿವ್ಯಾವದಾನ ಮುಂತಾದ ಉತ್ತರ ಬೌದ್ಧ ಗ್ರಂಥಗಳಲ್ಲಿ ಚಂಪಾದೇಶದ 'ಜನಪದ ಕಲ್ಯಾಣಿ' ಎನಿಸಿದ ಬ್ರಾಹ್ಮಣಕುಲದವಳಾದ ಸುಭದ್ರಾಂಗಿ ಎಂಬ ರಾಣಿಗೆ ಅಶೋಕ, ವಿಗತಶೋಕ ಎಂಬ ಇಬ್ಬರು ಮಕ್ಕಳೂ ಅಗ್ರಮಹಿಷಿ ಯಾದ ಮತ್ತೊಬ್ಬಳಿಗೆ ಸುಸೀಮ ಎಂಬ ಯುವರಾಜನೂ ಜನಿಸಿದರೆಂದು ಹೇಳಿದೆ. ಸುಭದ್ರಾಂಗಿಯ ಜಾತಕವನ್ನು ಗುಣಿಸುವಾಗ ಅವಳಿಗೆ ಒಬ್ಬ ರಾಜನು ಪತಿಯಾಗುತ್ತಾನೆಂದೂ ಅವಳ ಇಬ್ಬರು ಮಕ್ಕಳಲ್ಲಿ ಒಬ್ಬನು ಚತುರ್ಭಾಗ ಚಕ್ರವರ್ತಿಯೂ ಮತ್ತೊಬ್ಬನು ಸಿದ್ಧವ್ರತನಾದ ಪರಿವ್ರಾಜಕನೂ ಆಗುತ್ತಾರೆಂದು ಗೊತ್ತಾದುದರಿಂದಲೇ ಅವಳ ತಂದೆ ಅವಳನ್ನು ಬಿಂದುಸಾರನ ಅಂತಃಪುರಕ್ಕೆ ಸೇರಿಸಿದುದು ಎಂಬ ಒಂದು ಐತಿಹ್ಯವಿದೆ.

ರಾಜಪುತ್ರರಿಗೆ ಬೇಕಾದ ಎಲ್ಲಾ ವಿದ್ಯೆಗಳನ್ನೂ ಅಣ್ಣತಮ್ಮಂದಿರೊಂದಿಗೆ ಅಶೋಕನು ಕಲಿತನು. ಪರಿವ್ರಾಜಕನಾದ ಪಿಂಗಳವತ್ಸನು ಅನೇಕ ಪರೀಕ್ಷೆಗಳನ್ನು ನಡೆಯಿಸಿ ಅಶೋಕನೇ ಎಲ್ಲರಿಗಿಂತಲೂ ರಾಜಯೋಗ್ಯವಾದ ಶಕ್ತಿಸಾಮರ್ಥ್ಯಗಳನ್ನು ಪಡೆದಿರುವನು ಎಂದು ನಿರ್ಧರಿಸಿದನು. ಅಶೋಕನನ್ನು ಅವಂತಿರಾಷ್ಟ್ರದ ಮಂಡಲಾಧೀಶ್ವರನಾಗಿ ಬಿಂದುಸಾರನು ನಿಯಮಿಸಿದನು. ಅವಂತಿಯ ರಾಜಧಾನಿಯಾದ ಉಜ್ಜಯಿನೀನಗರ ಸಂಪತ್ತಿನಿಂದಲೂ ವಿದ್ಯಾವಿಲಾಸದಿಂದಲೂ ವಿರಾಜಿಸುತ್ತಿತ್ತು. ಗಂಗಾತಟದಿಂದ ಹೊರದೇಶಗಳಿಗೂ ಹೊರದೇಶಗಳಿಂದ ಗಂಗಾತಟಕ್ಕೂ ಸೌರಾಷ್ಟ್ರದ ಮೂಲಕ ನಡೆಯುತ್ತಿದ್ದ ವ್ಯಾಪಾರಕ್ಕೆ ಮಾರ್ಗಮಧ್ಯೆ ಇದ್ದ ಉಜ್ಜಯಿನೀ ನಗರ ಮುಖ್ಯ ಕೇಂದ್ರವಾಗಿತ್ತು. ಅವಂತಿಯ ಆಡಳಿತ ಸೂತ್ರವನ್ನು ವಹಿಸಿ ಅಶೋಕನು ರಾಜತಂತ್ರದಲ್ಲಿ ನಿಪುಣನಾದನು. ಅವಂತಿ ಪ್ರಾಂತಕ್ಕೆ ಸೇರಿದ ವಿದಿಶಾನಗರದಲ್ಲಿದ್ದ ಒಬ್ಬ ಶ್ರೇಷ್ಠಿಯ ಮಗಳನ್ನು ವಿವಾಹಮಾಡಿಕೊಂಡನು. ಅವಳಿಗೆ ವಿದಿಶಾಮಹಾ

ದೇವಿ ಎಂದೂ ಶಾಕ್ಯಕುಮಾರಿ ಎಂದೂ ಹೆಸರುಗಳಿವೆ. ಆಕೆಗೆ ಬೌದ್ಧಧರ್ಮ ದಲ್ಲಿ ಅಪಾರವಾದ ಭಕ್ತಿ ಇತ್ತು. ಮುಂದೆ ಸಿಂಹಳದ್ವೀಪದಲ್ಲಿ ಬುದ್ಧಭಗವಾನನ ಸಂದೇಶವನ್ನು ಸಾರಿದ ಮಹೇಂದ್ರ, ಸಂಘಮಿತ್ರ ಎಂಬ ಇಬ್ಬರೂ ಆಕೆಯ ಮಕ್ಕಳು. ಅಶೋಕನು ಮಗಧರಾಜನಾಗಿ ಪಾಟಲೀಪುತ್ರದಲ್ಲಿ ನೆಲಸಿದ ಮೇಲೂ ಮಹಾದೇವಿ ಉಜ್ಜಯಿನಿಯಲ್ಲೇ ಉಳಿದಂತೆ ಕಾಣುತ್ತದೆ. ಏಕೆಂದರೆ ತನ್ನ ಅವರೋಧನದ ವಿಷಯವಾಗಿ ಪ್ರಸ್ತಾಪಿಸುತ್ತಾ ಅಶೋಕನು 'ಇಲ್ಲೂ ದೆಸೆಗಳಲ್ಲೂ ಇರುವ ನನ್ನ ಅವರೋಧನಗಳು' ಎಂದು ಹೇಳುತ್ತಾನೆ.

ಉಜ್ಜಯಿನಿಯಿಂದ ಅಶೋಕನು ವಾಯುವ್ಯ ಪ್ರಾಂತದ ಮುಖ್ಯನಗರವಾದ ತಕ್ಷಶಿಲೆಗೆ ಮಂಡಲಾಧೀಶ್ವರನಾಗಿ ಹೋಗಬೇಕಾಯಿತು. ಹಿಂದೂಸ್ತಾನದ ರಕ್ಷಣೆಗೆ ಅತಿ ಮುಖ್ಯವಾದ ಆ ಪ್ರಾಂತವನ್ನು ಅದುವರೆಗೆ ಯುವರಾಜನಾದ ಸುಮನನು ಆಳುತ್ತಿದ್ದನು. ಆದರೆ, ಅಲ್ಲಿಯ ಜನರು ಮಗಧರ ಆಳಿಕೆಗೆ ವಿರೋಧವಾದಾಗ ಅವರನ್ನಡಗಿಸಲು ಅವನಿಂದ ಸಾಧ್ಯವಾಗಲಿಲ್ಲ. ಪಿಂಗಳ ವತ್ಸನ ಮಾತಿನಂತೆ ಬಿಂದುಸಾರನು ಅಶೋಕನನ್ನೇ ಪರೀಕ್ಷಾರ್ಥವಾಗಿ ಅಲ್ಲಿಗೆ ಕಳುಹಿಸಬೇಕಾಗಿ ಬಂತು. ಆದರೆ ತಕ್ಕಷ್ಟು ಚತುರಂಗಸೇನೆ ಕೂಡ ಇಲ್ಲದೆ, ಅಶೋಕನು ಆ ವಿರುದ್ಧದೇಶಕ್ಕೆ ನಡೆದನು. ತಕ್ಷಶಿಲಾ ನಗರದ ಪೌರರು ಅಶೋಕನ ಬರವನ್ನು ಕೇಳಿ ಒಂದೂವರೆ ಯೋಜನದಷ್ಟು ದೂರ ಮಾರ್ಗವನ್ನು ಶೋಧನಮಾಡಿ ಪೂರ್ಣಕುಂಭಸಮೇತವಾಗಿ ಅವನನ್ನು ಎದುರುಗೊಂಡು, 'ನಮಗೆ ಬಿಂದುಸಾರನ ಮೇಲೂ ವಿರೋಧವಿಲ್ಲ. ಕುಮಾರನ ಮೇಲೂ ವಿರೋಧವಿರಲಿಲ್ಲ. ದುಷ್ಟರಾದ ಅಮಾತ್ಯರ ಮೇಲಿನ ಪರಿಭಾವಕ್ಕಾಗಿ ನಾವು ಹೀಗೆ ವರ್ತಿಸಿದೆವು' ಎಂದು ಹೇಳಿ ಕ್ಷಮಾಭಿಕ್ಷೆ ಯನ್ನು ಕೇಳಿದರಂತೆ!

ಬರಬರುತ್ತಾ ಯುವರಾಜನಾದ ಸುಮನನ ದುರಹಂಕಾರದಿಂದ ಆಸ್ಥಾನದ ಅಮಾತ್ಯರೆಲ್ಲರೂ ಅಶೋಕನ ಪಕ್ಷವನ್ನೇ ವಹಿಸಲುಪಕ್ರಮಿಸಿದರು. ರಾಧಾ ಗುಪ್ತ ಮೊದಲಾದ ಐನೂರು ಅಮಾತ್ಯರು ಏಕಕಂಠದಿಂದ ಸುಮನನನ್ನು ನಿರಾಕರಿಸಿದರು. ಬಿಂದುಸಾರನು ಮರಣಶಯ್ಯೆಯಲ್ಲಿದ್ದಾಗ ಅವರು ಅಶೋಕ ನನ್ನು ಕರೆಸಿ ಅವನಿಗೆ ಪಟ್ಟಕಟ್ಟಿದರು.

ಅಶೋಕನು ರಾಧಾಗುಪ್ತನನ್ನೇ ಅಗ್ರಾಮಾತ್ಯನಾಗಿ ನಿಯಮಿಸಿದನು. ಆದರೆ, ಯುವರಾಜನಾಗಿದ್ದ ಸುಮನನು ತನ್ನ ಪಾಲಿಗೆ ಬರಬೇಕಾಗಿದ್ದ ಸಿಂಹಾಸನವನ್ನು ತೆಪ್ಪಗೆ ತಮ್ಮನಿಗೆ ಬಿಟ್ಟುಕೊಡಲಿಲ್ಲ. ಸಿಂಹಳದ್ವೀಪದ ಗ್ರಂಥಗಳು ಅವನು ತನ್ನ ಇತರ ೯೮ ಸಹೋದರರನ್ನೂ ಸೇರಿಸಿ ಅಶೋಕನ

ಮೇಲೆ ಯುದ್ಧ ಹೂಡಿದನೆಂದು ಹೇಳುತ್ತವೆ. ದಿವ್ಯಾವದಾನದ ಕಥೆಯಂತೆ ಸುಸೀಮನೊಬ್ಬನೇ ಪಾಟಲೀ ಪುತ್ರಕ್ಕೆ ಮುತ್ತಿಗೆ ಹಾಕುತ್ತಾನೆ. ಹೀಗೆ ಅಣ್ಣತಮ್ಮಂದಿರಿಗೆ ದೊಡ್ಡ ಯುದ್ಧವಾಯಿತೆಂದು ಎಲ್ಲ ಬೌದ್ಧ ಗ್ರಂಥಗಳಲ್ಲೂ ಹೇಳಿದೆ.

ಆದರೆ ಇಂತಹ ಕಥೆಗಳಲ್ಲಿ ನಿಜಾಂಶ ಎಷ್ಟೆಂಬುದನ್ನು ನಿರ್ಧರಿಸುವುದೇ ಕಷ್ಟ. ಮುಂದೆ ಅಶೋಕನು ಬೌದ್ಧಧರ್ಮವನ್ನವಲಂಬಿಸಿ ಅದಕ್ಕೆ ಅನನ್ಯ ಸಾಧಾರಣವಾದ ಪ್ರೋತ್ಸಾಹವನ್ನು ಕೊಟ್ಟನಾದ್ದರಿಂದ, ಅಹಿಂಸೆ ಮುಂತಾದ ಗುಣಗಳನ್ನು ಬೋಧಿಸುವ ಆ ಧರ್ಮವನ್ನು ತಿಳಿಯುವ ಮುನ್ನ ಅವನು ದುಷ್ಟನೂ ಕ್ರೂರಿಯೂ ಆಗಿದ್ದನು, ಎಂದು ತೋರಿಸಲು, ಕವಿಗಳು ಅಶೋಕನ ತಾರುಣ್ಯಜೀವನವನ್ನು ಭಯಂಕರವಾಗಿ ವಿವರಿಸಿದರು. "ಕಾಲಾಶೋಕ"ನಾಗಿದ್ದವನು "ಶ್ವೇತಾಶೋಕ"ನಾದನೆಂದೂ "ಚಂಡಾಶೋಕ"ನಾಗಿದ್ದವನು "ಧರ್ಮಾಶೋಕ"ನಾದನೆಂದೂ ಕಣ್ಣಿಗೆ ಕಟ್ಟಿದಹಾಗೆ ವಿವರಿಸಲು ಇಂತಹ ಕಥೆಗಳು ಅವರಿಗೆ ಸಹಾಯವಾದುವು. ಕಳಿಂಗಯುದ್ಧವಾದ ಮೇಲೆ ಅಶೋಕನ ಧರ್ಮಕಾಮತೆ, ಧರ್ಮಪೋಷಣೆ ಇಮ್ಮಡಿಯಾಯಿತು ಎಂಬುದು ವಾಸ್ತವಾಂಶ. ಆದರೆ, ಗ್ರಂಥಕರ್ತರು ಆ ವಿಷಯವನ್ನು ಒತ್ತಿ ಹೇಳದೆ, ಅದಕ್ಕಿಂತ ಸ್ವಾರಸ್ಯವೆಂದು ತೋರಿದ ಇತರ ಸನ್ನಿವೇಶಗಳನ್ನು ಕಲ್ಪನೆಮಾಡಿಕೊಂಡರು. ಪಟ್ಟಕ್ಕೆ ಬಂದಕೂಡಲೇ ಅಶೋಕನ ನಡತೆ ಎಲ್ಲವೂ ವಿಪರೀತವಾಯಿತಂತೆ. ಪುಷ್ಪವೃಕ್ಷ ಫಲವೃಕ್ಷಗಳನ್ನು ಕಡಿದುಹಾಕಿ ಕಂಟಕ ವೃಕ್ಷಗಳನ್ನೇ ಪರಿಪಾಲಿಸಿದ. ಇದಕ್ಕೆ ಮನನೊಂದು ಅವನನ್ನು ವಿನಯದಿಂದ ತಡೆದ ಐನೂರು ಅಮಾತ್ಯರನ್ನು ವಧೆಗೆ ಗುರಿಮಾಡಿದ. ಉದ್ಯಾನದಲ್ಲಿ ತನ್ನ ಹೆಸರಿನ ಮರ ಎಂಬ ಕಾರಣದಿಂದ ಅವನು ಉಳಿಸಿದ್ದ ಒಂದು ಅಶೋಕ ಮರವನ್ನು ಅಂತಃಪುರದ ಸ್ತ್ರೀಯರು ಕೋಪದಿಂದ ಮುರಿದಾಗ ಅಲ್ಲಿದ್ದ ಐನೂರು ಯುವತಿಯರನ್ನೂ ಜೀವಸಹಿತ ಉರಿಸಿಬಿಟ್ಟ. ಚಂಡಗಿರಿಕ ಎಂಬ ಒಬ್ಬ ವಧಕಾರನನ್ನು ನಿಯಮಿಸಿ ಅವನಿಂದ ಒಂದು ನರಕಗೃಹವನ್ನು ಮಾಡಿಸಿದ. ಅಲ್ಲಿ ಚಿತ್ರವಿಚಿತ್ರವಾದ ಹಿಂಸೆಗಳನ್ನು ಕೊಟ್ಟು ಅವನು ಆನಂದಪಡುತ್ತಿದ್ದ. ಇವೇ ಅವರು ಕಲ್ಪಿಸಿದ ಕಥೆಗಳು.

ಇದೇ ಸರಣಿಯಲ್ಲಿ ಬರೆದ ಧರ್ಮಗ್ರಂಥಕರ್ತರು, ತಿಷ್ಯನನ್ನು ಮಾತ್ರ ಉಳಿಸಿ ಮಿಕ್ಕ ೯೮ ಸಹೋದರರನ್ನು ಅಶೋಕನು ರಣರಂಗದಲ್ಲಿ ಕೊಂದು ಸಿಂಹಾಸನವನ್ನು ಪಡೆದನೆಂದು ಹೇಳುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಕಥೆಗೆ ಕಾಲಿಲ್ಲ ಎಂಬಂತೆ ಅವರು ಅಶೋಕನ ಅಣ್ಣತಮ್ಮಂದಿರ ಸಂಖ್ಯೆಯನ್ನು ನೂರಕ್ಕೆ

ಹೆಚ್ಚಿಸಿದರು. ಆದರೆ, ವಿಶೇಷತಃ ಅಶೋಕನ ವಿಷಯದಲ್ಲಿ ಇಂತಹ ಕಥೆಗಳನ್ನು ನಂಬುವುದು ಕಷ್ಟ. ಸ್ವಾರ್ಥಸಾಧನೆಗಾಗಿ, ದಿಗ್ವಿಜಯದ ಮೋಹಕ್ಕೊಳಗಾಗಿ, ಕಳಿಂಗರಿಗೆ ಕಷ್ಟನಷ್ಟಗಳನ್ನುಂಟುಮಾಡಿದೆನಲ್ಲಾ ಎಂದು ಬಹಿರಂಗವಾಗಿ ಪರಿತಪಿಸಿದ ಅಶೋಕನು ತನ್ನ ಅಣ್ಣತಮ್ಮಂದಿರನ್ನೂ ಮಣ್ಣಿನಾಸೆಗೆ ಕೊಂದೆನಲ್ಲಾ ಎಂದು ಯಾವುದಾದರೂ ಒಂದು ಶಾಸನದಲ್ಲಿ ಪ್ರಸ್ತಾಪಿಸದೆ ಇರಲಾರನು. ಮುಚ್ಚುಮರೆ ಇಲ್ಲದೆ ತನ್ನ ಅಂತರಂಗವನ್ನು ಪ್ರದರ್ಶಿಸಿದ ಅಶೋಕನು ಸಹೋದರವಧೆಯನ್ನು ಗೋಪ್ಯವಾಗಿಟ್ಟಿರಲಾರನು. ತಂದೆ ತಾಯಿ ಗುರುಗಳು ಹಿರಿಯರು ನಂಟರಿಷ್ಟರು ದಾಸರು ಭೃತ್ಯರು ಇವರಲ್ಲೆಲ್ಲ ಸಂಪ್ರತಿಪತ್ತಿ ಇರಬೇಕೆಂದು ಸಾರಿದ ಅಶೋಕನು ತಾನೇ ಇಂತಹ ಅಕೃತ್ಯವನ್ನು ಮಾಡಿದ್ದರೆ ತನ್ನ ಪಶ್ಚಾತ್ತಾಪವನ್ನು ಜನರ ಮುಂದೆ ತೋಡಿಕೊಂಡು ಕಣ್ಣೀರು ಬಿಡಲು ಹಿಂಜರಿಯುತ್ತಿರಲಿಲ್ಲ. ಅಶೋಕನ ಶಾಸನಗಳಲ್ಲಿ ಕಪಟದ ಸೊಂಕು ಸ್ವಲ್ಪವೂ ಇಲ್ಲ.

ಅಲ್ಲದೆ "ಪಾಟಲೀಪುತ್ರದಲ್ಲೂ ಹೊರಗಿನ ನಗರಗಳಲ್ಲೂ ಇರುವ ಎಲ್ಲ ಅವರೋಧನಗಳಲ್ಲೂ ನನ್ನ ಭ್ರಾತೃ ಭಗಿನಿಯರಲ್ಲೂ ಇತರ ಜ್ಞಾತಿಗಳಲ್ಲೂ ಅವರಿರುವರು" ಎಂದು ಧರ್ಮಮಹಾಮಾತ್ರರ ವಿಷಯವಾಗಿ ಶಿಲಾಶಾಸನ ೫ರಲ್ಲಿ ಹೇಳಿದೆ. "ಅಭಿಷಿಕ್ತನಾಗಿ ಹದಿಮೂರು ವರ್ಷಗಳಾದಾಗ ನನ್ನಿಂದ ಧರ್ಮಮಹಾಮಾತ್ರರು ನಿಯಮಿಸಲ್ಪಟ್ಟರು" ಎಂದು ಅದೇ ಶಾಸನದಲ್ಲಿ ಹೇಳಿರುವುದರಿಂದ ಅಶೋಕನು ತನ್ನ ಸಹೋದರರನ್ನು ಕೊಂದು ಸಿಂಹಾಸನಕ್ಕೆ ಬಂದನೆಂಬುದನ್ನು ನಂಬುವುದಸಾಧ್ಯ. ವಿನ್ಸೆಂಟ್ ಸ್ಮಿತ್‌ರವರು ಇಂತಹ ಕಥೆಗಳನ್ನು "ಅರ್ಥವಿಲ್ಲದ ಕಗ್ಗ"ವೆಂದು ಹಳಿದಿದ್ದಾರೆ.[1]

ಚಂದ್ರಗುಪ್ತನ ಸಿಂಹಾಸನವು ಯಾವ ಅಡ್ಡಿ ಆತಂಕಗಳೂ ಇಲ್ಲದೆ ಬಿಂದುಸಾರನ ಕೈಸೇರಿದ ಹಾಗೆಯೇ ಅಶೋಕನಿಗೂ ಅನಾಯಾಸವಾಗಿ ಅದು ಸಂದಿರಬೇಕೆಂದು ತೋರುತ್ತದೆ. ರಾಜ್ಯದಲ್ಲಿ ವಿಪ್ಲವವಾಗಲಿ ಅಶಾಂತಿಯಾಗಲಿ ತಲೆದೋರಿದಂತೆ ಅಶೋಕನು ಎಲ್ಲಿಯೂ ಸೂಚಿಸಿಲ್ಲ. ಅವನ ಶಾಸನಗಳನ್ನು ಓದಿದರೆ ಅವುಗಳಲ್ಲಿ ಚಿರಪ್ರತಿಷ್ಠಿತವಾದ ಒಂದು ನೆಮ್ಮದಿ ಇದೆ; ವಿಶ್ವಾಸವಿದೆ; ಪ್ರಜೆಗಳು ಸಂಪೂರ್ಣ ರಾಜಭಕ್ತರೆಂಬ ನೆಚ್ಚಿಕೆ ಇದೆ.

ಬಿಂದುಸಾರನ ಮರಣಕ್ಕೂ ಅಶೋಕನ ಪಟ್ಟಾಭಿಷೇಕಕ್ಕೂ ನಡುವೆ ನಾಲ್ಕು ವರ್ಷಗಳ ಅಂತರ ಎಂದು ಸಿಂಹಳದ ಬೌದ್ಧಗ್ರಂಥಗಳು ಹೇಳುತ್ತವೆ. ಭ್ರಾತೃವಧೆಯ ಕಥೆಯನ್ನು ನಿರಾಕರಿಸಿದರೆ ಈ ನಾಲ್ಕು ವರ್ಷಗಳ

---

[1] *Asoka*, p. 19.

ಅಂತರವನ್ನೂ ನಾವು ಬಿಟ್ಟುಬಿಡಬಹುದು. "ಅಭಿಷಿಕ್ತನಾಗಿ ಹದಿಮೂರು ವರ್ಷಗಳಾದಾಗ" "ಅಭಿಷಿಕ್ತನಾಗಿ ಎಂಟು ವರ್ಷಗಳಾದಾಗ" ಎಂದು ಮುಂತಾಗಿ ಅಭಿಷೇಕವನ್ನೇ ತನ್ನ ಆಳಿಕೆಯ ಪ್ರಾರಂಭದ ಗುರುತಾಗಿ ಅಶೋಕನು ಪರಿಗಣಿಸುವುದರಿಂದ ಬಿಂದುಸಾರನ ಅನಂತರ ಅಭಿಷೇಕದ ವರೆಗೆ ಏನೋ ಕೆಲವು ಆತಂಕಗಳಿಂದ ಆ ಉತ್ಸವ ತಡವಾಗಿರಬೇಕೆಂದು ಕೆಲವರು ಊಹಿಸುವರು. ಕಳಿಂಗರಾಜನಾದ ಖಾರವೇಲನಿಗೆ ೨೫ನೆಯ ವಯಸ್ಸಿನಲ್ಲಿ ಪಟ್ಟಾಭಿಷೇಕವಾಯಿತು. ಅಂತೆಯೇ ಅಶೋಕನಿಗೂ ಆಗಿರಬೇಕು; ಆ ವಯಸ್ಸು ತುಂಬಲು ನಾಲ್ಕು ವರ್ಷ ಕಾಯಬೇಕಾಯಿತೋ ಏನೋ ಎಂದು ಕೆಲವರು ವಾದಿಸುತ್ತಾರೆ.[1] ಇವೆಲ್ಲ ಬರಿಯ ನಿರರ್ಥಕ ಚರ್ಚೆ . . . ಅಶೋಕನ ಮೊಮ್ಮಗನಾದ ದಶರಥನೂ ನಾಗಾರ್ಜುನಿ ಪರ್ವತದಲ್ಲಿನ ಗುಹಾವಸತಿಗಳನ್ನು ದಾನಮಾಡಿದನೆಂದು ಹೇಳುವ ಶಾಸನಗಳಲ್ಲಿ "ಅಭಿಷಿಕ್ತನಾಗಿ" ಎಂದು ಪ್ರಾರಂಭಿಸಿ, ಅಲ್ಲಿಂದ ಮುಂದಕ್ಕೆ ವರ್ಷಗಳನ್ನೆಣಿಸುತ್ತಾನೆ! ಇದೇ ರೀತಿ ಊಹೆಗೆ ಅವಕಾಶ ಕೊಟ್ಟರೆ ದಶರಥನ ತಂದೆಯ ಮರಣಕ್ಕೂ ಅವನ ಪಟ್ಟಾಭಿಷೇಕಕ್ಕೂ ಅಣ್ಣತಮ್ಮಂದಿರ ವ್ಯಾಜ್ಯದಿಂದಲೋ ವಯಸ್ಸು ಕಡಮೆಯಾಗಿದ್ದುದರಿಂದಲೋ ಕೆಲವು ವರ್ಷಗಳ ಅಂತರವಿದ್ದಿರಬೇಕೆಂದು ವಾದಿಸಬೇಕಾಗುವುದು[2]!

ಆದ್ದರಿಂದ ಯಾವ ತೊಂದರೆಯೂ ಇಲ್ಲದೆ ಅಶೋಕನು ಸಿಂಹಾಸನಕ್ಕೆ ಬಂದನೆಂದು ಹೇಳುವುದೇ ಸೂಕ್ತ. ಸುಮನನೆಂಬ ಒಬ್ಬ ಅಣ್ಣ ಇದ್ದಿದ್ದರೂ ಕೂಡ ಅಶೋಕನನ್ನೇ ಆಸ್ಥಾನದ ಅಮಾತ್ಯರೂ ಹಿರಿಯರೂ ಚಕ್ರವರ್ತಿ ಪದಕ್ಕೆ ಅರ್ಹನೆಂದು ಆರಿಸಿರಬಹುದು. ಮುಂದೆ, ಗುಪ್ತರಾಜವಂಶದ ಚರಿತ್ರೆಯಲ್ಲೂ ಕೂಡ ಸಮುದ್ರಗುಪ್ತನನ್ನು ಅವನ ಸಾಮರ್ಥ್ಯವೊಂದನ್ನೇ ಗಣನೆಗೆ ತಂದುಕೊಂಡು, ಇತರರೆಲ್ಲರನ್ನೂ ದೂಡಿ, ಸಿಂಹಾಸನಕ್ಕೆ ಆರಿಸಿದರು.

ಅತಿ ವಿಶಾಲವಾದ ಸಾಮ್ರಾಜ್ಯವನ್ನಾಳುತ್ತಿದ್ದರೂ ಅಶೋಕನು ಮಹಾರಾಜಾಧಿರಾಜ, ಮಹಾರಾಜ ಮುಂತಾದ ಬಿರುದುಗಳು ಯಾವುದನ್ನೂ ಉಪಯೋಗಿಸುತ್ತಿಲ್ಲ. ಆಗಿನ ಕಾಲದಲ್ಲಿ ಅವು ಇನ್ನೂ ಬಳಕೆಯಾಗಿರಲಿಲ್ಲವೋ ಏನೋ? ನರೇಂದ್ರ, ಸಮ್ರಾಟ್ ಮುಂತಾದ ಇತರ ಬಿರುದುಗಳು ಪ್ರಚಾರದಲ್ಲಿದ್ದರೂ, ಅಶೋಕನು ಅವುಗಳನ್ನು ಹೇಳುತ್ತಿಲ್ಲ. ಒಂದೇ ಒಂದು ಶಾಸನದಲ್ಲಿ ಮಾತ್ರ ಅವನು ತನ್ನನ್ನು "ಮಗಧರಾಜ" ಎಂದು ಹೇಳಿ

---

[1] Jayaswal, *Hindu Polity* II, p. 52-3.

[2] D. R. Bhandarkar, *Asoka*, p. 9.

ಕೊಂಡಿದ್ದಾನೆ. ಮಿಕ್ಕವುಗಳಲ್ಲಿ ದೇವಾನಾಂಪ್ರಿಯ, ದೇವಾನಾಂಪ್ರಿಯ ರಾಜ, ದೇವಾನಾಂಪ್ರಿಯ ಪ್ರಿಯದರ್ಶಿ, ಪ್ರಿಯದರ್ಶಿ ರಾಜ, ರಾಜಾ ಪ್ರಿಯ ದರ್ಶಿ ಎಂದು ಹೇಳಿಕೊಂಡಿರುವನೇ ಹೊರತು ತನ್ನ ಹೆಸರನ್ನೂ ಹೇಳಿಲ್ಲ. ಅಂದರೆ, ಮಾಸ್ಕಿ ಶಾಸನದಲ್ಲಿ ಮಾತ್ರ 'ಅಶೋಕ' ಎಂಬ ಹೆಸರುಬಂದಿದೆ. ಆ ಶಾಸನವನ್ನು ಕಂಡುಹಿಡಿದಂದಿನಿಂದೀಚೆಗೆ ದೇವಾನಾಂಪ್ರಿಯ ಪ್ರಿಯದರ್ಶಿ ಎಂಬ ಬಿರುದುಗಳು ಅಶೋಕನದೆಂದೂ ಆ ಶಾಸನಗಳೆಲ್ಲವೂ ಅಶೋಕನವೆಂದೂ ಸ್ಪಷ್ಟವಾದುವು.

ದೇವಾನಾಂಪ್ರಿಯ ಎಂಬ ಪದಕ್ಕೆ ಈಚೆಗೆ ದಡ್ಡ ಮೂರ್ಖ ಎಂಬ ಅರ್ಥ ಬಂದಿರುವುದು ಆ ಮಾತಿನ ದುರ್ದೈವ. ಆದರೆ ಆಗ ಅದಕ್ಕೆ ದೇವತೆ ಗಳಿಗೆ ಪ್ರಿಯವಾದವನು ಎಂಬ ಅರ್ಥವೇ ಇತ್ತು. ದ್ವೀಪವಂಶ ಎಂಬ ಪಾಲಿಗ್ರಂಥದಲ್ಲಿ ದೇವಾನಾಂಪ್ರಿಯ ಎಂಬ ಪದವನ್ನು ಸಾಮಾನ್ಯವಾಗಿ 'ರಾಜ' ಎಂಬುದಕ್ಕೆ ಬದಲಾಗಿಯೇ ಉಪಯೋಗಿಸಿದೆ. "ಬಹುಕಾಲದವರೆಗೆ ದೇವಾನಾಂಪ್ರಿಯರು ವಿಹಾರಯಾತ್ರೆ ಎಂಬುದನ್ನು ಮಾಡುತ್ತಿದ್ದರು" ಎಂದು ಅಶೋಕನೂ ಹೇಳುತ್ತಾನೆ. ಇದೇ ೮ ನೆಯ ಶಾಸನವನ್ನು ಕಾಲ್‌ಸಿ ಮಾರ್ನಸೆರಾ ಧೌಳಿ ಎಂಬ ಸ್ಥಳಗಳಲ್ಲಿ ಬರೆದ ಲಿಪಿಕಾರರು "ಬಹುಕಾಲದ ವರೆಗೆ 'ರಾಜರು' ವಿಹಾರಯಾತ್ರೆ ಹೋಗುತ್ತಿದ್ದರು" ಎಂದು ಬರೆದಿದಾರೆ. ಆದ್ದರಿಂದ ಚಂದ್ರಗುಪ್ತ ಬಿಂದುಸಾರರಿಗೂ ಈ ಬಿರುದಿತ್ತೆಂದೂ ದೇವಾ ನಾಂಪ್ರಿಯ ಎಂಬುದು ರಾಜ ಎಂಬುದಕ್ಕೆ ಬದಲಾಗಿ ಆಗ ವಾಡಿಕೆಯಲ್ಲಿ ತ್ತೆಂದೂ ಗೊತ್ತಾಗುತ್ತದೆ. ಅಶೋಕನ ಸಮಕಾಲೀನನಾದ ಸಿಂಹಳದ "ತಿಸ್ಸ" ಎಂಬ ರಾಜನಿಗೂ ಅಶೋಕನ ಮೊಮ್ಮಗನಾದ ದಶರಥನಿಗೂ[1] ದೇವಾನಾಂಪ್ರಿಯ ಎಂಬ ಬಿರುದಿತ್ತು.

ಹಾಗೆಯೇ ಪ್ರಿಯದರ್ಶಿ ಎಂಬ ಬಿರುದನ್ನೂ ದ್ವೀಪವಂಶದಲ್ಲಿ ಅಶೋಕನಿಗೆ ಉಪಯೋಗಿಸಿದೆ. ಮುದ್ರಾರಾಕ್ಷಸ ನಾಟಕದಲ್ಲಿ ಚಂದ್ರಗುಪ್ತನನ್ನು "ಪ್ರಿಯದರ್ಶನ" ಎಂದು ಹೊಗಳಿರುವುದರಿಂದ ಈ ಎರಡು ಮಾತುಗಳಿಗೂ ಸಂಬಂಧವಿದ್ದರೂ ಇರಬಹುದು. ದೇವತೆಗಳಿಗೆ ಪ್ರಿಯನಾದವನು ಎಂದು ಒಂದು ಬಿರುದಿನ ಅರ್ಥ, ಮಾನವರಿಗೆ ಪ್ರಿಯನಾದವನು ಎಂದು ಮತ್ತೊಂದರ ಅರ್ಥ—ಇವೆರಡೂ ಅಶೋಕನಿಗೂ ಅವನ ಪ್ರಜೆಗಳಿಗೂ ಅಚ್ಚುಮೆಚ್ಚಾದದ್ದ ರಲ್ಲಿ ಆಶ್ಚರ್ಯವಿಲ್ಲ. ಆಳುವ ಮಹಾಸ್ವಾಮಿಯವರ ಹೆಸರನ್ನು ಅವರ ಆಳ್ವಿಕೆಗೊಳಪಟ್ಟ ಜನರು ಇಟ್ಟಾಡುವುದು ಸಮಂಜಸವಲ್ಲವೆಂಬ ನಂಬಿಕೆಯಿಂದ

[1] *I. A.* xx, 364 ff.

ಶಾಸನಗಳಲ್ಲಿ ಅಶೋಕನ ಹೆಸರು ಬರೆದಿಲ್ಲವಾದರೂ ಅಪ್ಪಿತಪ್ಪಿ ಒಬ್ಬ ಲಿಪಿಕಾರನು ಮಾಡಿದ ಅಚಾತುರ್ಯದಿಂದ ಚರಿತ್ರಕಾರರಿಗೆ ಮಹೋಪ ಕಾರವಾಯಿತು !

ಬ್ರಾಹ್ಮಣಧರ್ಮವನ್ನು ಅವಲಂಬಿಸಿದ್ದ ಚಂದ್ರಗುಪ್ತನು ಕಡೆಗೆ ಜೈನ ಶಾಸನ ದೀಕ್ಷೆಯನ್ನು ತೆಗೆದುಕೊಂಡನೆಂಬ ಕಥೆಗೆ ಆಧಾರ ಸಾಲದು. ಬಿಂದುಸಾರನ ಮತವೂ ತಂದೆಯದೇ ಆಗಿದ್ದಿರಬೇಕು. ಆದರೆ, ಪಿಂಗಳ ವತ್ಸ ಎಂಬ 'ಆಜೀವಿಕ'ನಿಗೆ ಬಿಂದುಸಾರನ ಆಸ್ಥಾನದಲ್ಲಿ ಗಣ್ಯಸ್ಥಾನ ವಿತ್ತೆಂದು ತೋರುತ್ತದೆ. ತನ್ನ ಮಕ್ಕಳಲ್ಲಿ ಮುಂದೆ ರಾಜ್ಯಭಾರದ ಹೊರೆ ಯನ್ನು ನಿರ್ವಹಿಸಲು ಯಾರು ಯೋಗ್ಯರೆಂದು ನಿರ್ಧರಿಸಲು ಬಿಂದುಸಾರನು ಪಿಂಗಳವತ್ಸನನ್ನೇ ನಿಯಮಿಸಿದನು. ಯಾನ ಆಸನ ಭಾಜನ ಪಾನ ಭೋಜನ ಮುಂತಾದುವುಗಳಿಂದ ರಾಜಕುಮಾರರನ್ನು ಅವನು ಪರೀಕ್ಷಿಸಿ ಅಶೋಕ ನನ್ನೇ ಮೆಚ್ಚಿದನು. "ಮಹಾವಂಶ ಟೀಕಾ" ಎಂಬ ಗ್ರಂಥದಲ್ಲಿ ಜನಸಾನ ಎಂಬ ಮತ್ತೊಬ್ಬ ಆಜೀವಿಕ ಗುರುವನ್ನು ಬಿಂದುಸಾರನು ಆಗಾಗ್ಗೆ ಅರಮನೆಗೆ ಕರೆಸಿ ಸಮಾಲೋಚನೆ ಮಾಡುತ್ತಿದ್ದನೆಂದು ಹೇಳಿದೆ. ಆದ್ದರಿಂದ ಬಿಂದು ಸಾರನ ಕಾಲದಲ್ಲೂ, ಭಾರತೀಯ ರಾಜಧರ್ಮದ ಉಪದೇಶದಂತೆ, ವಿವಿಧ ಧರ್ಮಗಳನ್ನು ಶರಣುಹೊಕ್ಕವರಿಗೆ, ರಾಜರು ಮನ್ನಣೆ ಕೊಡುತ್ತಿದ್ದರೆಂದು ಗೊತ್ತಾಗುತ್ತದೆ.

ಅಶೋಕ ಬಹುಕಾಲದವರೆಗೆ ಬೌದ್ಧಧರ್ಮಕ್ಕೆ ಸೇರಲಿಲ್ಲ. ಅನೇಕ ಶತಸಹಸ್ರ ಪ್ರಾಣಿಗಳನ್ನು ಅರಮನೆಯ ಅಡುಗೆಮನೆಯಲ್ಲಿ ಸೂಪಾದಿಗಳಿಗಾಗಿ ಕೊಲ್ಲಲು ಅವನ ಧರ್ಮ ಅವಕಾಶಕೊಡುತ್ತಿತ್ತು. ಪ್ರಾಣಿಗಳನ್ನು ಬೇಟೆ ಯಾಡಿ ಸಾಯಿಸಲು ಅದರ ಒಪ್ಪಿಗೆ ಇತ್ತು. ಆದರೆ, ಇದ್ದಕ್ಕಿದ್ದ ಹಾಗೆ, ಅವನ ಜೀವನವನ್ನು ಒಂದು ಕಾಳರಾತ್ರಿ ಆವರಿಸಿತು; ಅವನ ಅಂತಃಕರಣ ಕದಡಿತು; ಅವನ ಬಾಳುವೆಯೆಲ್ಲ ಮಥನಹೊಂದಿತು; ಕಡೆಗೆ ಅವನಿಗೆ ಜ್ಞಾನೋದಯ ಉಂಟಾಯಿತು. ಅವನು ಬೌದ್ಧಧರ್ಮವನ್ನು ಅವಲಂಬಿಸಿದನು.

ಕ್ರಾಂತಿಕಾರಕವಾದ ಆ ಸಂಘಟನೆ ಯಾವುದು? ಅದನ್ನು ಒಂದೊಂದು ಗ್ರಂಥ ಒಂದೊಂದು ಬಗೆಯಾಗಿ ನಿರ್ದೇಶಿಸಿದೆ. 'ದಿವ್ಯಾವದಾನ'ದಲ್ಲಿ ಉಕ್ತ ವಾಗಿರುವ ಕಥೆ ಬಹಳ ಸ್ವಾರಸ್ಯವಾಗಿದೆ. "ಅಶೋಕನು ಚಂಡಗಿರಿಕ ಎಂಬ ಒಬ್ಬ ಹಿಂಸಕನಿಂದ ವಿಚಿತ್ರವಾದ ಒಂದು ಕಾರಾಗೃಹವನ್ನು ನಿರ್ಮಿಸಿದ್ದನು. ಅದರ ಬಾಗಿಲುಗಳು ಮನಮೋಹಕವಾಗಿದ್ದವು; ಆದರೆ, ಒಳಗೆ ಹೋಗುತ್ತಾ ಹೋಗುತ್ತಾ ಅದು ಹೆಚ್ಚು ಹೆಚ್ಚು ಭಯಂಕರವಾಗಿ ಕಾಣಿಸುವುದು.

ಅಶೋಕನ ಕಿಂಕರರು ಒಂದುದಿನ ಸಮುದ್ರ ಎಂಬ ಒಬ್ಬ ಬೌದ್ಧಸಂನ್ಯಾಸಿಯನ್ನು ಎಳೆತಂದು ಅದರೊಳಕ್ಕೆ ದಬ್ಬಿದರು. ತನ್ನ ಅವಸಾನಕಾಲ ಸಮೀಪಿಸಿತೆಂಬ ತಿಳಿವುಂಟಾದಾಗ ಸಮುದ್ರನು ಸಾವಿಗೆ ಮನಸೋಲದೆ ಹಿಂಸೆಗೆ ಎದೆಗುಂದದೆ ಕೇವಲ ಬುದ್ಧದೇವನ ಧ್ಯಾನದಲ್ಲೇ ನಿರತನಾಗಿ ನಿಶ್ಚಿಂತೆಯಿಂದಿದ್ದನು. ಹೀಗೆ ಆರುದಿನಗಳು ಕಳೆದುವು. ಏಳನೆಯ ದಿನ ಚಿತ್ರಹಿಂಸೆಗಳು ಮತ್ತಷ್ಟು ಕ್ರೂರವಾದವು. ಆದರೂ, ಧಗಧಗನೆ ಉರಿಯುವ ಬೆಂಕಿಯ ನಡುವೆ ತಾವರೆ ಹೂವಿನ ಮೇಲೆ ಕುಳಿತವನಂತೆ ಸಮುದ್ರನು ತಣ್ಣನೆ ನಗುತ್ತಿದ್ದನು. ಇದನ್ನು ಕಂಡು ಕೆರಳಿದ ಗಿರಿಕನು ಅಶೋಕನಲ್ಲಿಗೆ ಓಡಿಹೋಗಿ ಸಮಾಚಾರ ತಿಳಿಸಿದನು. ಅಶೋಕನು ಬಂದಾಗ ಸಮುದ್ರನು ಇನ್ನೂ ಅನೇಕ ಪವಾಡಗಳಿಂದ ಅವನನ್ನು ಬೆರಗುಮಾಡಿದನು. ಅಶೋಕನು ಚತುರ್ಭಾಗ ಚಕ್ರವರ್ತಿಯಾಗಿ ಧರ್ಮರಾಜನೆನಿಸುವನೆಂದು ಬುದ್ಧದೇವನು ನುಡಿದ ಭವಿಷ್ಯವನ್ನು ಸಮುದ್ರನು ಅವನಿಗೆ ತಿಳಿಸಿದನು. ಇಹಲೋಕದಲ್ಲಿ ನರಕವೊಂದನ್ನು ನಿರ್ಮಿಸಿ ಪ್ರಾಣಿಗಳನ್ನು ಹಿಂಸಿಸುವುದು ತರವಲ್ಲವೆಂದು ಬೋಧಿಸಿದನು. ಇದನ್ನು ಕೇಳಿ ಅಶೋಕನು ನಾಚಿಕೆಗೊಂಡು ಸಮುದ್ರನ ಕ್ಷಮೆಬೇಡುತ್ತ ಮುಂದೆ ಯಾವ ಪ್ರಾಣಿಯನ್ನೂ ಹಿಂಸಿಸುವುದಿಲ್ಲವೆಂದು ವಾಗ್ದಾನ ಮಾಡಿದನು. ಬುದ್ಧ ಭಗವಾನನ ಉಪದೇಶವನ್ನು ಸಮುದ್ರನಿಂದ ತಿಳಿದು ಧರ್ಮಾಶೋಕನಾಗಿ ರಾಜ್ಯವಾಳಿದನು. ಹಿಂಸಕನಾದ ಚಂಡಗಿರಿಕನನ್ನು ಕೊಂದನು; ನರಕವನ್ನು ನೆಲಸಮಮಾಡಿದನು."

ಸಿಂಹಳದ್ವೀಪದಲ್ಲಿ ಪ್ರಚಾರವಾಗಿರುವ ಕಥೆ ಬೇರೊಂದು ರೀತಿಯದು. "ಸಿಂಹಾಸನದ ಆಸೆಯಿಂದ ಅಶೋಕನು ಅಣ್ಣನಾದ ಸುಮನನನ್ನೂ ೯೮ ಸಹೋದರರನ್ನೂ ವಧಿಸಿದನಷ್ಟೆ. ಆದರೆ ಆಗ ಸುಮನನ ಪತ್ನಿ ಗರ್ಭವತಿಯಾಗಿದ್ದಳು. ದೇಶದ ಮೇಲೆ ಬೀಸಿ ಬರುತ್ತಿದ್ದ ಯುದ್ಧಕ್ಕೆ ಬೆದರಿ ಆಕೆ ಪಾಟಲೀಪುತ್ರದ ಪೂರ್ವದ ಬಾಗಿಲಿಂದಾಚೆಗಿದ್ದ ಚಂಡಾಲರ ಗುಡಿಸಲುಗಳಿಗೆ ಹೋಗಿ ಅಲ್ಲಿ ಆದಿನವೇ ನ್ಯಗ್ರೋಧ ಎಂಬ ಮಗನನ್ನು ಹೆತ್ತಳು. ತಾಯಿ ಮಕ್ಕಳನ್ನು ಆ ಚಂಡಾಲರು ಪ್ರೀತಿ ಗೌರವಗಳಿಂದ ಸಲಹಿದರು. ನ್ಯಗ್ರೋಧನು ತನ್ನ ಏಳನೆಯ ವರ್ಷದಲ್ಲೇ ಬೌದ್ಧಭಿಕ್ಷುವಾದನು. ಅವನು ಆಗಾಗ ಊರೊಳಕ್ಕೆ ಹೋಗಿ ಭಿಕ್ಷೆ ಬೇಡುತ್ತಿದ್ದನು. ಒಂದು ದಿನ ಅವನನ್ನು ಅಶೋಕನು ಕಂಡನು. ಬಾಲಸನ್ಯಾಸಿಯ ತೇಜಸ್ಸಿಗೆ ಬೆರಗಾಗಿ ಅವನನ್ನು ಅರಮನೆಗೆ ಕರೆದು ಉಪಚರಿಸಿದನು. ಆಗ ನ್ಯಗ್ರೋಧನು "ಉತ್ಥಾನವೇ ನಿರ್ವಾಣಪದಕ್ಕೆ ದಾರಿ; ಆಲಸ್ಯವೇ ಮರಣಕ್ಕೆ ದಾರಿ" ಎಂದು ಹೇಳಿ

ಅಶೋಕನನ್ನೆಚ್ಚರಿಸಿ ಬುದ್ಧಧರ್ಮವನ್ನು ಸಂಕ್ಷೇಪವಾಗಿ ಬೋಧಿಸಿದನು. ಅಂದಿನಿಂದ ಅಶೋಕನು ಬೌದ್ಧನಾದನು; ತಂದೆಯ ಕಾಲದಿಂದಲೂ ತಾನು ಅನುಸರಿಸುತ್ತಿದ್ದ ಬ್ರಾಹ್ಮಣ ಮತವನ್ನು ತ್ಯಜಿಸಿದನು. ಅರಮನೆಯಲ್ಲಿ ದಿನವೂ ಭೋಜನಮಾಡುತ್ತಿದ್ದ ೬೦,೦೦೦ ಬ್ರಾಹ್ಮಣರನ್ನು ಹೊರಕ್ಕೆ ಕಳುಹಿಸಿ ಅವರಿಗೆ ಬದಲಾಗಿ ಅಷ್ಟುಜನ ಬೌದ್ಧಭಿಕ್ಷುಗಳನ್ನು ಕರೆಯಿಸಿದನು." . . .

ಕಲಿಂಗ ಯುದ್ಧದಲ್ಲಾದ ಮನೋವೇದನೆಯಿಂದ ಅಶೋಕನಲ್ಲಿ ಅಹಿಂಸಾ ಬುದ್ಧಿ ಹುಟ್ಟಿತೆಂದೂ ಅಂದಿನಿಂದ ಅವನು ಬುದ್ಧ ಧರ್ಮ ಸಂಘ ಎಂಬ ತ್ರಿರತ್ನಗಳಿಗೆ ಮನಸೋತು ಉಪಾಸಕನಾದನೆಂದೂ ಸಾಮಾನ್ಯವಾಗಿ ಎಲ್ಲರೂ ನಂಬುವರು. ಆದರೆ ಅಶೋಕನು "ಈಗ ಕಲಿಂಗರು ಕೈವಶರಾದನಂತರ ದೇವಾನಾಂಪ್ರಿಯನ ಧರ್ಮಪಾಲನೆ ಧರ್ಮಕಾಮತೆ ಹಾಗೂ ಧರ್ಮಾನುಶಾಸ್ತಿ 'ತೀವ್ರವಾದುವು'" ಎಂದು ಹೇಳಿರುವುದರಿಂದ ಆ ಯುದ್ಧದ ಮೊದಲೇ ಅಶೋಕನಿಗೆ ಅದರಲ್ಲಿ ಭಕ್ತಿಗೌರವಗಳು ಮೊಳಕೆಯಾಗಿತ್ತೆಂದು ಹೇಳಿದರೆ ತಪ್ಪಾಗಲಾರದು.

"ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಅಭಿಷಿಕ್ತನಾಗಿ ಹತ್ತುವರ್ಷಗಳಾದಾಗ ಸಂಬೋಧಿಗೆ ಹೋದನು; ಇದರಿಂದಲೇ ಧರ್ಮಯಾತ್ರೆ ಮೊದಲಾದುದು," ಎಂದು ಅಶೋಕನು ಹೇಳಿರುವನು. "ಅಯಾಯ ಸಂಬೋಧಿ." "ನಿಷ್ಕ್ರಮಿತಾ ಸಂಬೋಧಿ" ಅಂದರೆ ಏನು? ಉಪಗುಪ್ತ ಮೊದಲಾದ ಗುರುಗಳನ್ನು ಸಮೀಪಿಸಿ ಸಂಬೋಧಿ ವ್ರತವನ್ನು ತಿಳಿದು ಸಂಬೋಧಿ ಸಾಧನೆಯ ಮಾರ್ಗವನ್ನು ಅರಿತದ್ದೆಂದು ಕೆಲವರೂ[1] ಬುದ್ಧದೇವನು ಬೋಧಿ ಜ್ಞಾನವನ್ನು ಪಡೆದ ಗಯೆಗೆ ತೀರ್ಥಯಾತ್ರೆ ಹೋದದ್ದೆಂದು ಕೆಲವರೂ[2] ಇದಕ್ಕೆ ಅರ್ಥ ಹೇಳುವರು. ಇದರಿಂದ 'ಧರ್ಮಯಾತ್ರೆ' ಮೊದಲಾಯಿತು ಎಂದು ಅಶೋಕನು ಸಾರಿರುವುದರಿಂದ ಅಶೋಕನು ಮಾಡಿದ್ದೂ ಒಂದು ಯಾತ್ರೆಯೇ ಇರಬೇಕೆಂಬ ಅಭಿಪ್ರಾಯವೇ ಸಮಂಜಸವಾಗಿದೆ. ಅಭಿಷಿಕ್ತನಾದ ಹತ್ತನೆಯ ವರ್ಷದಲ್ಲಿ ಬೋಧಿವೃಕ್ಷದರ್ಶನಕ್ಕಾಗಿ ತೀರ್ಥಯಾತ್ರೆ ಹೊರಡುವಷ್ಟು ವೀರಭಕ್ತನಾದ ಅಶೋಕನು "ನಾನು ಉಪಾಸಕನಾಗಿ ಎರಡೂವರೆ ವರ್ಷಗಳಿಗಿಂತ ಹೆಚ್ಚು ಕಾಲವಿದ್ದೆನು. ಆದರೆ ಒಂದು ಸಂವತ್ಸರದ ವರೆಗೆ ನಾನು ಚೆನ್ನಾಗಿ ಪ್ರಯತ್ನಿಸಲಿಲ್ಲ. ಆದರೆ ಈಗ ಒಂದು ಸಂವತ್ಸರಕ್ಕಿಂತ ಹೆಚ್ಚುಕಾಲ ಸಂಘವನ್ನು ಪ್ರವೇಶಿಸಿ ಚೆನ್ನಾಗಿ ಪ್ರಯತ್ನಿಸುತ್ತಿರುವೆನು.'

---

[1] R. K. Mukherji p. 151 n.
[2] D. R. Bhandarkar p. 75

ಎಂದು ಒಪ್ಪಿಕೊಂಡಿದಾನೆ. ಅಂದರೆ, ಕಲಿಂಗಯುದ್ಧಕ್ಕೆ ಒಂದೆರಡು ವರ್ಷ ಮೊದಲೇ ಅವನು ಉಪಾಸಕನಾಗಿ ಸೇರಿ. ಅದಾದನಂತರ ಧರ್ಮಾಭಿಲಾಷೆ ಹೆಚ್ಚಿ ಸಂಘದ ಸಹವಾಸದಲ್ಲಿ ಮತ್ತಷ್ಟು ದಿನವಿದ್ದು ಫಲ ಪಡೆದಿರಬೇಕೆಂದು ನಾವು ಊಹಿಸಬಹುದಾಗಿದೆ.

ಅಶೋಕನ ಜೀವನಚರಿತ್ರೆಯ ವಿಷಯವಾಗಿ ಈ ವಿಧದ ಊಹಾಪೋಹಗಳಲ್ಲದೆ ನಿರ್ದಿಷ್ಟವಾದ ನಿಶ್ಚಯಗಳಿಗೆ ಆಧಾರ ಸಾಲದು. ಕಾಶ್ಮೀರದ ಪ್ರಾಚೀನ ಇತಿಹಾಸವನ್ನು ತಿಳಿಸುವ ರಾಜತರಂಗಿಣಿ ಎಂಬ ಒಂದು ಮಹಾಕಾವ್ಯವಿದೆ. ಅದರಲ್ಲಿ ಅಲ್ಲಿಯ ಅನೇಕ ರಾಜವಂಶಗಳ ಚರಿತ್ರೆ ಇದೆ. ಜನಜನಿತವಾದ ಹಲವಾರು ಐತಿಹ್ಯಗಳ ಆಧಾರದ ಮೇಲೆ ಕ್ರಿ.ಶ. ಸುಮಾರು ೧೧೦೦ ರಲ್ಲಿ ಅದನ್ನು ಕಲ್ಹಣ ಎಂಬ ಕವಿ ಬರೆದಿದಾನೆ. ರಾಜತರಂಗಿಣಿಯಲ್ಲಿ ಹೇಳಿರುವ ಕಥೆಗಳಿಂದ ಅಶೋಕನು ವಿಜಯೇಶ್ವರ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದನೆಂದೂ, ಅದರ ಸಮೀಪದಲ್ಲೇ ಎರಡು ಅಶೋಕೇಶ್ವರ ದೇವಸ್ಥಾನಗಳನ್ನು ಕಟ್ಟಿಸಿದನೆಂದೂ ಗೊತ್ತಾಗುತ್ತದೆ. ತನ್ನ ಹೆಸರಿನಲ್ಲೇ ಈಶ್ವರ ವಿಗ್ರಹಗಳನ್ನು ಪ್ರತಿಷ್ಠೆಮಾಡಿಸಿದ ಅಶೋಕನು ಮೊದಲು ಶಿವನ ಆರಾಧಕನಾಗಿದ್ದಿರಬಹುದೆಂದು ಊಹಿಸಲು ಕಾರಣವಿದೆ.

ಅಭಿಷಿಕ್ತನಾಗಿ ನಾಲ್ಕು ವರ್ಷಗಳಾದಾಗ ಅಶೋಕನಿಗೆ ಬೌದ್ಧಧರ್ಮದ ಪ್ರಭಾವ ಗೋಚರವಾಗತೊಡಗಿರಬೇಕು. ಏಕೆಂದರೆ, ಆಗ ಮಹಾಧರ್ಮರಕ್ಷಿತ ಎಂಬ ಸ್ಥವಿರನ ಪಾಂಡಿತ್ಯಕ್ಕೂ ಗುಣಶೀಲಗಳಿಗೂ ಮನಸೋತು ಅಶೋಕನ ತಮ್ಮನಾದ ತಿಷ್ಯನು ಬೌದ್ಧಭಿಕ್ಷುವಾದನು. ಅದೇ ವರ್ಷದಲ್ಲಿ ಅವನ ಅಳಿಯ ಅಗ್ನಿಬ್ರಹ್ಮನೂ ಗೃಹಸ್ಥಾಶ್ರಮವನ್ನು ತ್ಯಜಿಸಿದನು. ಇದಾದ ಎರಡು ವರ್ಷಗಳಲ್ಲಿ ಸುಮಾರು ಇಪ್ಪತ್ತು ವಯಸ್ಸಿನ ಅಶೋಕನ ಮಗ ಮಹೇಂದ್ರನೂ ಹದಿನೆಂಟು ವರ್ಷ ವಯಸ್ಸಿನ ಮಗಳು ಸಂಘಮಿತ್ರಳೂ ಭಗವಾನ್ ಬುದ್ಧನ ಉಪದೇಶಾಮೃತಕ್ಕೆ ಮನಗೊಟ್ಟು ಸಂಘವನ್ನು ಸೇರಲು ಅಪ್ಪಣೆ ಬೇಡಿದರು. ಮಗನನ್ನೂ ಮಗಳನ್ನೂ ಸಂಘಕ್ಕೆ ಧಾರೆ ಎರೆದಂದಿನಿಂದ ಅಶೋಕನು 'ಶಾಸನ ದಾಯಾದ' ಎಂಬ ಬಿರುದಿಗೆ ಅರ್ಹನಾದನು. ಅದುವರೆಗೂ ಅವನು ಪ್ರೀತ್ಯಾದರಗಳಿಂದ ಭಿಕ್ಷುಗಳಿಗೆ ವಸ್ತ್ರ ವಸತಿ ಆಹಾರ ಔಷಧ ಇವುಗಳನ್ನು ಹೇರಳವಾಗಿ ದಾನಮಾಡಿ 'ಪಚ್ಚಯದಾಯಕ' ಎಂಬ ಗೌರವವನ್ನು ಸಂಪಾದಿಸಿದ್ದನು. ರಾಜಕುಮಾರನಾದ ಮಹೇಂದ್ರನು ಮೊಗ್ಗಲೀಪುತ್ತ ತಿಸ್ಸನ ಶಿಷ್ಯನಾಗಿ ಮೂರು ವರ್ಷದೊಳಗೆ ತ್ರಿಪಿಟಕಗಳನ್ನೂ ಕಲಿತು ಧರ್ಮದಲ್ಲಿ ಪಾರಂಗತನಾದನಂತೆ. ಸಂಘಮಿತ್ರಳೂ ಕೂಡ

ಧರ್ಮಪಾಲಾ ಎಂಬ ಭಿಕ್ಷುಣಿಯಿಂದ ದೀಕ್ಷೆ ಪಡೆದು ಸಾತ್ವಿಕಶೀಲಗಳಿಂದ ಶೋಭಿಸಿದಳು.

ಅಶೋಕನ ಜೀವನದಲ್ಲಿ ಬಹು ಮುಖ್ಯವಾದ ಒಂದು ಸಂಘಟನೆಯೆಂದರೆ ಕಲಿಂಗಯುದ್ಧ. ಬೌದ್ಧರ ಧರ್ಮಗ್ರಂಥಗಳಲ್ಲಿ ಇದರ ಪ್ರಸ್ತಾಪವೇ ಇಲ್ಲದಿರುವುದು ಆಶ್ಚರ್ಯ. ಆದರೂ ಈ ಯುದ್ಧದನಂತರ ಅಶೋಕನು ಮಾಡಿದ ವೀರಸಂಕಲ್ಪದ ಪ್ರತಿಧ್ವನಿ, ಅದರಿಂದ ಅವನ ಜೀವನದಲ್ಲುಂಟಾದ ಪರಿಪಕ್ವತೆಯ ನೆನಪು, ಆ ಗ್ರಂಥಗಳಲ್ಲಿ ಬರುವ ಕಥೆಗಳಲ್ಲೆಲ್ಲ ಮೊಳಗುತ್ತಿವೆ.

ಅಭಿಷಿಕ್ತನಾಗಿ ಎಂಟು ವರ್ಷಗಳಾದಾಗ ಅವನು ಕಲಿಂಗದೇಶದ ಮೇಲೆ ದಂಡೆತ್ತಿ ಹೋದನು. ಆಗಿನ ಕಾಲದ ರಾಜಧರ್ಮಕ್ಕೆ ಈ ರಾಜ್ಯಾಭಿಲಾಷೆ ಸಹಜವಾಗಿಯೇ ಇತ್ತು. ಯಾರು ಪ್ರಭುಶಕ್ತಿಯಲ್ಲಿ ಹೆಚ್ಚಿನವರೋ ಅವರು ಯುದ್ಧವನ್ನೇ ಮಾಡತಕ್ಕದ್ದು ಎಂದು ಕೌಟಿಲ್ಯನೂ ಉಪದೇಶಿಸುತ್ತಾನೆ. "ಅವಿಜಿತವಾದ ಒಂದು ದೇಶವನ್ನು ಜಯಿಸುವಾಗ ಅಲ್ಲಿ ಸೆರೆಯೂ ವಧೆಯೂ ಮರಣವೂ" ನಡೆಯುವುದು ಸಹಜವೆಂದು ಅಶೋಕನು ಹೇಳಿರುವುದರಿಂದ ಚಂದ್ರಗುಪ್ತ ಬಿಂದುಸಾರ ಇವರುಗಳ ಆಡಳಿತದಲ್ಲೂ ಕಲಿಂಗದೇಶ ಮೌರ್ಯರಿಗೆ ಸ್ವಾಧೀನವಾಗಿರಲಿಲ್ಲವೆಂದು ಊಹಿಸಬಹುದು. ಮೆಗಾಸ್ತನೀಸನ ವಿವರಣೆಯನ್ನು ನೋಡಿದರೆ ಆ ದೇಶ ಅಷ್ಟೊಂದು ಸುಸಜ್ಜಿತವಾಗಿರಲಿಲ್ಲವೆಂದು ಗೊತ್ತಾಗುತ್ತದೆ. ಕೇವಲ ೬೦ ಸಾವಿರ ಕಾಲಾಳುಗಳೂ ೧ ಸಾವಿರ ಕುದುರೆ ಸವಾರರೂ ೭೦೦ ಆನೆಗಳೂ ಮಾತ್ರ ಕಲಿಂಗಸೈನ್ಯದಲ್ಲಿದ್ದುವಂತೆ. ಈ ಅಂಕಿಗಳು ನಿಜವಾಗಿದ್ದಪಕ್ಷದಲ್ಲಿ ಕಲಿಂಗರು ಬಿಂದುಸಾರನ ಕಾಲದಲ್ಲಿ ತಮ್ಮ ಸೇನಾಬಲವನ್ನು ಬಹು ಸಾಹಸಪಟ್ಟು ತುಂಬಾ ಹೆಚ್ಚಿಸಿರಬೇಕೆಂದು ಕಾಣುತ್ತದೆ. ಏಕೆಂದರೆ ಕಲಿಂಗಯುದ್ಧ ನಡೆಯುತ್ತಿದ್ದಾಗ, "ಒಂದೂವರೆ ಶತಸಹಸ್ರ ಜನರನ್ನು ಅಲ್ಲಿಂದ ಸೆರೆಹಿಡಿದು ಸಾಗಿಸಲಾಯಿತು; ಶತಸಹಸ್ರ ಜನರು ಅಲ್ಲಿ ಹತರಾದರು ; ಅದಕ್ಕಿಂತ ಬಹುಮಂದಿ ಮೃತರಾದರು" ಎಂದು ಅಶೋಕನೇ ಹೇಳುತ್ತಾನೆ!

ಕಲಿಂಗದೇಶ ಕೈಸೇರಿತಾದರೂ ಅಶೋಕನು ತನ್ನ ದಿಗ್ವಿಜಯಕ್ಕಾಗಿ ಹಿಗ್ಗದೆ ತನ್ನ ತಿಳಿಗೇಡಿತನಕ್ಕಾಗಿ ತಲೆ ತಗ್ಗಿಸಿದನು. "ಕಲಿಂಗವನ್ನು ಜಯಿಸಿದ್ದಕ್ಕಾಗಿ ದೇವಾನಾಂಪ್ರಿಯನು ಅನುಶೋಚಿಸುತ್ತಾನೆ" ಎಂದು ಪಶ್ಚಾತ್ತಾಪದಿಂದ ಮನಮರುಗಿದಾನೆ. ಅದೇ ಉಪಜೀವನದ ವೃತ್ತಿಯಾಗಿ ಸೈನ್ಯವನ್ನು ಸೇರಿದ್ದ ಭಟರ ವಧೆಗಿಂತ, ತಮ್ಮ ತಮ್ಮ ಕಸಬುಗಳನ್ನು ಮಾಡುತ್ತಾ ಇರುವ ಇತರರಿಗೂ ಕಷ್ಟನಷ್ಟ ಸಂಭವಿಸುವುದೇ ಯುದ್ಧದಲ್ಲಾಗುವ ದೊಡ್ಡ

ಅನಾಹುತ. ಇದನ್ನು ಅಶೋಕನು ಮನಗಂಡಿದ್ದನು. "ಅಲ್ಲದೆ ಹಿರಿಯರ ಶುಶ್ರೂಷೆ ಮಾತಾಪಿತೃಗಳ ಶುಶ್ರೂಷೆ ಗುರುಶುಶ್ರೂಷೆ, ಮಿತ್ರರು ಇಷ್ಟರು ಜ್ಞಾತಿಗಳು ದಾಸರು ಭೃತ್ಯರು ಇವರಲ್ಲಿ ಸಂಪ್ರತಿಪತ್ತಿ ದೃಢಭಕ್ತಿ ಮುಂತಾದವುಗಳಿಂದ ಕೂಡಿ ಅಲ್ಲಿ ವಾಸವಾಗಿದ್ದ ಬ್ರಾಹ್ಮಣರು ಶ್ರಮಣರು ಅನ್ಯಮತದವರು, ಗೃಹಸ್ಥರು, ಇವರಿಗೆ ಗಾಯ ನೋವು ಸಾವು ನಂಟರಿಷ್ಟರ ಅಗಲಿಕೆ ಇವು ಸಂಭವಿಸುವುದರಿಂದ ದೇವಾನಾಂಪ್ರಿಯನಿಗೆ ಇನ್ನೂ ಹೆಚ್ಚಿನ ವೇದನೆಯುಂಟಾಗಿದೆ" ಎಂದು ಅಶೋಕನು ಹೇಳುತ್ತಾನೆ. ಯುದ್ಧದಲ್ಲಿ ಶತ್ರುಗಳಿಗೆ ಸಹಜವಾಗಿ ಸಂಭವಿಸುವ ಇಂತಹ ಕಷ್ಟಗಳನ್ನು ಯಾವ ವಿಜಿಗೀಷು ತಾನೆ ಗಣನೆಗೆ ತೆಗೆದುಕೊಳ್ಳುತ್ತಾನೆ?

ಅದೂ ಅಲ್ಲದೆ, ಶತ್ರುಪಕ್ಷದವರಿಗೆ ಮಾತ್ರವೇ ಅಲ್ಲದೆ ಸಾವು ನೋವುಗಳು ತಮ್ಮ ಪಕ್ಷದವರಿಗೂ ಸಂಭವಿಸುವುದೆಂದು ಅಶೋಕನು ಅರಿತಿದ್ದನು. ವೀರಸ್ವರ್ಗ ಮುಂತಾದ ಗಾಳಿಗೋಪುರಗಳಿಂದ ಸಾಯುವವರ ಕಣ್ಣೊರಸಲು ಅವನು ಸಾಹಸಪಡಲಿಲ್ಲ. "ಶತಸಹಸ್ರ ಜನರು ಅಲ್ಲಿ ಹತರಾದರು" ಎಂದು ಹೇಳುವಾಗ ಉಭಯಪಕ್ಷದವರಿಗಾಗಿಯೂ ಅಶೋಕನು ಮರುಗುತ್ತಿರುವನೆಂದು ಭಾಸವಾಗುವುದು.

ಕಲಿಂಗ ಯುದ್ಧದಿಂದ ಅಶೋಕನ ಗರ್ವಪರ್ವತ ಕರಗಿತು. ಅವನು ಹಿಂಸಾಮಾರ್ಗವನ್ನೇ ತೊರೆದನು. ಅವನ ಜೀವನ ಒಂದು ನವೀನ ನೈರ್ಮಲ್ಯದಿಂದ ತೊಳಗಿತು. "ಧರ್ಮವಿಜಯವನ್ನೇ ಮುಖ್ಯವಾದ ವಿಜಯವೆಂದು ಭಾವಿಸುತ್ತೇನೆ" ಎಂದು ಸಂಕಲ್ಪಿಸಿ ಅಶೋಕನು ದಿಗ್ವಿಜಯಕ್ಕೆ ಹೇಸಿದನು. "ಬ್ರಾಹ್ಮಣ ಶ್ರಮಣರಿಲ್ಲದ ಜನಪದವೇ ಇಲ್ಲ. ಯಾವುದಾದರೊಂದು ಮತದಲ್ಲಿ ನಂಬಿಕೆಯನ್ನಿಡದ ಮನುಷ್ಯರು ಎಲ್ಲಿಯೂ ಇಲ್ಲ. ಆದ್ದರಿಂದ ಕಲಿಂಗದಲ್ಲಿ ಹತರಾದ ಮೃತರಾದ ಗಾಯಗೊಂಡ ಜನರ ಶತಭಾಗವಾಗಲಿ ಸಹಸ್ರಭಾಗವಾಗಲಿ ಈಗ ಅದೇ ಕಷ್ಟಕ್ಕೊಳಗಾದರೆ ದೇವಾನಾಂಪ್ರಿಯನಿಗೆ ವೇದನೆಯುಂಟಾಗುತ್ತದೆ" ಎಂದು ಅಶೋಕನು ಹೇಳುತ್ತಾನೆ. ದಿಗ್ವಿಜಯದಿಂದ ಗೆದ್ದವರಿಗೂ ಕೇಡು; ಬಿದ್ದವರಿಗೂ ಕೇಡು. ಆದರೆ, "ಧರ್ಮವಿಜಯದಿಂದ ಸರ್ವತ್ರ ಪ್ರೀತಿರಸವುಂಟಾಗಿದೆ, ಧರ್ಮವಿಜಯದಿಂದ ಪ್ರೀತಿ ಲಭಿಸುತ್ತದೆ. ಹಾಗೆ ಲಭಿಸಿದ ಪ್ರೀತಿ ಎಷ್ಟೇ ಸ್ವಲ್ಪವಾದರೂ, ಪರದಲ್ಲಿ ಅದರಿಂದ ಮಹತ್ತಾದ ಫಲವುಂಟೆಂದು ದೇವಾನಾಂಪ್ರಿಯನು ತಿಳಿದಿರುವನು" ಎಂದು ಅವನು ಸಾರುತ್ತಾನೆ.

ಹೀಗೆ, ಅಶೋಕನು ಅಮಿತೋತ್ಸಾಹದಿಂದ ಮೊದಲು ಮಾಡಿದ ಕಲಿಂಗ ದಂಡಯಾತ್ರೆ ಮಂಗಳದಲ್ಲೇ ಕೊನೆಗಂಡಿತು. "ದೇವಾನಾಂಪ್ರಿಯನ ಧರ್ಮ ಪಾಲನೆ ಧರ್ಮಕಾಮತೆ ಮತ್ತು ಧರ್ಮಾನುಶಾಸ್ತಿ ತೀವ್ರವಾದುವು." ಅಶೋಕನ ಆಡಳಿತವಿಧಾನದಲ್ಲೂ ರಾಜ್ಯಭರಣಸೂತ್ರಗಳಲ್ಲೂ ಹೊಸತನ ಕಂಡುಬಂತು. ಕಲಿಂಗದೇಶದವರಿಗಾಗಿಯೇ ಬರೆದು ಪ್ರಚುರಪಡಿಸಿದ ಎರಡು ಶಾಸನಗಳಿಂದ ಅಶೋಕನು ತನ್ನ ಹೊಸ ಪ್ರಜೆಗಳ ನೊಂದ ಹೃದಯವನ್ನು ಸಂತೈಸಲು ತವಕಪಟ್ಟನೆಂದು ಗೊತ್ತಾಗುತ್ತದೆ.

ಧರ್ಮವಿಜಯವೇ ಶ್ರೇಷ್ಠವೆಂದು ಕಣ್ಣುತೆರೆದ ಅಶೋಕನು ಕಲಿಂಗ ಯುದ್ಧವಾದ ಕೂಡಲೇ ಧರ್ಮಯಾತ್ರೆಗಳಲ್ಲಿ ನಿರತನಾದನು. ಎಂಟನೆಯ ಶಿಲಾಶಾಸನದಲ್ಲಿ "ಬಹುಕಾಲದ ವರೆಗೆ ದೇವಾನಾಂಪ್ರಿಯರು ವಿಹಾರ ಯಾತ್ರೆ ಎಂಬುದನ್ನು ಮಾಡುತ್ತಿದ್ದರು. ಆಗ, ಬೇಟೆ ಮತ್ತು ಇತರ ಮನೋರಂಜಕಗಳು ನಡೆಯುತ್ತಿದ್ದುವು. ಆದರೆ, ದೇವಾನಾಂಪ್ರಿಯ ಪ್ರಿಯ ದರ್ಶಿರಾಜನು ಅಭಿಷಿಕ್ತನಾಗಿ ಹತ್ತು ವರ್ಷಗಳಾದಾಗ ಸಂಬೋಧಿಗೆ ಹೋದನು. ಇದರಿಂದಲೇ ಧರ್ಮಯಾತ್ರೆ ಮೊದಲಾದುದು. ಆಗ ನಡೆಯುವು ದೇನೆಂದರೆ: ಬ್ರಾಹ್ಮಣ ಶ್ರಮಣರ ದರ್ಶನ, ಅವರಿಗೆ ದಾನ; ಹಿರಿಯರ ದರ್ಶನ, ಅವರಿಗೆ ಹಿರಣ್ಯದಾನ; ಜನಪದದ, ಜನರ, ದರ್ಶನ, ಅವರಿಗೆ ಧರ್ಮಾನು ಶಾಸ್ತಿ, ಅವರೊಂದಿಗೆ ಧರ್ಮವಿಷಯವಾದ ಚರ್ಚೆ" ಎಂದು ಹೇಳುತ್ತಾನೆ. ಅಶೋಕನು ಬೌದ್ಧಧರ್ಮಪ್ರೇಮಿಯಾಗಿದ್ದರೂ ಬ್ರಾಹ್ಮಣಧರ್ಮದವರನ್ನು ಪೂಜಿಸಿ ಅವರಿಗೆ ದಾನಮಾಡುತ್ತಿದ್ದುದು ರಾಜಧರ್ಮಕ್ಕೆ ಅನುಗುಣವಾಗಿಯೇ ಇದೆ. ಅಂತು, ಜೀವನದ ಈ ಹೊಸ ಧ್ಯೇಯದಿಂದ ಮತ್ತೊಂದು ಅಧ್ಯಾ ಯವೇ ಪ್ರಾರಂಭವಾಯಿತೆಂದು ಅಶೋಕನು ಅದೇ ಶಾಸನದಲ್ಲಿ "ಇದರಿಂದ ದೇವಾನಾಂಪ್ರಿಯ ಪ್ರಿಯದರ್ಶಿಗೆ ಹೆಚ್ಚು ಅಭಿರಾಮವಾಗಿದೆ" ಎಂಬುದರಿಂದ ಗೊತ್ತಾಗುತ್ತದೆ. ವಿಹಾರಯಾತ್ರೆ, ಯುದ್ಧ ಮುಂತಾದುವೆಲ್ಲವೂ ಮೊದಲ ನೆಯ ಭಾಗದ ಕಾರ್ಯಕ್ರಮಗಳು. ಧರ್ಮವಿಜಯ ಧರ್ಮಯಾತ್ರೆ ಇವು ಎರಡನೆಯ ಭಾಗದ ಕಾರ್ಯಕ್ರಮಗಳು. ಹಿಂದಿನ ಕಾಲಾಶೋಕ ಶ್ವೇತಾಶೋಕನಾದ; ಹಿಂದಿನ ಚಂಡಾಶೋಕ ಧರ್ಮಾಶೋಕನಾದ, ಎಂಬ ಅಭಿಪ್ರಾಯಕ್ಕೆ ಈ ಮಾತುಗಳು ನಿದರ್ಶನವಾಗಿವೆ.

ಬೌದ್ಧರೆಲ್ಲರೂ ಪೃಥಿವೀನಾಭಿ ಎಂದು ಕೊಂಡಾಡುವ ಸಂಬೋಧಿಗೆ ಅಶೋಕನು ಹೋದದ್ದು ತನ್ನ ಆಳ್ವಿಕೆಯ ಹತ್ತನೆಯ ವರ್ಷದಲ್ಲಿ. ಸಿಂಹಳ ದ್ವೀಪದ ಗ್ರಂಥಗಳಲ್ಲಿ ಅಶೋಕನನ್ನು ತೀರ್ಥಯಾತ್ರೆಗೆ ಪ್ರೇರೇಪಿಸಿದವನು

ಮೊಗ್ಗಲೀಪುತ್ತ ತಿಸ್ಸ ಎಂಬ ಸ್ಥವಿರನೆಂದೂ, ದಿವ್ಯಾವದಾನದಲ್ಲಿ ಆತನ ಹೆಸರು ಉಪಗುಪ್ತನೆಂದೂ ಹೇಳಿದೆ. ಆದರೂ, ಕಥೆಯಲ್ಲಿ ಮಾತ್ರ ಹೆಚ್ಚು ವ್ಯತ್ಯಾಸಗಳಿಲ್ಲ. ಸಂಘವು ಹೀನಸ್ಥಿತಿಗೆ ಬಂದಿರುವುದನ್ನು ಕಂಡು ಮನ ನೊಂದು ಸ್ಥವಿರನಾದ ತಿಸ್ಸನು ಗಂಗಾತಟದಲ್ಲೇ ಆಶ್ರಮ ಮಾಡಿಕೊಂಡಿದ್ದ. ಅವನ ಮಾಹಾತ್ಮ್ಯವನ್ನು ಕೇಳಿದ ಅಶೋಕನು ದೂತರನ್ನು ಕಳುಹಿಸಿ, ಧರ್ಮವನ್ನು ಉದ್ಧಾರಮಾಡಬೇಕು, ಸಂಘಕ್ಕೆ ನೆರವಾಗಬೇಕು, ಎಂದು ವಿಜ್ಞಾಪಿಸಿಕೊಂಡನು. ಗಂಗಾನದಿಯ ಮೇಲಿಂದ ಹಡಗಿನಲ್ಲೇ ಅವರು ಪಾಟಲೀಪುತ್ರಕ್ಕೆ ಬಂದರು. ಪ್ರೀತಿಗೌರವಗಳಿಂದ ಅಶೋಕನು ಅವರನ್ನು ಎದುರುಗೊಂಡು ಪೂಜಿಸಿದನು. ಚಕ್ರವರ್ತಿಯನ್ನು ಗುರುಗಳು ಆಶೀರ್ವದಿಸಿ ತಕ್ಕ ಉಪದೇಶವನ್ನು ನೀಡಿದರು. ಅನಂತರ ಭಗವಾನ್ ಬುದ್ಧನ ಜೀವನದಿಂದ ಪವಿತ್ರವಾದ ಪುಣ್ಯಸ್ಥಳಗಳನ್ನು ಸಂದರ್ಶಿಸಬೇಕೆಂದು ಬಿನ್ನವಿಸಿಕೊಂಡನು.

ಮೊದಲು ಲುಂಬಿನೀ ವನಕ್ಕೆ ಹೋದರು. "ಮಹಾರಾಜ! ಈ ಪ್ರದೇಶ ದಲ್ಲಿ ಭಗವಾನರು ಜನಿಸಿದರು" ಎಂದು ಗುರುಗಳು ಹೇಳಿದಾಗ ಅಶೋಕನು ಪುಳಕಿತಗಾತ್ರನಾಗಿ 'ಶತಸಹಸ್ರ'ವನ್ನು ದಾನಮಾಡಿ ಒಂದು ಚೈತ್ಯವನ್ನೂ ಪ್ರತಿಷ್ಠಿಸಿದನು. ಲುಂಬಿನೀ ಸ್ತಂಭಶಾಸನದಲ್ಲಿ ಅಶೋಕನು "ಇಲ್ಲಿ ಬುದ್ಧನು ಜನಿಸಿದನು" ಎಂದು ಬರೆಯಿಸಿ ಆ ಗ್ರಾಮಕ್ಕೆ ತಾನು ಬಂದುದರ ಜ್ಞಾಪಕಾರ್ಥವಾಗಿ ಮಾಡಿದ ಹಲಕೆಲವು ದಾನಗಳನ್ನೂ ಸೂಚಿಸಿರುವನು.

ಅಲ್ಲಿಂದ ಕಪಿಲವಾಸ್ತುವಿಗೆ ಹೋಗಿ ಗೌತಮಬುದ್ಧನ ಶೈಶವ ಬಾಲ್ಯ ಯೌವನಗಳಲ್ಲಾದ ಅನೇಕ ಸನ್ನಿವೇಶಗಳನ್ನು ನೆನೆದು ಆಯಾ ಪ್ರದೇಶಗಳಲ್ಲಿ ಸಲ್ಲಿಸಬೇಕಾದ ಆರಾಧನೆಯನ್ನು ಸಲ್ಲಿಸಿದರು. ಭಗವಾನರ ಹಜ್ಜೆಯನ್ನೇ ಹಿಡಿದು ಚಂದಕನಿಗೆ ಆಭರಣವನ್ನೂ ಕುದುರೆಯನ್ನೂ ಕೊಟ್ಟ ಸ್ಥಳ, ಕಾಷಾಯವಸ್ತ್ರವನ್ನುಟ್ಟ ಸ್ಥಳ, ಭಾರ್ಗವನ ಆಶ್ರಮ, ಬಿಂಬಿಸಾರನನ್ನು ಕಂಡ ಸ್ಥಳ, ಆರು ವರ್ಷಗಳು ಘೋರವಾದ ತಪಸ್ಸುಮಾಡಿದ ಪ್ರದೇಶ, ಹೀಗೆ ಕ್ರಮವಾಗಿ ನೋಡುತ್ತಾ ಬೋಧಿಮೂಲಕ್ಕೆ ಬಂದು ಅಲ್ಲಿಂದ ಕಾಶಿ ಋಷಿಪಟ್ಟಣಗಳನ್ನು ಹಾದು, ಭಗವಾನರು ಪರಿನಿರ್ವಾಣ ಹೊಂದಿದ ಕುಶಿ ನಗರಕ್ಕೆ ಹೋಗಿ, ಎಲ್ಲೆಡೆಯಲ್ಲಿಯೂ ಚೈತ್ಯನಿರ್ಮಾಣದಿಂದಲೂ ದಾನ ದಿಂದಲೂ ಧರ್ಮವನ್ನು ಪೋಷಿಸಿ ಸಂಘಕ್ಕೆ ಬೆಂಬಲಕೊಟ್ಟನು.

ಕಲಿಂಗ ಯುದ್ಧಕ್ಕೆ ಮೊದಲೇ ಉಪಾಸಕನಾಗಿದ್ದ ಅಶೋಕನು ಅದಾದ ನಂತರ "ಒಂದು ಸಂವತ್ಸರಕ್ಕಿಂತ ಹೆಚ್ಚು ಕಾಲ ಸಂಘವನ್ನು ಪ್ರವೇಶಿಸಿ ಚೆನ್ನಾಗಿ ಪ್ರಯತ್ನಿಸುತ್ತಿರುವೆನು" ಎಂದು ಹೇಳಿರುವುದರ ಅರ್ಥವೇನು?

"ಸಂಘ"ವನ್ನು ಪ್ರವೇಶಿಸಿದೆನು ಎಂದು ಹೇಳಿರುವುದಕ್ಕೆ "ಭಿಕ್ಷುವಾದೆನು" ಎಂಬುದೇ ಅರ್ಥ ಎಂದು ವಿನ್ಸೆಂಟ್ ಸ್ಮಿತ್‌ರವರು ಹೇಳುತ್ತಾರೆ. ಆದರೆ ಇದು ಭಾರತಧರ್ಮಕ್ಕೆ ತೀರ ವಿರುದ್ಧ. ಪೂರ್ವಾಶ್ರಮದಲ್ಲಿ ಎಷ್ಟೇ ಯಶೋವೈಭವಗಳಿದ್ದರೂ ಭಿಕ್ಷುವಾದವನು ಎಲ್ಲವನ್ನೂ ಸಂಪೂರ್ಣವಾಗಿ ತ್ಯಜಿಸಬೇಕೆಂದು ಗೌತಮಬುದ್ಧನು ತನ್ನ ಜೀವನದಿಂದಲೇ ವಿಶದಪಡಿಸಿರುವನು. ಇತ್ಸಿಂಗ್ ಎಂಬ ಚೀನಾ ಯಾತ್ರಿಕನು ತಾನು ಅಶೋಕನ ಒಂದು ಪ್ರತಿಮೆಯನ್ನು ಕಂಡನೆಂದೂ ಅದಕ್ಕೆ ಭಿಕ್ಷುವಿನ ಉಡಿಗೆಯನ್ನು ಹಾಕಿದ್ದರೆಂದೂ ಹೇಳುತ್ತಾನೆ. ಈ ವಿಷಯವನ್ನು ಉದ್ಧರಿಸುತ್ತಾ ಸ್ಮಿತ್‌ರವರು ಕ್ರಿ.ಶ. ೫೦೨ ರಿಂದ ೫೪೯ ರ ವರೆಗೆ ಚೀನಾದೇಶವನ್ನಾಳಿದ ವು ಟಿ ಎಂಬ ರಾಜನ ಉದಾಹರಣೆಯ್ನು ಹೇಳಿರುವರು. "ಆತನೂ ಕೂಡ ಭಿಕ್ಷುಗಳ ಶುಶ್ರೂಷೆಯನ್ನು ಮಾಡುತ್ತಾ ಭಿಕ್ಷುವಿನಂತೆಯೇ ಬಾಳಿ ಬದುಕಿದವನು: ಎರಡುಸಾರಿ ಅವನು ಭಿಕ್ಷುವಿನ ಉಡಿಗೆಯನ್ನೇ ತೊಟ್ಟಿದ್ದನು" ಎಂದು ವು ಟಿಯ ವಿಷಯವಾಗಿ ಚರಿತ್ರಕಾರರು ಹೇಳುತ್ತಾರೆ. ಆದರೆ, ಎರಡು ಸಾರಿ ಭಿಕ್ಷುವಾಗುವುದೆಂದರೇನು? ಒಂದುಸಲ ಪ್ರಪಂಚದ ಬೇವುಬೆಲ್ಲವನ್ನು ತ್ಯಜಿಸಿದವನು ಮತ್ತೆ ಅದಕ್ಕೆ ಮನಸೋತು ಹಿಂದಕ್ಕೆ ಬರುತ್ತಾನೆಯೇ? ಹಾಗೆ ಬಂದವನನ್ನು ಸಮಾಜ ಕೊಂಡಾಡುತ್ತದೆಯೇ?

ಸೆನಾರ್ಟ್‌ರವರು ೫೦ ವರ್ಷಗಳ ಹಿಂದೆ ಬರೆದ ಒಂದು ಲೇಖನದಲ್ಲಿ "ಸಂಘಂ ಉಪಗತೆ" ಎಂಬ ಅಶೋಕನ ಮಾತಿಗೆ ಇನ್ನೊಂದರ್ಥವನ್ನು ಕೊಡುತ್ತಾರೆ. ಅಶೋಕನು ಸಕಲ ರಾಜಪರಿವಾರಗಳೊಡನೆ ಸಂಘವನ್ನು ಸಂದರ್ಶಿಸಿದನೆಂದೂ ಅಲ್ಲಿ ನೆರೆದಿದ್ದ ಭಿಕ್ಷುಗಳ ಸಮಕ್ಷದಲ್ಲಿ ತಾನು ಧರ್ಮವನ್ನವಲಂಬಿಸಿರುವನೆಂಬ ಸುವಾರ್ತೆಯನ್ನು ತಿಳಿಸಿದನೆಂದೂ ಅವರು ಹೇಳಿದರು.[1]

ಆದರೆ ಇದಕ್ಕಿಂತ ಸಮರ್ಪಕವಾದ ಮತ್ತೊಂದು ಅರ್ಥವನ್ನು ಡಿ. ಆರ್. ಭಂಡಾರ್ಕರ್‌ರವರು ಈಚೆಗೆ ಸೂಚಿಸಿದಾರೆ. ವಿನಿಯಪಿಟಕದ ಮಹಾವಗ್ಗ[2]ದಲ್ಲಿ ಭಿಕ್ಷುಗತಿಕ ಎಂಬ ಮಾತು ಬರುತ್ತದೆ. ಉಪಾಸಕರಿಗಿಂತ ಹೆಚ್ಚು ಧರ್ಮೋತ್ಸಾಹವನ್ನು ತೋರಿಸುತ್ತಿದ್ದರೂ ಇನ್ನೂ ಭಿಕ್ಷುಗಳಾಗದವರಿಗೆ ಈ ಮಾತನ್ನು ಪಯೋಗಿಸಿರುವಂತೆ ಕಾಣುತ್ತದೆ. ಭಿಕ್ಷುಗಳೊಂದಿಗೆ ಅದೇ ವಿಹಾರದಲ್ಲಿ ವಾಸಮಾಡಿಕೊಂಡು ಮುಂದೆ ಸಂನ್ಯಾಸವನ್ನು ತೆಗೆದುಕೊಳ್ಳುವ

---

[1] *I. A.*, 1891, pp. 233-4.

[2] *Vinaya Pitaka* III, 7, 8.

ಉದ್ದೇಶದಿಂದ ತಮ್ಮ ವ್ಯಾಸಂಗವನ್ನೂ ಶೀಲವನ್ನೂ ತಿದ್ದಿಕೊಳ್ಳುವವರೇ ಭಿಕ್ಷುಗತಿಕರು. ಅಶೋಕನು ಹೀಗೆ ಕೆಲವುಕಾಲ ವಿಹಾರದಲ್ಲಿ ಭಿಕ್ಷುಗತಿಕನಾಗಿ ವಾಸಮಾಡಿರಬಹುದೆಂದೂ ಆಗ ಅವನು ಭಿಕ್ಷುಗಳಂತೆಯೇ ಉಡಿಗೆಯನ್ನು ಬದಲಾಯಿಸಿರಬಹುದೆಂದೂ ಭಂಡಾರ್‌ಕರ್‌ರವರು ಹೇಳುತ್ತಾರೆ.[1] ಚೀನಾ ದೇಶದ ರಾಜನೂ ಕೂಡ ಒಂದೆರಡುಸಾರಿ ಭಿಕ್ಷುವಿನ ಉಡಿಗೆಯನ್ನು ಧರಿಸಿದ್ದು ಇದೇ ಕಾರಣದಿಂದಿರಬಹುದು. ಹೀಗೆ ಅರ್ಥಮಾಡಿಕೊಂಡರೆ, ಇತ್ಸಿಂಗ್‌ನಲ್ಲೂ ಸಮಗೆ ನಂಬಿಕೆ ಬರುವುದು.

ಆದ್ದರಿಂದ ಅಶೋಕನು ಗೃಹಸ್ಥನಾಗಿದ್ದುಕೊಂಡು ಚಕ್ರವರ್ತಿಯಾಗಿದ್ದುಕೊಂಡು ಆಗಾಗ ತನ್ನ ಸ್ವಂತ ಆತ್ಮೋನ್ನತಿಗಾಗಿ ವಿಹಾರಗಳಲ್ಲಿ ವಾಸಮಾಡುತ್ತಾ ಭಿಕ್ಷುಗಳನ್ನು ಪಚರಿಸಿ ಧರ್ಮವನ್ನು ತಿಳಿದು ಅದರಂತೆ ಆಚರಿಸಲು ಯತ್ನಿಸಿದನೆಂದು ಹೇಳಬಹುದು.

ಈ ಧರ್ಮಯಾತ್ರೆಯಿಂದ ಹಿಂತಿರುಗಿದ ಮೇಲೆ "ನನ್ನ ವಿಜಿತದಲ್ಲೆಲ್ಲ ಯುಕ್ತರೂ ರಜ್ಜುಕರೂ ಪ್ರಾದೇಶಿಕರೂ ಐದೈದು ವರ್ಷಕ್ಕೊನ್ಮೆ ಈ ಧರ್ಮಾನುಶಾಸ್ತಿಗಾಗಿಯೂ ಇತರ ಕೆಲಸಗಳಿಗಾಗಿಯೂ ಅನುಸಂಯಾನ ಮಾಡತಕ್ಕದ್ದು: ಮಾತೃಶುಶ್ರೂಷೆಯೂ ಪಿತೃಶುಶ್ರೂಷೆಯೂ ಸಾಧುವಾದದ್ದು. ಮಿತ್ರರಿಗೂ ನಂಟರಿಷ್ಟರಿಗೂ ಬ್ರಾಹ್ಮಣ ಶ್ರಮಣರಿಗೂ ಮಾಡುವ ದಾನ ಸಾಧುವಾದದ್ದು; ಪ್ರಾಣಿಗಳನ್ನು ಕೊಲ್ಲದಿರುವುದು ಸಾಧುವಾದದ್ದು. ಅಲ್ಪವಾಗಿ ವ್ಯಯಮಾಡುವುದೂ ಅಲ್ಪವಾಗಿ ಕೂಡಿಡುವುದೂ ಸಾಧುವಾದದ್ದು" ಎಂದು ಹೇಳುತ್ತಾ ಎಲ್ಲರೂ ಐದು ವರ್ಷಕ್ಕೊಂದು ಸಲವಾದರೂ ಧರ್ಮಯಾತ್ರೆ ಹೋಗಿ ಧರ್ಮಬೋಧೆ ಮಾಡುವಂತೆ ತನ್ನ ಅಧಿಕಾರಿಗಳಿಗೆ ಆಜ್ಞಾಪಿಸಿದನು.

ಅಲ್ಲದೆ ದಿಗ್ವಿಜಯದ ಭೇರೀನಿನದವನ್ನು ನಿಲ್ಲಿಸಿ ಧರ್ಮವಿಜಯದ ಮಂಗಳವಾದ್ಯಗಳನ್ನು ಮೊಳಗಿಸಿದನು. ಅಸುರವಿಜಯ, ಲೋಭವಿಜಯ, ಧರ್ಮವಿಜಯ ಎಂಬ ಮೂರುತೆರನ ವಿಜಯಾಭಿಲಾಷೆಗಳನ್ನು ಕೌಟಿಲ್ಯನೂ ವಿವರಿಸುತ್ತಾನೆ. "ಧರ್ಮವಿಜಯವನ್ನೇ ಮುಖ್ಯವಾದ ವಿಜಯವೆಂದು ದೇವಾನಾಂಪ್ರಿಯನು ಭಾವಿಸುತ್ತಾನೆ. ಇಲ್ಲಿಯೂ ಎಲ್ಲಾ ಅಂತಗಳಲ್ಲಿಯೂ ಆರುನೂರು ಯೋಜನೆಗಳವರೆಗೂ ಅಂತಿಯೋಕ ಎಂಬ ಯೋನರಾಜನು—ಆ ಅಂತಿಯೋಕನ ಆಚೆ ನಾಲ್ಕು ರಾಜರು—ತುರಮಾಯ ಅಂತಿಕಿನಿ ಮಕ ಅಲಿಕಸುದರ—ಕೆಳಗೆ ಚೋಳ ಪಾಂಡ್ಯ ತಾಮ್ರಪರ್ಣಿಯತನಕ ಈ ಧರ್ಮವಿಜಯವು ದೇವಾನಾಂ

[1] *Asoka*, p. 80-1.

ಪ್ರಿಯನಿಗೆ ದೊರೆತಿದೆ," ಎಂದು ಅಶೋಕನು ಹೆಮ್ಮೆಯಿಂದ ಭುಜ ತಟ್ಟಿ ಕೊಳ್ಳುವನು. ಅಶೋಕನು ಅಲ್ಲಿಗೆಲ್ಲ ದೂತರನ್ನು ಕಳುಹಿಸಿ 'ಧರ್ಮ'ವನ್ನು ಹೇಳಿಸಿದನು.

"ಹಾಗೆಯೇ ಇಲ್ಲಿ ರಾಜವಿಷಯದಲ್ಲಿಯೂ ಯೋನ ಕಾಂಭೋಜ ರಲ್ಲಿಯೂ ನಭಕನಾಭಪಂತಿಯರಲ್ಲಿಯೂ ಭೋಜ ಪಿಟಿನಿಕರಲ್ಲಿಯೂ ಆಂಧ್ರ ಪುಳಿಂದರಲ್ಲಿಯೂ ದೇವಾನಾಂಪ್ರಿಯನ ಧರ್ಮಾನುಶಾಸ್ತಿಯನ್ನು ಅನು ವರ್ತಿಸುವರು" ಎಂದು ಅಶೋಕನು ಹೇಳುತ್ತಾನೆ. ದೂತರನ್ನು ಕಳುಹಿಸಿ ಧರ್ಮಬೋಧೆ ಮಾಡಿದುದು ಮಾತ್ರವೇ ಅಲ್ಲ, ಆಯಾ ಪ್ರದೇಶಗಳಲ್ಲಿ ಜನೋಪಕಾರಕವಾದ ಕೆಲವು ಕೈಂಕರ್ಯಗಳನ್ನೂ ಅಶೋಕನು ನಡೆಸಿದನು. "ದೇವಾನಾಂಪ್ರಿಯ ಪ್ರಿಯದರ್ಶಿರಾಜನ ವಿಜಿತದಲ್ಲಿ ಎಲ್ಲೆಲ್ಲೂ, ಹಾಗೆಯೇ ಅವನ ಪ್ರಾತ್ಯಂತದವರಲ್ಲೂ—ಅಂದರೆ ಚೋಳ ಪಾಂಡ್ಯ ಸತ್ಯಪುತ್ರ ಕೇರಳ ಪುತ್ರ ತಾಮ್ರಪರ್ಣಿ ಕೂಡ—ಯೋನರಾಜನಾದ ಅಂತಿಯೋಕ ಈ ಅಂತಿ ಯೋಕನ ಸಮೀಪದ ರಾಜರು—ಎಲ್ಲೆಲ್ಲೂ ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಎರಡು ವಿಧದ ಚಿಕಿತ್ಸೆಯನ್ನು ಏರ್ಪಡಿಸಿರುವನು—ಮನುಷ್ಯಚಿಕಿತ್ಸೆ ಮತ್ತು ಪಶುಚಿಕಿತ್ಸೆ. ಮನುಷ್ಯರಿಗೆ ಉಪಯೋಗವಾದ ಮತ್ತು ಪಶುಗಳಿಗೆ ಉಪಯೋಗವಾದ ಔಷಧಗಳು ಎಲ್ಲೆಲ್ಲಿ ಇಲ್ಲವೋ ಅಲ್ಲೆಲ್ಲ ಅವುಗಳನ್ನು ತರಿಸಿ ನೆಡಿಸಲಾಗಿದೆ. ಮೂಲಗಳಾಗಲಿ ಫಲಗಳಾಗಲಿ ಎಲ್ಲೆಲ್ಲಿ ಇಲ್ಲವೋ ಅಲ್ಲೆಲ್ಲ ಅವುಗಳನ್ನು ತರಿಸಿ ನೆಡಿಸಲಾಗಿದೆ. ಮಾರ್ಗಗಳಲ್ಲಿ ಬಾವಿಗಳನ್ನು ತೋಡಿಸ ಲಾಗಿದೆ. ಪಶುಗಳ ಮತ್ತು ಮನುಷ್ಯರ ಪರಿಭೋಗಕ್ಕಾಗಿ ವೃಕ್ಷಗಳನ್ನು ನೆಡಿಸಲಾಗಿದೆ." ಹೀಗೆ ಇತರ ದೇಶದವರನ್ನು ಅಶೋಕನು ತನ್ನ ಧರ್ಮ ಕಾರ್ಯಗಳಿಂದ ಒಲಿಸಿದನು.

ಆದರೂ ಅಶೋಕನಿಗೆ ತನ್ನ ಉದ್ಯಮಗಳ ಗುಣಾವಗುಣಗಳು ಚೆನ್ನಾಗಿ ತಿಳಿದಿದ್ದುವು. ಸ್ತಂಭಶಾಸನ ೭ರಲ್ಲಿ ಅವನು, "ನನ್ನಿಂದ ಮಾರ್ಗಗಳಲ್ಲಿ ಪಶುಗಳಿಗೂ ಮನುಷ್ಯರಿಗೂ ನೆರಳಿಗೋಸ್ಕರ ನ್ಯಗ್ರೋಧ ವೃಕ್ಷಗಳನ್ನು ನೆಡಿಸಲಾಗಿದೆ; ಮಾವಿನ ತೋಪುಗಳನ್ನು ನೆಡಿಸಲಾಗಿದೆ; ಪ್ರತಿ ಅರ್ಧಕ್ರೋಶ ದಲ್ಲೂ ಬಾವಿಗಳನ್ನು ತೋಡಿಸಲಾಗಿದೆ. ಛತ್ರಗಳನ್ನು ಕಟ್ಟಿಸಲಾಗಿದೆ. ಪಶುಗಳ ಮತ್ತು ಮನುಷ್ಯರ ಉಪಯೋಗಕ್ಕಾಗಿ ಅಲ್ಲಲ್ಲಿ ಅರವಟ್ಟಿಗೆಗಳನ್ನು ಇಡಿಸಲಾಗಿದೆ; ಆದರೆ, ಇವುಗಳ ಉಪಯೋಗ ಕೇವಲ ಲಘುವಾದದ್ದು. ಹಿಂದಿನ ರಾಜರಿಂದಲೂ ನನ್ನಿಂದಲೂ ಸುಖವನ್ನು ಕೊಡುವ ವಿವಿಧ ಕೆಲಸಗಳು ನಡೆದು ಲೋಕ ಸುಖವಾಗಿ ಮಾಡಲ್ಪಟ್ಟಿದೆ. ಆದರೆ, ಜನರು ಧರ್ಮದ

ಮಾರ್ಗದಲ್ಲಿ ನಡೆವಂತೆ ನಾನು ಹೀಗೆ ಮಾಡಿರುವೆನು:" ಎಂದು ಹೇಳಿ, ಧರ್ಮಪ್ರಚಾರವನ್ನು ಮೊತ್ತಮೊದಲು ನೆರೆಹೊರೆಯ ದೇಶಗಳಲ್ಲಿ ಮಾಡಿದವನು ತಾನೇ ಎಂಬುದನ್ನು ಸ್ಪಷ್ಟಪಡಿಸುವನು. ಇದರಿಂದ ಐಹಿಕ ಹಿತಸುಖಗಳಿಗಿಂತ ಪರದಲ್ಲಿ ಸ್ವರ್ಗವನ್ನು ಕೊಡಿಸುವ ಕೆಲಸಗಳಿಗೆ ಅಶೋಕನು ಹೆಚ್ಚು ಬೆಲೆ ಕೊಟ್ಟಿದ್ದನೆಂಬುದು ಗೊತ್ತಾಗುತ್ತದೆ.

ಅಶೋಕನ ಧರ್ಮಬೋಧೆಯೂ ಧರ್ಮಕೆಲಸಗಳೂ ಬಹುದೂರದ ವರೆಗೆ ಹರಡಿದುವು. ಅಂತಿಯೋಕ ಅಥವಾ ಅಂಟಿಯೋಕಸ್ಸನು ಚಂದ್ರಗುಪ್ತನ ಮೇಲೆ ದಂಡೆತ್ತಿ ಬಂದ ಸೆಲ್ಯೂಕಸ್ಸನ ಮೊಮ್ಮಗನು. ಅಂದಿನಿಂದ ಮೌರ್ಯರಿಗೂ ಸೆಲ್ಯೂಕಸ್ಸನ ಮನೆತನಕ್ಕೂ ಒಂದು ರೀತಿಯ ಮಧುರ ಬಾಂಧವ್ಯವು ಬೆಳೆದಿತ್ತು. ಬಿಂದುಸಾರನ ಆಸ್ಥಾನಕ್ಕೆ ಅಂಟಿಯೋಕಸ್ಸನು ದೂತರನ್ನು ಕಳುಹಿಸಿದ್ದನು.

ಅಂಟಿಯೋಕಸ್ಸನು ಸಿರಿಯಾದೇಶದ ರಾಜನಾಗಿದ್ದನು. ಅದರ ದಕ್ಷಿಣದಲ್ಲಿ ಈಜಿಪ್ಟ ದೇಶವಿರುವುದು. ಅದನ್ನು ಆಳುತ್ತಿದ್ದವನೇ ತುರಮಾಯ, ಅಥವಾ ಟಾಲಮಿ. ಅವನಿಗೆ ಜ್ಞಾನಪ್ರಿಯ (ಫಿಲೊಡೆಲ್ಫಾಸ್) ಎಂಬ ಬಿರುದಿತ್ತು. ಅವನ ಆಸ್ಥಾನಕ್ಕೂ ಅಶೋಕನ ದೂತರು ಪ್ರಯಾಣ ಬೆಳೆಸಿದರು. ಅಲೆಕ್ಸಾಂಡರನ ದಿಗ್ವಿಜಯಗಳಿಂದ ಯವನರಿಗೆ ಹಲವಾರು ಪ್ರಾಚೀನ ಸಂಸ್ಕೃತಿಗಳ ಪರಿಚಯವಾಗಿ ಅವರು ಪ್ರಪಂಚಜ್ಞಾನದಲ್ಲೂ ಕಲಾಪರಿಜ್ಞಾನದಲ್ಲೂ ಆಧ್ಯಾತ್ಮಿಕ ವಿಷಯದಲ್ಲೂ ಹೆಚ್ಚು ಆಸಕ್ತಿಯನ್ನು ತೋರಿಸಿದರು. ಈಜಿಪ್ಟದೇಶದ ಮುಖ್ಯನಗರವಾದ ಅಲೆಕ್ಸಾಂಡ್ರಿಯಾ ಎಂಬಲ್ಲಿ ಯವನರೂ ಅರಬೀಯರೂ ಇರಾನಿಯರೂ ಹಿಂದೂಗಳೂ ತಂಡೋಪತಂಡವಾಗಿ ಸೇರಿ ವಾದವಿವಾದಗಳನ್ನು ಹೂಡಿ ಜ್ಞಾನಜ್ಯೋತಿಯನ್ನು ಬೆಳಗಿಸಿದರು. ಟಾಲಮಿ ಫಿಲೊಡೆಲ್ಫಾಸನು ಹಿಂದೂ ಸಂಸ್ಕೃತಿಯ ಬೆಲೆಯನ್ನು ಅರಿತಿದ್ದನು. ಡಯೊನೀಸಿಯಸ್ ಎಂಬ ಒಬ್ಬ ಯವನದೂತನನ್ನು ಅವನು ಮೌರ್ಯ ರಾಜಧಾನಿಗೆ ಕಳುಹಿಸಿಕೊಟ್ಟಿದ್ದನೆಂದು ಚರಿತ್ರಕಾರರು ಹೇಳುತ್ತಾರೆ.

ಟಾಲಮಿಯ ತಮ್ಮನಾದ ಮಕ ಎಂಬವನು ಈಜಿಪ್ಟದೇಶದ ಪಶ್ಚಿಮದಲ್ಲಿ ಈಗ ಲಿಬಿಯಾ ಎಂಬ ಹೆಸರುಳ್ಳ ಸೈರೀನಿ ಪ್ರಾಂತವನ್ನು ಸ್ವತಃ ಆಕ್ರಮಿಸಿ ಅಲ್ಲಿ ತನ್ನದೊಂದು ರಾಜ್ಯವನ್ನು ಕಟ್ಟಿಕೊಂಡಿದ್ದನು. ಅಲ್ಲಿಗೂ ಧರ್ಮವಿಜಯದ ಸಂದೇಶ ತಲುಪಿತು. 'ಅಲಿಕಸುದರ' ಅಂದರೆ 'ಅಲೆಕ್ಸಾಂಡರನು', ಯಾವ ದೇಶದ ರಾಜನಾಗಿದ್ದನೆಂದು ನಿರ್ಧರಿಸುವುದು ಕಷ್ಟ. ಏಕೆಂದರೆ, ಸುಮಾರು ಅದೇ ಕಾಲದಲ್ಲಿ ದಕ್ಷಿಣ ಗ್ರೀಸ್‌ನಲ್ಲಿ ಕಾರಿಂತ್ ನಗರವನ್ನೇ ರಾಜಧಾನಿ

ಯಾಗಿಟ್ಟುಕೊಂಡು ಸ್ವತಂತ್ರ ರಾಜ್ಯವೊಂದನ್ನು ಮಾಡಿಕೊಂಡಿದ್ದ ಒಬ್ಬ ಅಲೆಕ್ಸಾಂಡರನೂ, ಮೆಸಿಡೋನಿಯಾದ ಪಶ್ಚಿಮದಲ್ಲಿ ಎಪಿರಸ್ ಪ್ರಾಂತವನ್ನು ಸ್ವತಂತ್ರವಾಗಿ ಆಳುತ್ತಿದ್ದ ಒಬ್ಬ ಅಲೆಕ್ಸಾಂಡರನೂ ಇದ್ದರು. ಈ ಇಬ್ಬರಲ್ಲಿ ಯಾರ ಆಸ್ಥಾನಕ್ಕೆ ಅಶೋಕನು ದೂತರನ್ನು ಕಳುಹಿಸಿದನೆಂದು ತೀರ್ಮಾನಿಸುವುದು ಕಷ್ಟ. ಮೆಸಿಡೋನಿಯಾವನ್ನೂ ಅದರ ಸುತ್ತಮುತ್ತಣ ಪ್ರದೇಶಗಳನ್ನೂ ಆಳುತ್ತಿದ್ದ ಆಂಟಿಗೋನಸ್ ಗೊನಟಸ್ ಎಂಬ ರಾಜನೇ ಅಂತಿಕಿನಿ. ಏಕೆಂದರೆ, ಅವನೇ ಈ ಶಾಸನದ ಇತರ ಎಲ್ಲ ರಾಜರ ಸಮಕಾಲೀನ. ಹೀಗೆ ಅಶೋಕನ ಧರ್ಮಕಾಮತೆಯಿಂದ ಸಾವಿರಾರು ಮೈಲಿಗಳ ದೂರದಲ್ಲಿದ್ದ ವಿವಿಧ ಜನಾಂಗಗಳಿಗೂ ಭಾರತೀಯರು ಹೋದದ್ದರಿಂದ ನಮ್ಮ ದೇಶದ ಪ್ರಾಚೀನ ಸಂಸ್ಕೃತಿಯಲ್ಲಿ ಅಡಕವಾಗಿದ್ದ ಆದರ್ಶಗಳೂ ತತ್ವಗಳೂ, ವ್ಯಕ್ತಿಯನ್ನೂ ಸಮಾಜವನ್ನೂ ತಿದ್ದಲು ನಾವು ಕಲ್ಪಿಸಿಕೊಂಡಿದ್ದ ಸಾಧನಗಳೂ, ಅಲ್ಲಿನ ಜಿಜ್ಞಾಸುಗಳಿಗೆ ತಿಳಿಯಲು ಸಾಧ್ಯವಾಯಿತು. ಅಶೋಕನ ಧರ್ಮ ಪ್ರಚಾರದಿಂದ ಅಲ್ಲಿಯ ಜನಜೀವನದಲ್ಲಿ ಯಾವ ಬದಲಾವಣೆಗಳಾದುವೋ ಗುರುತಿಸುವುದು ಸಾಧ್ಯವಿಲ್ಲ. ಏಕೆಂದರೆ, ರತ್ನಾಕರವರ್ಣಿ ಹೇಳಿರುವಹಾಗೆ, ಗೂಳಿ ನಡೆವ ಹೆಜ್ಜೆ ತೋರುವುದಲ್ಲದೆ, ಗಾಳಿಯು ಹೆಜ್ಜೆ ತೋರುವುದೇ ? ಧರ್ಮ ಗಾಳಿಯಂತೆ ಚೇತನದಾಯಕ ; ಅದು ದೃಷ್ಟಿಗೋಚರವಲ್ಲ.

ಸಾಮ್ರಾಜ್ಯದಲ್ಲಂತೂ ಅಶೋಕನ ಧರ್ಮವಿಜಯ ಮತ್ತಷ್ಟು ಆಸಕ್ತಿಯಿಂದ ನಡೆದಿರಬೇಕು. "ಚೋಳ ಪಾಂಡ್ಯ ತಾಮ್ರಪರ್ಣಿಯ ತನಕ" ಅವನಿಗೆ ಧರ್ಮವಿಜಯ ದೊರೆಯಿತು ; ಅಂದರೆ, ಆ ಪ್ರಾಂತಗಳು ಅವನ ವಿಜಿತಕ್ಕೆ ಒಳಪಡದೆ ಹೋದರೂ ಅಲ್ಲಿಯ ಜನಸಮುದಾಯವೆಲ್ಲವೂ ಅವನ ಧರ್ಮಘೋಷವನ್ನು ಕಿವಿಗೊಟ್ಟು ಲಾಲಿಸಿತು. ಅಶೋಕನ ಶಾಸನಗಳು ಚಿತ್ರದುರ್ಗ ಅನಂತಪುರಗಳ ತೆಂಕಣಭಾಗದಲ್ಲಿ ಎಲ್ಲೂ ಇದುವರೆಗೆ ದೊರೆತಿಲ್ಲವಾದ್ದರಿಂದ ಚೋಳರೂ ಪಾಂಡ್ಯರೂ ಅವನ ಸಾಮ್ರಾಜ್ಯದ ನೆರೆಹೊರೆಯ ಜನಗಳಾಗಿದ್ದರೆಂದು ಗೊತ್ತಾಗುತ್ತದೆ. ತಾಮ್ರಪರ್ಣಿ ಎಂಬುದು ಪ್ರಾಚೀನ ಸಿಂಹಳದ್ವೀಪದ ಒಂದು ಹೆಸರು. ಕೇರಳಪುತ್ರರು ಕೇರಳದೇಶ, ಅಂದರೆ, ಮಲೆಯಾಳದೇಶದ ಜನರೇ ಆಗಿರಬೇಕು.

ಆದರೆ, ಸತಿಯಪುತ್ರರು, ಅಥವಾ, ಸತ್ಯಪುತ್ರರು ಯಾರೆಂಬುದನ್ನು ಸುಲಭವಾಗಿ ನಿರ್ಧರಿಸಲು ಸಾಧ್ಯವಿಲ್ಲ. ಮೈಸೂರಿನ ದಕ್ಷಿಣ ಭಾಗದಲ್ಲಿರುವ ಸತ್ಯಮಂಗಲ ಎಂಬ ಕೋಯಮುತ್ತೂರು ಜಿಲ್ಲೆಯ ಭಾಗವಿರಬಹುದೆಂದು ಕೆಲವರೂ, ಕಾಂಚೀಪುರದ ಸುತ್ತಣಪ್ರದೇಶವಿರಬಹುದೆಂದು ಹಲವರೂ

ತುಳುನಾಡಿರಬಹುದೆಂದು ಬೇರೆ ಕೆಲವರೂ ವಾದಿಸುತ್ತಾರೆ. ಕೇರಳಪುತ್ರರ ಉತ್ತರದಲ್ಲಿ ಪಶ್ಚಿಮತೀರದಲ್ಲೇ ಸತ್ಯಪುತ್ರರ ಪ್ರದೇಶವಿತ್ತೆಂದು ತೋರುತ್ತದೆ.

"ಯೋನರು" ಎಂದರೆ, ಅಲೆಕ್ಸಾಂಡರನ ಚಕ್ರಾಧಿಪತ್ಯದ ಅವಶೇಷಗಳಾಗಿ ಹಿಂದೂಸ್ತಾನದ ನೈರುತ್ಯಭಾಗದಲ್ಲಿ ಅಲ್ಲಲ್ಲಿ ಉಳಿದಿದ್ದ ಹಲವು ಯವನ ಸಂಸ್ಥಾನಗಳ ಜನರೆಂದರ್ಥ. 'ಕಾಂಭೋಜ'ರೆಂದರೆ ಕಾಬೂಲ್ ನದಿಯ ತೀರಪ್ರದೇಶದ ನಿವಾಸಿಗಳು; ನಾಭಕರೂ ನಾಭಪಂತಿಯರೂ ಕಾಂಭೋಜರ ನೆರೆಯವರು; ಭೋಜರೆಂದರೆ ವಿದರ್ಭದಲ್ಲಿದ್ದ ಒಂದು ಜನಾಂಗ; ಆಂಧ್ರರೆಂದರೆ ಆಗಿನಕಾಲದಲ್ಲಿ ಪೂರ್ವಸಮುದ್ರತೀರದಲ್ಲೂ ಗೋದಾವರಿ ನದೀ ತಟದಲ್ಲೂ ಪ್ರಬಲರಾಗುತ್ತಿದ್ದ ಜನಾಂಗ; ಪುಳಿಂದರೆಂದರೆ ವಿಂಧ್ಯ ಮೂಲದ ಅಟವೀ ಜನರು—ಹೀಗೆ ನಾವು ನಿರ್ಧರಿಸಿಕೊಳ್ಳಬಹುದಾಗಿದೆ. ಈ ಎಲ್ಲ ಜನಸಮೂಹಗಳಲ್ಲೂ ಅಶೋಕನ ಧರ್ಮದೂತರು ಧರ್ಮದ ಮೂಲತತ್ವಗಳನ್ನು ಎಡೆಬಿಡದೆ ಪ್ರಚಾರಮಾಡುತ್ತಾ ಬಂದರು. ಅಂತೂ ಅಶೋಕನ ಈ ಪ್ರಯತ್ನದಿಂದ ಇಡಿಯ ದೇಶವೇ ಎಚ್ಚತ್ತಿರಬೇಕು; ಅಶೋಕನ ಮಾತಿಗೆ ಕಿವಿಗೊಟ್ಟು ಧರ್ಮಶ್ರವಣ ಮಾಡಿ 'ಆತ್ಮಪರೀಕ್ಷೆ' ಮಾಡಿಕೊಂಡಿರಬೇಕು.

ಕೇವಲ ಉಪದೇಶದಲ್ಲೇ ಅಶೋಕನ ಧರ್ಮವಿಜಯ ಕೊನೆಗಾಣಲಿಲ್ಲ. ರಾಜತರಂಗಿಣಿಯಲ್ಲಿ ಅವನನ್ನು ಸತ್ಯಸಂಧನೆಂದೂ ನಿಷ್ಕಲ್ಮಷನೆಂದೂ ಶಾಂತಿವೃದ್ಧಿಗಾಗಿ ಬೇಕಾದ ಉಪಾಯಗಳನ್ನು ತಿಳಿದವನೆಂದೂ ಕಲ್ಹಣನು ಹೊಗಳಿದ್ದಾನೆ. ಅಭಿಷಿಕ್ತನಾಗಿ ಹದಿಮೂರು ವರ್ಷಗಳಾದಾಗ ಅಶೋಕನು ಧರ್ಮಕ್ಕಾಗಿ ಒಂದು ಪ್ರತ್ಯೇಕ ಇಲಾಖೆಯನ್ನೇ ಏರ್ಪಡಿಸಿದನು. "ಬಹುಕಾಲದವರೆಗೆ ಧರ್ಮಮಹಾಮಾತ್ರರೆಂಬವರು ಇರಲಿಲ್ಲ. ಅಭಿಷಿಕ್ತನಾಗಿ ಹದಿಮೂರು ವರ್ಷಗಳಾದಾಗ ನನ್ನಿಂದ ಧರ್ಮಮಹಾಮಾತ್ರರೆಂಬವರು ಮಾಡಲ್ಪಟ್ಟರು. ಅವರೆಲ್ಲರೂ ಧರ್ಮನಿರತರಿಗಾಗಿ ಧರ್ಮಾಧಿಷ್ಠಾನರಿಗಾಗಿ ದಾನಬುದ್ಧಿಯುಳ್ಳವರಿಗಾಗಿ ನನ್ನ ವಿಜಿತದಲ್ಲಿ ವ್ಯಾಪಿಸಿರುವರು" ಎಂದು ಅಶೋಕನು ಹೇಳುತ್ತಾನೆ. ಈ ತೆರನ ಅಧಿಕಾರ ನಮ್ಮ ದೇಶದಲ್ಲಿ ಆಗ ತೀರ ಹೊಸದು. ಅವರನ್ನು ನಿಯಮಿಸಿ ಅವರಿಗೆ ಹಲವಾರು ಜವಾಬ್ದಾರಿಯುತವಾದ ಕೆಲಸಗಳನ್ನು ವಹಿಸಿದ ಅಶೋಕನ ರಾಜತಂತ್ರವನ್ನು ನಾವು ಮೆಚ್ಚಲೇಬೇಕು. ಕೇವಲ ಅಧಿಕಾರಿಗಳಿಂದ ಧರ್ಮೋದ್ದೀಪನದ ಕೆಲಸ ಹೇಗೆ ನಡೆಯುತ್ತದೆ ಎಂದು ನಾವು ಶಂಕೆಪಡಬಹುದು. ಆದರೆ ಅಶೋಕನು ಅವರಿಗೆ ಫಲಕಾರಿಯಾದ ಕಾರ್ಯಕ್ಷೇತ್ರಗಳನ್ನು ಕಲ್ಪಿಸಿಕೊಟ್ಟನು.

ತನ್ನ ಸಾಮ್ರಾಜ್ಯದಲ್ಲಿ ಇನ್ನೂ ಅನಾಗರಿಕದೆಸೆಯಲ್ಲೇ ಇದ್ದ ಜನಾಂಗ

ಗಳ ಏಳಿಗೆಗಾಗಿಯೂ, ಇತರರ ಮನೋಭಾವವನ್ನರಿಯದೆ ಪರಸಂಸ್ಕೃತಿಯ ಪ್ರಭಾವದಿಂದ ಬೇರೆಯಾಗಿರುವ ಜನಾಂಗಗಳನ್ನು ಒಂದುಗೂಡಿಸುವುದಕ್ಕಾಗಿಯೂ ಅವನು ಧರ್ಮಮಹಾಮಾತ್ರರನ್ನು ಪಯೋಗಿಸಿಕೊಂಡನು. "ಅವರು ಯೋನ ಕಾಂಭೋಜ ಗಾಂಧಾರ ದೇಶಗಳಲ್ಲೂ ರಾಷ್ಟ್ರಿಕ ಪಿಟೆನಿಕರಲ್ಲೂ ಅಪರಾಂತದ ಇತರರಲ್ಲೂ ಇರುವರು" (ಶಿ. ಫ. ೫.)

ಎಲ್ಲಾ ಮತದವರಲ್ಲೂ 'ಸಾರವೃದ್ಧಿ'ಯಾಗುವಂತೆಯೂ ದ್ವೇಷಾಸೂಯೆಗಳು ಕಡಮೆಯಾಗಿ ಸೌಹಾರ್ದ ಬೆಳೆಯುವಂತೆಯೂ ಆಯಾ ಮತಸ್ಥಾಪನೆಗಳ ಆಸ್ತಿಪಾಸ್ತಿಗಳು ಸರಿಯಾಗಿ ವಿನಿಯೋಗವಾಗುವಂತೆಯೂ ಈ ಧರ್ಮ ಮಹಾಮಾತ್ರರು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು. "ಅವರು ಸರ್ವಮತದವರಲ್ಲೂ ಧರ್ಮಾಧಿಷ್ಠಾನ ಧರ್ಮಬುದ್ಧಿ ಇವುಗಳನ್ನು ಬೆಳಸಲು ಧರ್ಮಯುಕ್ತರಾದವರ ಹಿತಸುಖಗಳನ್ನು ಪಾಲಿಸಲು ವ್ಯಾಪಿಸಿರುವರು" (ಶಿ. ಫ. ೫) "ಆ ನನ್ನ ಮಹಾಮಾತ್ರರೂ ಕೂಡ ಬಹುವಿಧದ ಕೆಲಸಗಳಿಗಾಗಿಯೂ ಅನುಗ್ರಹ ಮಾಡುವುದಕ್ಕಾಗಿಯೂ ಸಂನ್ಯಾಸಿಗಳಲ್ಲೂ ಗೃಹಸ್ಥರಲ್ಲೂ ಎಲ್ಲ ಮತದವರಲ್ಲೂ ವ್ಯಾಪಿಸಿರುವರು. ಸಂಘದ ಕೆಲಸದಲ್ಲೂ ಅವರು ವ್ಯಾಪಿಸಬೇಕೆಂದು ನನ್ನಿಂದ ಆಜ್ಞಾಪಿಸಲಾಗಿದೆ. ನಿರ್ಗ್ರಂಥರಲ್ಲೂ ಅವರು ವ್ಯಾಪಿಸಬೇಕೆಂದು ನನ್ನಿಂದ ಮಾಡಲಾಗಿದೆ. ನಾನಾ ಮತದವರಲ್ಲೂ ಅವರು ವ್ಯಾಪಿಸಬೇಕೆಂದು ನನ್ನಿಂದ ಮಾಡಲಾಗಿದೆ. ಇಂತಹ ಕೆಲಸಗಳಿಗೆ ಇಂತಹ ಮಹಾಮಾತ್ರರೆಂದಿತ್ತು. ಆದರೆ ನನ್ನ ಧರ್ಮಮಹಾಮಾತ್ರರು ಇವರಲ್ಲೂ ಇತರ ಎಲ್ಲಾ ಮತದವರಲ್ಲೂ ವ್ಯಾಪಿಸಿರುವರು."

ಅನೇಕ ಸಂಸ್ಥೆಗಳೂ ದಾನಿಗಳೂ ಲೋಕೋಪಕಾರಾರ್ಥವಾಗಿ ನೀಡುವ ಹಣ ದುರ್ವ್ಯಯವಾಗದಂತೆ ನೋಡಿಕೊಳ್ಳುವ ಭಾರ ಈ ಧರ್ಮ ಮಹಾಮಾತ್ರರದೇ ಆಗಿತ್ತು. "ಇವರೂ ಇತರ ಅನೇಕ ಮುಖ್ಯರೂ ನನ್ನ ಮತ್ತು ದೇವಿಯರ ದಾನಗಳನ್ನು ವಿತರಣಮಾಡುತ್ತಿರುವರು. ಇಲ್ಲೂ ದೆಸೆಗಳಲ್ಲೂ ಇರುವ ಅವರೋಧಗಳಲ್ಲೂ ಅವರು ಈ ರೀತಿ ತುಷ್ಟಿದಾಯಕವಾದ ಅನೇಕ ಕೆಲಸಗಳನ್ನು ನಡೆಯಿಸುತ್ತಿರುವರು. ಧರ್ಮಾವದಾನ ಮತ್ತು ಧರ್ಮಪ್ರತಿಪತ್ತಿಯ ಅಭಿವೃದ್ಧಿಗಾಗಿ ಅವರು ನನ್ನ ಕುಮಾರರ ಮತ್ತು ಇತರ ದೇವೀಕುಮಾರರ ದಾನಗಳನ್ನು ವಿತರಣಮಾಡುತ್ತಿರುವರು. ಧರ್ಮಾವದಾನ ಮತ್ತು ಧರ್ಮ ಪ್ರತಿಪತ್ತಿ ಅಂದರೆ ಇವು: ದಯೆ ದಾನ ಸತ್ಯ ಶುಚಿ ಮಾರ್ದವ ಸಾಧುತೆ; ಇವುಗಳಿಂದ ಲೋಕ ಅಭಿವೃದ್ಧಿ ಹೊಂದುತ್ತದೆ." (ಸ್ತಂ. ೫. ೭).

ಅಶೋಕನ ಧರ್ಮಮಹಾಮಾತ್ರರು ಸಾಮ್ರಾಜ್ಯದಲ್ಲೆಲ್ಲಾ ಸಂಚಾರ

ಮಾಡುತ್ತಾ, ನ್ಯಾಯಸ್ಥಾನಗಳಿಗೆ ಹೋಗಿ ವ್ಯವಹಾರದಲ್ಲೂ ದಂಡದಲ್ಲೂ ಆಗಿರಬಹುದಾದ ಕುಂದುಕೊರತೆಗಳನ್ನು ನಿವಾರಿಸುತ್ತಿದ್ದರೆಂದು ಗೊತ್ತಾಗಿದೆ. ಯಾರಿಗೂ ಅಕಸ್ಮಾತ್ ಬಂಧನವೂ ಅಕಸ್ಮಾತ್ ಪರಿಕ್ಲೇಶವೂ ಸಂಭವಿಸ ಕೂಡದೆಂದು ತೋಸಲಿಯ 'ನಗರ ವ್ಯವಹಾರಿ'ಕರಿಗೆ ಹೇಳಿದ ಅಶೋಕನು, ಅದೇ ಶಾಸನದಲ್ಲೇ, "ಇದಕ್ಕಾಗಿಯೇ ಐದು ವರ್ಷಗಳಿಗೊಂದುಸಾರಿ ಕರ್ಕಶರಲ್ಲದ ಚಂಡರಲ್ಲದ, ಸಖರಂತೆ ವರ್ತಿಸುವ, ಮಹಾಮಾತ್ರರನ್ನು ಈ ನನ್ನ ಅನುಶಾಸ್ತಿಯಂತೆ ನಡೆಯುತ್ತಿದೆಯೋ ಎಂದರಿಯಲು ನಾನು ಕಳುಹಿಸುತ್ತೇನೆ," ಎಂದು ಸಾರಿದ್ದಾನೆ. ಅಲ್ಲದೆ, "ಬಂಧನಬದ್ಧರಾದವರಿಗೆ ಸಹಾಯಮಾಡುವುದಕ್ಕೂ ಮಕ್ಕಳೊಂದಿಗರು ಕಷ್ಟದಲ್ಲಿ ತೊಳಲುವವರು ವೃದ್ಧರು ಎಂಬ ಕಾರಣಗಳಿಗಾಗಿ ಬಂಧನಬದ್ಧರಾದವರನ್ನು ಬಿಡಿಸುವುದಕ್ಕೂ ಅವರಿರುವರು" ಎಂದು ಅಶೋಕನು ಹೇಳಿರುವನು. ನ್ಯಾಯಸ್ಥಾನಗಳಲ್ಲಿ ಕೇವಲ ಕಾನೂನುಗಳನ್ನೇ ಆಶ್ರಯಿಸಿ ಅವಕ್ಕೆ ವಿರೋಧವಾಗಿ ನಡೆದವರನ್ನೆಲ್ಲ ಶಿಕ್ಷೆಗೆ ಗುರಿಮಾಡಿಬಿಡುತ್ತಾರೆ. ಆದರೆ ತಪ್ಪಿತಸ್ಥರ ವಯಸ್ಸು ಅವರ ಕಷ್ಟಗಳು ಅವರ ಸನ್ನಿವೇಶಗಳು ಅವರನ್ನು ಬಂಧಿಸಿದರೆ ಇತರರಿಗಾಗಬಹುದಾದ ತೊಂದರೆಗಳು ಇವುಗಳನ್ನೆಲ್ಲಾ ವ್ಯಕ್ತಿಯ ದೃಷ್ಟಿಯಿಂದ ವಿಮರ್ಶಿಸಿ ಧರ್ಮಕ್ಕೆ ಚ್ಯುತಿಬರದಂತೆ ಮಾಡುವುದೇ ಧರ್ಮಮಹಾಮಾತ್ರರ ಕೆಲಸವಾಗಿತ್ತು.

'ಭದ್ರಕಲ್ಪ' ಎಂಬ ಈಗಿನ ಕಲ್ಪದಲ್ಲಿ ಕಕುತ್‌ಸಂಧ, ಕನಕಮುನಿ, ಕಶ್ಯಪ, ಗೌತಮ ಎಂಬ ನಾಲ್ವರು ಬುದ್ಧರು ಆಗಿಹೋಗಿದಾರೆ. ಮೈತ್ರೇಯ ಎಂಬ ಬುದ್ಧ ಮಾತ್ರ ಇನ್ನು ಬರಲಿರುವನು" ಎಂದು ಆಗಿನ ಬೌದ್ಧರು ನಂಬಿದ್ದರು. ಹಿಂದಿನ ಬುದ್ಧರನ್ನೂ ಅವರು ಸ್ತೂಪಾದಿಗಳಿಂದ ಆರಾಧಿಸುತ್ತಿದ್ದರು. ಅಶೋಕನ ಬೌದ್ಧಮತಭಕ್ತಿ ಗೌತಮಬುದ್ಧನಿಗೆ ಮಾತ್ರ ಸಲ್ಲದೆ, ಹಿಂದಿನ ಬುದ್ಧರನ್ನೂ ಆವರಿಸಿತ್ತು. ತನ್ನ ಆಳ್ವಿಕೆಯ ಹದಿನಾಲ್ಕನೆಯ ವರ್ಷದಲ್ಲಿ ಅವನು ಕನಕಮುನಿಯ ಸ್ತೂಪವನ್ನು ಇಮ್ಮಡಿಸಿದನು. ತನ್ನ ಪ್ರಜೆಗಳಲ್ಲಿ ಯಾವುದಾದರೂ ಒಂದು ಪಂಗಡದವರ ಪ್ರೀತ್ಯಾದರಗಳಿಗೆ ಪಾತ್ರನಾದ ವ್ಯಕ್ತಿ ತನಗೂ ಪೂಜ್ಯನೇ ಎಂದು ವ್ಯಕ್ತಗೊಳಿಸಿದನು.

ಬೌದ್ಧಸಂಘದ "ಶಾಸನದಾಯಾದ"ನಾದ ಅಶೋಕನು ಆ ಸಂಘದ ಮೇಲೆ ಕೃಪಾದೃಷ್ಟಿಯಿಟ್ಟಿದ್ದನೆಂದು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ. ಭಾಬ್ರುಶಾಸನದಲ್ಲಿ ಅಶೋಕನು, "ಪೂಜ್ಯರೇ! ಬುದ್ಧನಲ್ಲೂ ಧರ್ಮದಲ್ಲೂ ಸಂಘದಲ್ಲೂ ನನಗೆ ಎಷ್ಟು ಗೌರವ, ಎಷ್ಟು ಪ್ರಸಾದ ಇದೆ ಎಂಬುದನ್ನು ನೀವು ಬಲ್ಲಿರಿ. ಪೂಜ್ಯರೇ! ಭಗವಾನ್ ಬುದ್ಧನ ಭಾಷಿತಗಳೆಲ್ಲವೂ

ಸುಭಾಷಿತಗಳು" ಎಂದು ಹೇಳಿರುವನು. ಸಿಂಹಳದ್ವೀಪದ ಧರ್ಮ ಗ್ರಂಥಗಳಲ್ಲಿ ಬೌದ್ಧ ಸಂಘದ ಮೂರನೆಯ ಧರ್ಮಸಂಗೀತಿಯನ್ನು ಅಶೋಕನ ಸಲಹೆಯಂತೆ ಅವನ ಆಶ್ರಯದಲ್ಲೇ ಅಭಿಷಿಕ್ತನಾಗಿ ಹದಿನೇಳು ವರ್ಷಗಳಾದಾಗ ಕೂಡಿಸ ಲಾಯಿತೆಂದು ಹೇಳಿದೆ.

ಮಹಾ ಪರಿನಿರ್ವಾಣದನಂತರ ಗೌತಮಬುದ್ಧನ ಒಡನಾಡಿಗಳಾಗಿದ್ದ ಸ್ಥವಿರರೆಲ್ಲರೂ ಸಭೆ ಸೇರಿ ಧರ್ಮವನ್ನು ಕ್ರೋಡೀಕರಿಸಿದರು. ಅನಂತರ ಒಂದು ಶತಮಾನದ ಮೇಲೆ ಭಿಕ್ಷುಗಳ ನಡವಳಿಕೆಯಲ್ಲಿ ಬಗೆಬಗೆಯ ಆಚಾರಗಳು ತಲೆದೋರಿದ್ದರಿಂದ ಎರಡನೆಯ ಧರ್ಮಸಂಗೀತಿಯು ಸೇರಿ, 'ಸ್ಥವಿರವಾದ'ವೇ ಸರಿಯೆಂದು ಸಾರಿ ಹತ್ತುಸಾವಿರ ಭಿಕ್ಷುಗಳನ್ನು ಸಂಘದಿಂದ ಹೊರದೂಡಿತು. ಆದರೆ, ಇದಾದ ಮೇಲೂ ಸಂಘದಲ್ಲಿ ಒಡಕುಗಳೂ ಅಭಿಪ್ರಾಯವಿಭಿನ್ನತೆಯೂ ಹುಟ್ಟಿ ಜಗಳಗಳು ಹೆಚ್ಚಿದುವು. ವಿಶಾಲಚಿಂತನೆ ವಿಲುಪ್ತವಾಯಿತು. ಸ್ಥವಿರ ವಾದಿಗಳಲ್ಲೇ ಒಡಕೆದ್ದು ತಮತಮಗೆ ತೋರಿದಂತೆ ಧರ್ಮತತ್ವಗಳನ್ನು ಟೀಕಿಸಿದರು; ಅಲ್ಲದೆ ಭಿಕ್ಷುಗಳಿಗನುಗುಣವಾದ ಚರ್ಯೆಯನ್ನು ತಮತಮಗೆ ಬೇಕಾದಹಾಗೆ ತಿದ್ದಿ ಸರಿಪಡಿಸಿಕೊಂಡರು. ಇದರಿಂದ ಸಂಘದಲ್ಲಿ ಅನೇಕ ನ್ಯೂನತೆಗಳು ಹುಟ್ಟಿಕೊಂಡುವು. ಸಂಘದ ವರಮಾನ ಹೆಚ್ಚಿ ವಿಹಾರಗಳಲ್ಲಿನ ಜೀವನದ ಸುಖ ಹೆಚ್ಚಿತು. ಆಗ ಮಾನವನ್ನೂ ಧರ್ಮವನ್ನೂ ಕಳೆದುಕೊಂಡ ಅನೇಕರು ಭಿಕ್ಷುಗಳಾಗಿ ಸೇರಿ ಅಲ್ಲಿಯ ಜೀವನದ ಮಟ್ಟವನ್ನಿಳಿಸಿದರು. ಸ್ವೇಚ್ಛಾವೃತ್ತಿಗೆ ಅವಕಾಶ ದೊರೆಯಿತು. ಉತ್ಸವಗಳೂ ಉಪವಾಸಗಳೂ ವ್ರತಗಳೂ ಸರಿಯಾಗಿ ನಡೆಯುತ್ತಿರಲಿಲ್ಲ. ಇದನ್ನರಿತ ಅಶೋಕನು ತುಂಬಾ ಮನನೊಂದು ಮೊಗ್ಗಲೀಪುತ್ತ ತಿಸ್ಸನನ್ನು ಕರೆಸಿ ಪಾಟಲೀಪುತ್ರದ ಅಶೋಕಾ ರಾಮದಲ್ಲಿ ಒಂದು ಮಹಾಸಭೆಯನ್ನು ಸೇರಿಸಿದನು. ಗುರುಗಳ ಸಂಗಡ ಅಶೋಕನೇ ಕುಳಿತು ಅವರನ್ನೆಲ್ಲ ಒಬ್ಬೊಬ್ಬರನ್ನಾಗಿ ಕರೆಸಿ "ಭಗವಾನ್ ಬುದ್ಧನು ಉಪದೇಶಮಾಡಿದ್ದು ಯಾವುದನ್ನು?" ಎಂದು ಪರೀಕ್ಷಿಸಿದನು. ಸ್ಥವಿರವಾದಕ್ಕೆ ಸೇರಿದ ಸರ್ವಾಸ್ತಿವಾದದವರ ಒಂದು ಪಂಗಡವಾದ ವಿಭಜ್ಯ ವಾದವೇ ಸರಿಯಾದದ್ದೆಂದು ಮೊಗ್ಗಲೀಪುತ್ತ ತಿಸ್ಸನು ಹೇಳಿದ ಮೇರೆಗೆ ಅದಕ್ಕೆ ಒಪ್ಪಿಗೆಯಿತ್ತವರನ್ನು ಮಾತ್ರ ಸರಿಯಾದ ಭಿಕ್ಷುಗಳೆಂದು ಸ್ವೀಕರಿಸಿ, ಒಪ್ಪದೆ ಇದ್ದ ಸಾವಿರಾರು ಜನರನ್ನು ಸಂಘದಿಂದ ತೆಗೆದುಹಾಕಿದನು. ಕೌಶಾಂಬಿ ಸಾಂಚಿ ಸಾರನಾಥ ಸ್ತಂಭಶಾಸನಗಳಿಂದ ಅವನಿಗೆ ಸಂಘದ ಮೇಲೆ ಇಂತಹ ಅಧಿಕಾರವಿತ್ತೆಂದು ಗೊತ್ತಾಗುತ್ತದೆ. ಇವು ಮೂರೂ ಆ ಮಹಾಸಭೆಯಾದ ನಂತರ ಹುಟ್ಟಿಕೊಂಡಿರಬೇಕು. ಸಾರನಾಥ ಶಾಸನದಲ್ಲಿ, "ಸಂಘವನ್ನು

ಯಾರೂ ಭೇದಿಸಕೂಡದು. ಸಂಘವನ್ನು ಭೇದಿಸುವ ಭಿಕ್ಷುವಿಗಾಗಲಿ ಭಿಕ್ಷುಣಿಗಾಗಲಿ ಬಿಳಿ ಬಟ್ಟೆಯನ್ನುಡಿಸಿ ಅವರನ್ನು ಅನಾವಾಸಕ್ಕೆ ಕಳುಹಿಸ ತಕ್ಕದ್ದು" ಎಂದೂ, ಸಾಂಚಿಸ್ತಂಭಶಾಸನದಲ್ಲಿ, "ನನ್ನ ಪುತ್ರಪೌತ್ರರಿರುವ ವರೆಗೂ ಚಂದ್ರ ಸೂರ್ಯರಿರುವವರೆಗೂ ಭಿಕ್ಷುಸಂಘವೂ ಭಿಕ್ಷುಣಿ ಸಂಘವೂ ಸಮಗ್ರವಾಗಿರತಕ್ಕದ್ದು ; ಸಂಘವನ್ನು ಭೇದಿಸುವ ಭಿಕ್ಷುವಿಗಾಗಲಿ ಭಿಕ್ಷುಣಿ ಗಾಗಲಿ ಬಿಳಿಬಟ್ಟೆಯನ್ನುಡಿಸಿ ಅವರನ್ನು ಅನಾವಾಸಕ್ಕೆ ಕಳುಹಿಸತಕ್ಕದ್ದು" ಎಂದು ಅಶೋಕನು ಅಧಿಕಾರವಾಣಿಯಿಂದ ಆಜ್ಞಾಪಿಸಿರುವುದನ್ನು ನೋಡಿದರೆ ಧರ್ಮಸಂಗೀತಿಯಲ್ಲಾದ ಪರೀಕ್ಷೆಯೂ ಅದರಲ್ಲಿ ತೇರ್ಗಡೆಯಾಗದವರಿಗೆ ಅವನು ವಿಧಿಸಿದ ಶಿಕ್ಷೆಯೂ ಅಷ್ಟು ಅಸಂಭಾವ್ಯವಲ್ಲವೆಂದು ತೋರುವುದು. ಅಲ್ಲದೆ, ಸಂಘಭೇದವನ್ನು ಒಂದು ಮಹಾ ಪಾತಕವೆಂದೇ ಬೌದ್ಧಗ್ರಂಥಗಳು ಪರಿಗಣಿಸುತ್ತವೆ.

ಇದಾದ ಮೇಲೆ ಮೊಗ್ಗಲೀಪುತ್ತ ತಿಸ್ಸನು ಧರ್ಮಪ್ರಚಾರಕ್ಕಾಗಿ ನಾನಾ ದೇಶಗಳಿಗೆ ಸ್ಥವಿರರನ್ನು ಕಳುಹಿಸಿದನೆಂದು ಮಹಾವಂಶದಲ್ಲಿ ಹೇಳಿದೆ. ಅಶೋಕನ ಬೆಂಬಲವಿಲ್ಲದೆ ಈ ಮಹತ್ಕಾರ್ಯ ನಡೆದಿರಲಾರದು. ಮಹಾವಂಶ ದಲ್ಲಿ ಹೇಳಿರುವಂತೆ ಸ್ಥವಿರರನ್ನೂ ಅವರ ಕಾರ್ಯಕ್ಷೇತ್ರಗಳನ್ನೂ ಈ ರೀತಿ ಪಟ್ಟಿಮಾಡಬಹುದು :

| | | |
|---|---|---|
| ಮಜ್ಝಂತಿಕ | .... | ಕಾಶ್ಮೀರ, ಗಾಂಧಾರ |
| ಮಹಾದೇವ | .... | ಮಹಿಷಮಂಡಲ |
| ರಕ್ಷಿತ | .... | ವನವಾಸಿ |
| ಯವನ ಧರ್ಮರಕ್ಷಿತ | .... | ಅಪರಾಂತಕ |
| ಮಹಾಧರ್ಮರಕ್ಷಿತ | .... | ಮಹಾರಟ್ಠ |
| ಮಹಾರಕ್ಷಿತ | .... | ಯೋನ |
| ಮಜ್ಝಿಮ | .... | ಹಿಮಾಲಯ |
| ಉತ್ತರ ಸೋನ | .... | ಸುವರ್ಣಭೂಮಿ |
| ಮಹೇಂದ್ರ, ಇಟ್ಠಿಯ, ಉಟ್ಟಿಯ, ಸಂಬಲ, ಭದ್ದಸಾಲ | .... | ಲಂಕೆ |

ಇವರೆಲ್ಲರೂ ಆಯಾ ಪ್ರದೇಶಗಳಿಗನುಗುಣವಾದ ಸೂತ್ರಗಳನ್ನೂ ಉಪದೇಶ ಗಳನ್ನೂ ಒತ್ತಿ ಹೇಳಿ ಪ್ರಚಾರ ನಡೆಸಿದ್ದರಿಂದ ಅಲ್ಲೆಲ್ಲ ಬೌದ್ಧಧರ್ಮ ಬಹಳಮಟ್ಟಿಗೆ ಪ್ರಚಾರವಾಯಿತೆಂದು ಮಹಾವಂಶದಲ್ಲಿ ಹೇಳಿದೆ. ಪ್ರತಿ

ಪ್ರಾಂತದಲ್ಲೂ ನಲವತ್ತು ಸಾವಿರದಿಂದ ಹಿಡಿದು ಎಂಬತ್ತು ಸಾವಿರದ ತನಕ ಉಪಾಸಕರೂ ಸಾವಿರಾರು ಭಿಕ್ಷುಗಳೂ ಸೇರಿದರು. ಹಿಮಾಲಯ ಪ್ರಾಂತದಲ್ಲಿ ಎಂಬತ್ತುಕೋಟಿ ಜನ ಉಪಾಸಕರಾದರು ಎಂದು ಹೇಳಿರುವುದರಿಂದ ಬಹುಶಃ ಎರಡು ಮೂರು ಶತಮಾನಗಳ ಅನಂತರ ಮಧ್ಯ ಏಷ್ಯಾದಲ್ಲೂ ಪೂರ್ವ ಏಷ್ಯಾದಲ್ಲೂ ನಡೆದ ಧರ್ಮಪ್ರಚಾರವನ್ನು ಅಶೋಕನ ಕಾಲಕ್ಕೆ ಅನ್ವಯಿಸಿ ಮಹಾವಂಶದಲ್ಲಿ ಎಂಬತ್ತು ಕೋಟಿ ಎಂಬ ಅಂಕಿಯನ್ನು ಕೊಟ್ಟಿರಬಹುದೆಂದು ತೋರುತ್ತದೆ.

ಮಹಾವಂಶದಲ್ಲಿ ಹೇಳಿರುವಂತೆ ಸ್ಥವಿರರು ನಾನಾ ದೇಶಗಳಿಗೆ ಪ್ರಯಾಣ ಬೆಳೆಸಿದರೆಂಬುದಕ್ಕೆ ಅನಿರೀಕ್ಷಿತವಾದ ಹಲವು ನಿದರ್ಶನಗಳು ದೊರೆತಿವೆ. ಸಾಂಚಿಯಲ್ಲಿರುವ ಸ್ತೂಪದಲ್ಲಿ (ನಂ. ೨) ಸಿಕ್ಕಿದ ಒಂದು ಕಲ್ಲುಪೆಟ್ಟಿಗೆಯ ಸುತ್ತ ಒಳಗಿನ ಧಾತು ಯಾರು ಯಾರದೆಂಬುದನ್ನೂ ಬರೆದಿದೆ. ಒಟ್ಟು ಹತ್ತು ಸ್ಥವಿರರ ಹೆಸರುಗಳು ನಮಗೆ ಅಲ್ಲಿ ಸಿಕ್ಕುತ್ತವೆ.

ಎಲ್ಲಾ ಹೇಮವತಗಳ ಗುರುವಾದ ಕಾಶಪಗೊತ, ಮಜ್ಝಿಮ, ಹಾರಿತೀಪುತ, ವಚ್ಛಿಸುವಿಜಯತ, ಮಹವನಾಯ, ಅಪಗೀವ, ಕೊಡಿನಿಪುತ, ಕೊಶಿಕಿಪುತ, ಗೊತಿಪುತ ಮೊಗಲಿಪುತ" ಎಂಬ ಸ್ಥವಿರರ ಧಾತುಗಳು ಆ ಸಂಪುಟಗಳಲ್ಲಿವೆ.[1] ಮಹಾವಂಶದಲ್ಲಿ ಹೇಳಿರುವ ಹಾಗೆ ಹಿಮಾಲಯ ಪ್ರಾಂತಕ್ಕೆ ಹೊರಟವರು ಮಜ್ಝಿಮ ಎಂಬುವರು! ಇವರಲ್ಲಿ ಎರಡನೆಯ ಮಹಾವಂಶದ ಮಜ್ಝಿಮ! ಸಮಂತಪಾಸಾದಿಕಾ ಎಂಬ ಮತ್ತೊಂದು ಬೌದ್ಧಗ್ರಂಥದಲ್ಲಿ ಮಜ್ಝಿಮನ ಸಹಾಯಕ್ಕೆಂದು, ಹಿಮಾಲಯಾ ಪ್ರದೇಶದಲ್ಲಿದ್ದ ಐದು ರಾಷ್ಟ್ರಗಳಿಗೆ ಒಂದೊಂದು ರಾಷ್ಟ್ರಕ್ಕೆ ಒಬ್ಬೊಬ್ಬರಂತೆ ಇನ್ನೂ ನಾಲ್ಕು ಜನರಿದ್ದರೆಂದೂ ಅವರ ಹೆಸರು ಕಶ್ಯಪಗೂತ್ತ ದುಂದುಭಿಸ್ಸರ ಅಲಕದೇವ ಮಹಾದೇವ ಎಂದೂ ಹೇಳಿದೆ. ಆದ್ದರಿಂದ ಕಾಶಪಗೊತ ಎಂಬ ಸ್ಥವಿರನೂ ಮಜ್ಝಿಮ ಎಂಬ ಸ್ಥವಿರನೂ ನಿಜವಾಗಿಯೂ ಹಿಮಾಲಯ ಪ್ರಾಂತಕ್ಕೆ ಹೋಗಿ ಧರ್ಮಪ್ರಚಾರಮಾಡಿ ಅಲ್ಲಿಯ ಜನರ 'ಗುರು'ಗಳಾಗಿದ್ದರೆಂದು ನಾವು ನಿರ್ಧರಿಸಬಹುದಾಗಿದೆ. ಕೊನೆಯ ಹೆಸರಾದ ಮೊಗಲಿಪುತ ಎಂಬುದು ಮೊಗ್ಗಲೀಪುತ್ತ ತಿಸ್ಸನನ್ನೇ ಸೂಚಿಸುತ್ತದೆ ಎಂದು ತೋರುತ್ತದೆ.[2]

ಅಶೋಕನು ತನ್ನ ಶಾಸನಗಳಲ್ಲಿ ಹಲವು ಪಾಶ್ಚಾತ್ಯ ದೇಶಗಳಿಗೆ 'ದೂತ'ರನ್ನು ಕಳುಹಿಸಿದೆನೆಂದು ಹೇಳುತ್ತಾನೆ. ಈ ದೂತರಿಗೂ ಬೌದ್ಧಧರ್ಮವನ್ನು

---

[1] Sir John Marshall, *Guide to Sanchi*, Ch. x.

[2] Bhandarkar, *Asoka*, page 161; Mukherji, *Asoka*, p. 35.

ತಿಳಿಸಲು ಹೊರಟ ಈ ಸ್ಥವಿರರಿಗೂ ಸಂಬಂಧವಿತ್ತೋ ಇಲ್ಲವೋ ಎಂದು ನಿರ್ಧರಿಸುವುದು ಕಷ್ಟ. "ಯೋನ" ದೇಶವೊಂದನ್ನು ಮಾತ್ರ ಮಹಾವಂಶದಲ್ಲಿ ಹೇಳಿದೆ. ಅಶೋಕನು "ತಾಮ್ರಪರ್ಣಿಯ ತನಕ" ಎಂದು ಹೇಳಿರುವುದು ಅವನ ಕಾಲದಲ್ಲಿ ಲಂಕೆಗೆ, ಅಂದರೆ ಸಿಂಹಳದ್ವೀಪಕ್ಕೆ ಪ್ರಚಾರಕರನ್ನು ಕಳುಹಿಸಿದ ಸನ್ನಿವೇಶವನ್ನು ಉದ್ದೇಶಿಸಿಯೇ ಇರಬಹುದು. ಸಿಂಹಳದ್ವೀಪಕ್ಕೆ "ತಾಮ್ರಪರ್ಣಿ" ಎಂಬ ಹೆಸರಿದ್ದಂತೆ ಕಾಣುತ್ತದೆ. ತಿರುನೆಲ್‌ವೇಲಿ ಜಿಲ್ಲೆಯಲ್ಲಿ ಹರಿಯುತ್ತಿರುವ ತಾಮ್ರಪರ್ಣಿ ನದಿ, ಅದನ್ನು ಉತ್ತರ ದೇಶದವರು ಒಂದು ಗಡಿಯಾಗಿ ಎಣಿಸುವಷ್ಟು ದೊಡ್ಡದಲ್ಲ.

ಮಹಾವಂಶ ದ್ವೀಪವಂಶಗಳಲ್ಲಿ ಸಿಂಹಳದ್ವೀಪಕ್ಕೆ ಧರ್ಮದ ಜ್ಯೋತಿಯನ್ನು ನೀಡಿದವನು ಮಹೇಂದ್ರನೆಂದು ಹೇಳಿದೆ. ಆದರೆ, ಈ ಮಹೇಂದ್ರನು ಯಾರು? ಅಶೋಕನ ತಮ್ಮನೇ, ಮಗನೇ ಎಂಬುದು ಇಂದಿಗೂ ಒಂದು ದೊಡ್ಡ ತೊಡಕಾಗಿ ಕುಳಿತಿದೆ. ದಿವ್ಯಾವದಾನದಲ್ಲಿ ಮಹೇಂದ್ರನ ಸಮಾಚಾರವೇ ಇಲ್ಲ. ಕುಣಾಲ ಎಂಬ ಮಗನಲ್ಲದೆ ಬೇರೆ ಅಶೋಕನ ಇತರ ಮಕ್ಕಳ ವಿಷಯವೇ ಇಲ್ಲ. ವಿಗತಶೋಕ ಅಥವಾ ವೀತಶೋಕ ಎಂಬ ಒಬ್ಬ ತಮ್ಮ ಮಾತ್ರ ಮೊದಲು ಬುದ್ಧದ್ವೇಷಿಗಳಾದ ತೀರ್ಥ್ಯರ ಸಂಗಡಕ್ಕೆ ಸೇರಿದ್ದು ಅನಂತರ ಅಶೋಕನ ಪ್ರಯತ್ನದಿಂದ ವೈರಾಗ್ಯವನ್ನು ತಾಳಿ ತಿಳಿವಳಿಕೆಯನ್ನು ಪಡೆದು ಸ್ಥವಿರ ಯಶಸ್ಸಿನ ಉಪದೇಶದಂತೆ ಸಂನ್ಯಾಸವನ್ನು ಸ್ವೀಕರಿಸಿದನು. ಮಹಾವಂಶದಲ್ಲಿ ವಿಗತಶೋಕನಿಗೆ ಬದಲಾಗಿ ತಿಷ್ಯ ಎಂದು ಹೇಳಿದೆ. ತಿಷ್ಯನೂ ಕೂಡ ಚಿಕ್ಕ ವಯಸ್ಸಿನಲ್ಲೇ ಸುಖಲೋಲುಪತೆಯನ್ನು ತೊರೆದು, ಅಶೋಕನ ಪ್ರಯತ್ನದಿಂದ ವೈರಾಗ್ಯವನ್ನು ತಾಳಿ ಸಂನ್ಯಾಸವನ್ನು ಸ್ವೀಕರಿಸುತ್ತಾನೆ. ಮಹೇಂದ್ರನೆಂಬುವನು ಅಶೋಕನ ಮಗನೆಂದೂ ಅವನು ತನ್ನ ಇಪ್ಪತ್ತನೆಯ ವರ್ಷದಲ್ಲೇ ಭಿಕ್ಷುವಾದನೆಂದೂ ಮಹಾವಂಶದಲ್ಲಿ ಹೇಳಿದೆ.

ವಿನ್ಸೆಂಟ್ ಸ್ಮಿತ್ ಎಂಬ ಚರಿತ್ರಕಾರರು ಸಿಂಹಳದ್ವೀಪವನ್ನು ಪ್ರವೇಶಿಸಿ ಅಲ್ಲಿ ಧರ್ಮವನ್ನು ಬಿತ್ತಿದವನು ಅಶೋಕನ ತಮ್ಮನೆಂದೇ ವಾದಿಸುತ್ತಾರೆ. ಮಹೇಂದ್ರನ ಕಥೆ ಎಷ್ಟೇ ಪವಾಡಗಳಿಂದ ತುಂಬಿದ್ದರೂ, ಅಂತಹ ಒಬ್ಬ ವ್ಯಕ್ತಿ ಇದ್ದನೆಂದೂ ಅವನಿಂದಲೇ ಆ ಕಾರ್ಯ ನಡೆಯಿತೆಂದೂ ಅವರು ಹೇಳುವರು. ಮಹೇಂದ್ರನ ವೈರಾಗ್ಯದ ಕಥೆಯನ್ನು ಫಾಹಿಯನ್ ಮುಂತಾದ ಚೀಣಾದೇಶದ ಯಾತ್ರಿಕರು ಹೇಳುತ್ತಾರೆ. ಪಾಟಲೀಪುತ್ರಪ್ರದೇಶದಲ್ಲಿ ಸಂಚರಿಸಿ ಅಲ್ಲಿಯ ಪುರಾಣಗಳನ್ನು ತಿಳಿದುಕೊಂಡಿದ್ದ ಚೀಣಾಯಾತ್ರಿಕರನ್ನೇ ಈ ವಿಷಯದಲ್ಲಿ ನಾವು ನಂಬಬೇಕಾದದ್ದು ಎಂದು ಸ್ಮಿತ್‌ರವರು ಹೇಳುತ್ತಾರೆ.

ಆದರೆ, ಫಾಹಿಯರ್ನ್ ಇಂಡಿಯಾ ದೇಶಕ್ಕೆ ಬಂದಾಗ ಅಶೋಕನು ಕಾಲವಾಗಿ ಆರುನೂರು ವರ್ಷಗಳಾಗಿದ್ದವು. ಅಷ್ಟು ಹೊತ್ತಿಗೆ ನಿಜವನ್ನು ಕೊಂಕಿಸುವ ಸನ್ನಿವೇಶಗಳು ಎಷ್ಟೊಂದು ಸಂಭವಿಸಿದ್ದುವೋ ಬಲ್ಲವರಾರು? ಪಾಂಡ್ಯ ರಾಜಧಾನಿಯ ಪೂರ್ವಕ್ಕೆ ಕಾವೇರೀತೀರದ ದಕ್ಷಿಣದಲ್ಲಿ ಅಶೋಕರಾಜನ ತಮ್ಮನಾದ ಮಹೇಂದ್ರನು ಕಟ್ಟಿಸಿದ ಒಂದು ಸಂಘಾರಾಮದ ಅವಶೇಷಗಳನ್ನು ಕಂಡೆನೆಂದು ಹ್ಯುಯರ್ನ್‌ತ್ಸಾಂಗನು ಹೇಳುತ್ತಾನೆ. ಸ್ಮಿತ್‌ರವರು ತಮ್ಮ ಅಭಿಪ್ರಾಯಕ್ಕೆ ಊರುಗೋಲಾಗಿ ಅವಲಂಬಿಸುವ ಮತ್ತೊಂದು ವಿಷಯವೂ ಸ್ವಾರಸ್ಯವಾಗಿದೆ![1] "ಚಕ್ರವರ್ತಿಯ ತಮ್ಮಂದಿರು ಸನ್ಯಾಸ ತೆಗೆದುಕೊಳ್ಳುವುದು ಪದ್ಧತಿಗೂ ವಿಧಿಗೂ ಅನುರೂಪವಾಗಿದೆ" ಎಂದು ಹೇಳಿ ಮ-ತ್ವಾರ್ನ್-ಲಿನ್ ಎಂಬ ಒಬ್ಬ ಚೀನೀ ಚರಿತ್ರಕಾರನನ್ನು ಮರೆಹೋಗುತ್ತಾರೆ. ಆತನ ಗ್ರಂಥದಲ್ಲಿ "ಇನ್ಡಿಯಾದ ಶಾಸನದಂತೆ ಒಬ್ಬ ರಾಜನು ಸತ್ತಾಗ ಕುಮಾರರಾಜನು ಪಟ್ಟಕ್ಕೆ ಬರುತ್ತಾನೆ; ಮಿಕ್ಕ ಮಕ್ಕಳೆಲ್ಲರೂ ಸಂಸಾರವನ್ನು ತ್ಯಜಿಸಿ ಭಿಕ್ಷುಗಳಾಗುತ್ತಾರೆ; ಏಕೆಂದರೆ, ಅವರನ್ನು ತಮ್ಮ ಸ್ವದೇಶದಲ್ಲಿ ಇರಗೊಡಿಸರು," ಎಂದು ಆತ ಹೇಳಿರುವುದನ್ನೇ ಆಧಾರವಾಗಿಟ್ಟುಕೊಂಡು ಸ್ಮಿತ್‌ರವರು ಮಹೇಂದ್ರನನ್ನು ಅಶೋಕನ ತಮ್ಮನೆಂದು ಸಾಧಿಸುತ್ತಾರೆ! ಇಂತಹ ಪದ್ಧತಿಯೂ ವಿಧಿಯೂ ನಮ್ಮ ದೇಶದಲ್ಲಿರಲಿಲ್ಲ. ಅದನ್ನು ಆ ಚೀಣಾ ದೇಶದವನು ಹೇಗೆ ಹುಡುಕಿ ತೆಗೆದನೋ ಏನೋ?

ಅಂತೂ ಸಿಂಹಳದ್ವೀಪಕ್ಕೆ ಬುದ್ಧನ ಆದೇಶವನ್ನು ಕೊಂಡೊಯ್ದುವನು ಮಹೇಂದ್ರನೆಂಬುವದರಲ್ಲಿ ಸಂದೇಹವಿಲ್ಲ. ಅಲ್ಲಿಯ ರಾಜನಾದ ದೇವಾನಾಂಪ್ರಿಯ ತಿಷ್ಯನಿಗೂ ಅಶೋಕನಿಗೂ ಆಗಲೇ ಒಂದುತೆರನ ಮಧುರ ಬಾಂಧವ್ಯ ಬೆಳೆದಿತ್ತು. ಸಿಂಹಳದಿಂದ ಕೆಲವರು ಅರಸುಮಕ್ಕಳೂ ಅಧಿಕಾರಿಗಳೂ ಹಡಗುಹತ್ತಿ ಗಂಗಾನದಿ ಸಮುದ್ರವನ್ನು ಸೇರುವ ಕಡೆ ಇದ್ದ ತಾಮ್ರಲಿಪ್ತಿ ಎಂಬ ಸ್ಥಳಕ್ಕೆ ಬಂದು ಅಲ್ಲಿಂದ ಪಾಟಲೀಪುತ್ರಕ್ಕೆ ಹೋಗಿ ಅಲ್ಲಿ ಅಶೋಕನ ಆಸ್ಥಾನದಲ್ಲೇ ಐದು ತಿಂಗಳಕಾಲ ಅತಿಥಿಗಳಾಗಿದ್ದರು. ಅವರು ಒಪ್ಪಿಸಿದ ಕಾಣಿಕೆಗಳನ್ನು ಅಶೋಕನು ಪ್ರೀತ್ಯಾದರಗಳಿಂದ ತೆಗೆದುಕೊಂಡನು. ಕಡೆಗೆ ನಿಯೋಗಗೋಷ್ಠಿಯವರು ಸ್ವದೇಶಕ್ಕೆ ಹಿಂತಿರುಗಿದಾಗ ಮಿತ್ರರಾಜನಿಗೆ ಅಶೋಕನು "ನಾನು ಬುದ್ಧನಲ್ಲಿ ಧರ್ಮದಲ್ಲಿ ಸಂಘದಲ್ಲಿ ಶರಣುಹೋಗಿದ್ದೇನೆ, ಶಾಕ್ಯಪುತ್ರನ ಧರ್ಮದ ಉಪವಾಸಕನಾಗಿದ್ದೇನೆ, ಜಿನಧರ್ಮದ ಈ ರತ್ನತ್ರಯಗಳಲ್ಲಿ ನೀವು ಮನವಿಡಬೇಕು. ನೀವು ಬುದ್ಧನನ್ನೇ ಶರಣುಹೋದರೊಳ್ಳಿತು"

---

[1] Smith, *Asoka*, p. 51.

ಎಂಬ ಸಂದೇಶವನ್ನು ಕಳುಹಿಸಿದನು. ಅಲ್ಲದೆ ಮಹೇಂದ್ರನಿಗೆ ಅಲ್ಲಿಗೆ ಹೋಗುವಂತೆ ಸೂಚನೆಯಿತ್ತನು.

ಮಹೇಂದ್ರನು ಸ್ಥವಿರನಾಗಿ ಆಗ ಹನ್ನೆರಡು ವರ್ಷಗಳಾಗಿತ್ತು. ತನ್ನ ಸಂಗಡ ಇನ್ನೂ ನಾಲ್ಕು ಭಿಕ್ಷುಗಳನ್ನೂ ಸಂಘಮಿತ್ರಳ ಮಗ ಸುಮನನನ್ನೂ ಜೊತೆಮಾಡಿಕೊಂಡು ಅವನು ಲಂಕಾಭಿಮುಖವಾಗಿ ತೆರಳಿದನು. ದಾರಿಯಲ್ಲಿ ಉಜ್ಜಯಿನಿಯ ಹತ್ತಿರದ ಚೈತ್ಯಗಿರಿ (ಈಗಿನ ಸಾಂಚಿ)ಗೆ ಹೋಗಿ ಅಲ್ಲಿ ತನ್ನ ತಾಯಿಯ ದರ್ಶನವನ್ನು ಪಡೆದು ಆಕೆಯ ವಾತ್ಸಲ್ಯಪೂರಿತವಾದ ಆತಿಥ್ಯ ದಲ್ಲೇ ಆರುತಿಂಗಳಕಾಲವಿದ್ದನು. ಅನಂತರ ಅವರು ಸಿಂಹಳವನ್ನು ಸೇರಿದರು. ದೇವಾನಾಂಪ್ರಿಯ ತಿಷ್ಯನು ಅವರನ್ನು "ದ್ವೀಪವರ್ಧನ"ರೆಂದು ಕೊಂಡಾಡಿ ಪೂಜೆಪುರಸ್ಕಾರಗಳಿಂದ ಬರಮಾಡಿಕೊಂಡು ರಾಜಧಾನಿಯಾದ ಅನುರಾಧ ಪುರಕ್ಕೆ ಕರೆದುತಂದನು. ಅಲ್ಲಿ ಅವರ ಉಪದೇಶಾಮೃತವನ್ನು ಸವಿದು ಸಾವಿರಾರು ಸ್ತ್ರೀಪುರುಷರು ಧರ್ಮಮಾರ್ಗವನ್ನವಲಂಬಿಸಿದರು. ದೇವಾ ನಾಂಪ್ರಿಯ ತಿಷ್ಯನ ತಮ್ಮನೂ ಯುವರಾಜನೂ ಆಗಿದ್ದ ಮಹಾನಾಗನ ಪತ್ನಿ ಅನುಲಾ ಎಂಬ ರಾಜಕುಮಾರಿಯೂ ಅವಳ ಐನೂರುಜನ ಸಖಿಯರೂ ತಕ್ಷಣವೇ 'ಸಕೃದಾಗಮಫಲ'ವನ್ನು ಹೊಂದಿದರು. ಅವರೆಲ್ಲರೂ ಭಿಕ್ಷುಣಿ ಯರಾಗಬೇಕೆಂಬ ತಮ್ಮ ತೀವ್ರಾಸಕ್ತಿಯನ್ನು ಸೂಚಿಸಿದಾಗ ಮಹೇಂದ್ರನು "ನಾವು ನಿಮಗೆ ಸಂನ್ಯಾಸವನ್ನು ಕೊಡುವುದು ತರವಲ್ಲ"ವೆಂದು ತಟಸ್ಥ ನಾಗಿ, ಪಾಟಲೀಪುತ್ರದಿಂದ ಸಂಘಮಿತ್ರಳನ್ನು ಕರೆತರಲು ಸಲಹೆಯಿತ್ತನು. ಅರಿಷ್ಠ ಎಂಬ ಅಮಾತ್ಯನು ಜಂಬುಕೋಲ ಎಂಬ ಬಂದರಿನಿಂದ ಸಮುದ್ರ ಮಾರ್ಗವಾಗಿ ಪಾಟಲೀಪುತ್ರಕ್ಕೆ ಪ್ರಯಾಣಹೊರಟನು.

ದೇವಾನಾಂಪ್ರಿಯ ತಿಷ್ಯನು ಅನೇಕ ಚೈತ್ಯ ವಿಹಾರಗಳನ್ನೂ ಸರೋವರ ಗಳನ್ನೂ ಆರಾಮಗಳನ್ನೂ ಪ್ರಾಸಾದಗಳನ್ನೂ ಭಿಕ್ಷುಗಳಿಗಾಗಿ ನಿರ್ಮಿಸಿ ದಾನಮಾಡಿದನು. ಬೋಧಿವೃಕ್ಷದ ಶಾಖೆಯನ್ನು ನೆಡುವುದಕ್ಕೆ ಒಂದು ಸ್ಥಳ ವನ್ನು ಗೊತ್ತುಮಾಡಿ ಅದರ ಸುತ್ತ ಒಂದು ಮಂಟಪವನ್ನೂ ಕಟ್ಟಿದನು. ಅಷ್ಟರಲ್ಲೇ ಭಾರತವರ್ಷಕ್ಕೆ ಹೋಗಿದ್ದವರು ಹಿಂದಕ್ಕೆ ಬಂದರು. ಅವರ ಸಂಗಡಲೇ ಸಂಘಮಿತ್ರಳೂ ಬಂದಳು. ಭಗವಾನ್ ಬುದ್ಧನು ಒಂದು ಭಿಕ್ಷಾ ಪಾತ್ರವೂ, ಒಂದು ದಂತ, ಕೆಲವು ಅಸ್ಥಿಯ ತುಂಡುಗಳು ಮೊದಲಾದ ಧಾತುಗಳೂ ಸಿಂಹಳದ್ವೀಪಕ್ಕೆ ಬಂದುವು. ಅವುಗಳನ್ನೆಲ್ಲ ಸ್ತೂಪಗಳಲ್ಲಿರಿಸಿ ದೇವಾನಾಂಪ್ರಿಯನು ಸಂತೃಪ್ತನಾದನು. ಮಹೇಂದ್ರನು ಲಂಕಾದ್ವೀಪದಲ್ಲಿ

೨೮ ವರ್ಷಗಳಕಾಲ ಧರ್ಮ ಪ್ರಚಾರಮಾಡಿ ತನ್ನ ೬೦ ನೆಯ ವರ್ಷದಲ್ಲಿ ಕಾಲವಶನಾದನು. ಮುಂದಿನ ವರ್ಷದಲ್ಲೇ ಸಂಘಮಿತ್ರಳೂ ಕಾಲವಾದಳು.

ಹೀಗೆ ಅಶೋಕನ ಮಕ್ಕಳಿಂದಲೇ ತಮ್ಮ ದ್ವೀಪದಲ್ಲಿ ಭಗವಾನ್ ಬುದ್ಧನ ಧರ್ಮವು ಪ್ರಚಾರವಾಯಿತೆಂದು ಹೇಳುವುದು ಸಿಂಹಳದವರಿಗೆ ಹೆಮ್ಮೆ. ಆದರೆ, ಅನೇಕರು ಅದನ್ನೊಪ್ಪುವುದಿಲ್ಲ. ಓಲ್ಡನ್‌ಬರ್ಗ್‌ರವರು, ಮಹೇಂದ್ರ ಸಂಘಮಿತ್ರ ಮುಂತಾದವರ ಆಗಮನದ ವಿಷಯವಾಗಿಯೂ ಅವರು ಮಾಡಿದ ಪವಾಡಗಳ ವಿಷಯವಾಗಿಯೂ ಅತಿಶಯೋಕ್ತಿ ಬಹಳವಿದೆ; ಅಲ್ಲದೆ ಧರ್ಮಪರಿವರ್ತನದ ಕೆಲಸ ಇನ್ನೂ ನಿಧಾನವಾಗಿ ಇಷ್ಟು ಆರ್ಭಟವಿಲ್ಲದೆ ನಡೆಯುವುದೇ ಸಹಜ, ಎಂದು ಅಭಿಪ್ರಾಯಪಟ್ಟಿರುವರು. ಮಗಧದೇಶಕ್ಕೂ ಸಿಂಹಳಕ್ಕೂ ನೇರವಾಗಿ ಸಂಬಂಧ ಬೆಳೆದು ಭಿಕ್ಷುಗಳು ಬಂದು ಹೋಗುವುದು ಅಸಂಭವ; ಅವರು ಮೊದಲು ದಕ್ಷಿಣ ಇಂಡಿಯಾದಲ್ಲಿನ ಕಾಂಚಿ ಮುಂತಾದ ಊರುಗಳಿಂದಲೇ ಸಿಂಹಳಕ್ಕೆ ಹೋಗಿರಬೇಕೆಂದು ತೋರುತ್ತದೆಯಾದರೂ ಅನೇಕ ಶತಮಾನಗಳಿಂದ ಸಿಂಹಳರಲ್ಲಿ ಬೇರೂರಿರುವ ಈ ನಂಬಿಕೆಗೆ ತಕ್ಕ ಆಧಾರವಿರಬೇಕೆನಿಸುತ್ತದೆ. ಏಕೆಂದರೆ, ಅನುರಾಧಪುರ ಎಂಬ ಪ್ರಾಚೀನ ಸಿಂಹಳ ನಗರದಲ್ಲಿ ಸ್ತೂಪಾರಾಮ, ಜೇತವನಾರಾಮ ಮುಂತಾದ ಅಶೋಕನ ಕಾಲದ ಕಟ್ಟಡಗಳ ಅವಶೇಷಗಳು ಸಿಕ್ಕಿವೆ.

ಅಶೋಕನ ಆಳ್ವಿಕೆಯ ಹದಿನೆಂಟನೆಯ ವರ್ಷದಲ್ಲಿ ಮಹೇಂದ್ರನು ಲಂಕೆಗೆ ತೆರಳಿದನಂತೆ. ಮುಂದಿನ ವರ್ಷವೇ ಸಂಘಮಿತ್ರಳೂ ಹೊರಟಳು. ತನ್ನ ಆಳ್ವಿಕೆಯ ಇಪ್ಪತ್ತನೆಯ ವರ್ಷದಲ್ಲಿ ಅಶೋಕನು ಲುಂಬಿನೀವನಕ್ಕೆ ಭೇಟಿಯಿತ್ತು, ಅಲ್ಲಿ ಒಂದು ಸ್ತಂಭವನ್ನು ನಿಲ್ಲಿಸಿ ಶಾಸನ ಬರೆಸಿದನು. ಹತ್ತನೆಯ ವರ್ಷದಲ್ಲೊಂದುಸಲ ಅಶೋಕನು ಅಲ್ಲಿಗೆ ವಿಜಯಮಾಡಿದ್ದನೆಂದು ತೋರುತ್ತದೆ. ಆದರೆ ಈಸಾರಿ ಅವನು ಶಾಸನ ಬರೆಸಿದ್ದರಿಂದ ಅವನ ಧರ್ಮಯಾತ್ರೆ ಚರಿತ್ರಾರ್ಹವಾಯಿತು. "ಅಭಿಷಿಕ್ತನಾಗಿ ಇಪ್ಪತ್ತುವರ್ಷಗಳಾದಾಗ ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಬುದ್ಧಶಾಕ್ಯಮುನಿ ಇಲ್ಲಿ ಜನಿಸಿದನೆಂದು ತಾನೇ ಇಲ್ಲಿಗೆ ಬಂದು ಆರಾಧಿಸಿದನು; ಭಗವಾನನು ಇಲ್ಲಿ ಜನಿಸಿದನೆಂದು ಒಂದು 'ಶಿಲಾವಿಕೃತ'ವನ್ನು ಮಾಡಿಸಿದನು; ಶಿಲಾಸ್ತಂಭವನ್ನು ನಿಲ್ಲಿಸಿದನು. ಲುಂಬಿನೀ ಗ್ರಾಮವನ್ನು ಬಲಿಯಿಂದ ಬಿಡಿಸಿದನು. ಅಷ್ಟಭಾಗ ಮಾತ್ರ ಸಾಕೆಂದನು," ಎಂದು ಆ ಶಾಸನ ಹೇಳುತ್ತದೆ.

ಇದಾದ ಮೇಲೆ ಹಲವು ವರ್ಷಗಳ ಸಮಾಚಾರವೇ ನಮಗೆ ಸಿಕ್ಕುವಂತಿಲ್ಲ. "ಅಭಿಷಿಕ್ತನಾಗಿ ಇಪ್ಪತ್ತಾರು ವರ್ಷಗಳಾದಾಗ ಈ ಧರ್ಮ ಲಿಪಿಯನ್ನು

ಬರೆಸಿದನು" ಎಂದು ಸ್ತಂಭಶಾಶನ ೧, ೪, ೫, ೬ ರಲ್ಲಿ ಅಶೋಕನು ಹೇಳಿರುವನು. ಇವುಗಳ ಪೈಕಿ ನಾಲ್ಕನೆಯ ಶಾಸನದಲ್ಲಿ ಅಶೋಕನು ಬಹು ಮುಖ್ಯವಾದ ಒಂದು ಸುಧಾರಣೆಯನ್ನು ಯೋಚಿಸಿ ಕಾರ್ಯರೂಪಕ್ಕೆ ತಂದಿರುವನು. ಆಡಳಿತದ ಕಷ್ಟಸುಖಗಳೂ ಶಾಸನಗಳ ಆಚರಣೆಯಲ್ಲಿ ಒದಗಬಹುದಾದ ತೊಡಕುಗಳೂ ಅವನಿಗೆ ಮನದಟ್ಟಾಗಿ ಈ ಸುಧಾರಣೆ ಆಗಿರಬೇಕೆಂದು ನಾವು ಊಹಿಸಬಹುದು. ಬಹು ಶತಸಹಸ್ರ ಜನದ ಮೇಲೆ ನಿಯಮಿತವಾದ ರಜ್ಜುಕರಿಗೆ ವ್ಯವಹಾರದಲ್ಲೂ ದಂಡದಲ್ಲೂ ಅವನು ಹಿಂದೆ ಸ್ವಾತಂತ್ರ್ಯ ಕೊಟ್ಟಿದ್ದನು. ಆಯಾ ಪ್ರಾಂತಗಳ ಆಚಾರದಂತೆ, ಅಲ್ಲಲ್ಲಿಯ ನಾಗರಿಕತೆಯ ಮಟ್ಟದಂತೆ ಸನ್ನಿವೇಶದ ಹದವರಿತು ಹಿತವಾಗಿ ಮಿತವಾಗಿ ನ್ಯಾಯ ನೆರವೇರಿಸುವುದನ್ನು ರಾಜಧಾನಿಯಲ್ಲಿರುವವರಿಗಿಂತ ಹೆಚ್ಚಾಗಿ ರಜ್ಜುಕರೇ ಬಲ್ಲರೆಂದು ಅಶೋಕನು ಈ ರೀತಿ ಅವರಿಗೆ ಸ್ವಾತಂತ್ರ್ಯವನ್ನು ಕೊಟ್ಟಿರಬೇಕು. "ಅವರು ನಿರ್ಭೀತರಾಗಿ ಶಾಂತ ಮನಸ್ಸಿನಿಂದ ಕರ್ಮಗಳನ್ನು ಮಾಡುವುದಕ್ಕಾಗಿಯೇ ನಾನು ರಜ್ಜುಕರನ್ನು ವ್ಯವಹಾರದಲ್ಲೂ ದಂಡದಲ್ಲೂ ಸ್ವತಂತ್ರರಾಗಿ ಮಾಡಿರುವೆನು." ಆದರೆ, ಇದರಿಂದ ಪ್ರಾಂತಗಳಲ್ಲಿನ ಶಿಸ್ತಿನಲ್ಲಿ ಅನೇಕ ಭೇದಗಳು ತಲೆದೋರಿ ಅವ್ಯವಸ್ಥೆಯಾಗಬಹುದೆಂದು ಹೆದರಿಯೋ, ಅಥವಾ, ಹಾಗೆ ಆದದ್ದನ್ನು ಕಂಡೋ, ಆ ಶಾಸನದಲ್ಲಿ ಅಶೋಕನು "ವ್ಯವಹಾರ ಸಮತೆಯನ್ನೂ ದಂಡ ಸಮತೆಯನ್ನೂ ಇಚ್ಛಿಸತಕ್ಕದ್ದು," ಎಂದು ಆಜ್ಞಾಪಿಸುತ್ತಾನೆ. ಹಾಗೆಯೇ, ೫ ನೆಯ ಶಾಸನ ಕೂಡ ಬಹು ಮುಖ್ಯ ವಾದದ್ದೇ. ಅನೇಕ ಜೀವಿಗಳಿಗೆ ಅಶೋಕನು ಪ್ರಾಣದಾನ ಮಾಡಿದ ವಿಷಯ ಅದರಲ್ಲಿ ಪ್ರಸ್ತಾಪಿತವಾಗಿದೆ. "ಅಭಿಷಿಕ್ತನಾಗಿ ಇಪ್ಪತ್ತಾರು ವರ್ಷಗಳಾದಾಗ ನನ್ನಿಂದ ಈ ಜಾತಿಗಳು ಅವಧ್ಯ ಮಾಡಲಾಯಿತು," ಎಂದು ಹೇಳಿ ಅನೇಕ ಪಕ್ಷಿ ಮೃಗಾದಿಗಳ ಹೆಸರನ್ನು ಕೊಟ್ಟು ಕಡೆಗೆ, ಪ್ರತಿ ಭೋಗಕ್ಕೆ ಬಂದ ಅಥವಾ ಆಹಾರಕ್ಕೊದಗದ ಎಲ್ಲಾ ಚತುಷ್ಪಾದಗಳು ಎಂದು ಒಟ್ಟಾಗಿ ಹೇಳಿಬಿಡುತ್ತಾನೆ. ಇಪ್ಪತ್ತಾರನೆಯ ವರ್ಷದಲ್ಲೇ ಬರೆದ ಇನ್ನೆರಡು ಶಾಸನಗಳೂ (೧, ೬) ಧರ್ಮದ ತತ್ವಗಳಿಗೂ ಆದರ್ಶಗಳಿಗೂ ಸಂಬಂಧಿಸಿದ್ದು ; ಕಾನೂನು ಕಟ್ಟಳೆಗಳಿಂದ ಅವುಗಳನ್ನು ಸಾಧಿಸಲು ಮಾಡಿದ ಪ್ರಯತ್ನಕ್ಕೆ ಸಂಬಂಧಿಸಿದ್ದಲ್ಲ.

ಸ್ತಂಭಶಾಸನ ೭ ನ್ನು ಅಶೋಕನು ತನ್ನ ಆಡಳಿತದ ಇಪ್ಪತ್ತೇಳನೆಯ ವರ್ಷದಲ್ಲಿ ಪ್ರಕಟಿಸಿದನು. ಅವನ ಎಲ್ಲಾ ಶಾಸನಗಳಿಗಿಂತಲೂ ಅದೇ ದೀರ್ಘವಾದದ್ದು. ತನ್ನ ಎಲ್ಲಾ ಉದ್ಯಮಗಳನ್ನೂ ಸಿಂಹಾವಲೋಕನದಿಂದ ವಿಮರ್ಶಿಸಿ ತನ್ನ ಜೀವನಸೂತ್ರವನ್ನೇ ಅಶೋಕನು ಆ ಶಾಸನದಲ್ಲಿ ನಮಗೆ

ಹೇಳಿರುವನು. "ಬಹುಕಾಲದವರೆಗೆ ರಾಜರು ಧರ್ಮವೃದ್ಧಿಯಿಂದ ಜನರನ್ನು ಅಭಿವೃದ್ಧಿಗೊಳಿಸಬೇಕೆಂಬ ಇಚ್ಛೆಯುಳ್ಳವರಾಗಿದ್ದರು. ಆದರೆ ಅದಕ್ಕನುರೂಪವಾದ ಧರ್ಮವೃದ್ಧಿಯನ್ನು ಪಡೆದು ಜನರು ಅಭಿವೃದ್ಧಿಯಾಗಲಿಲ್ಲ" ಎಂದು ಹೇಳುತ್ತಾ. ಇದಕ್ಕೆ ಕಾರಣವೇನೆಂದು ಯೋಚಿಸಿ ಧರ್ಮಶ್ರಾವಣಗಳನ್ನು ಶ್ರವಣಮಾಡಿಸುವುದು, ಧರ್ಮಾನುಶಾಸ್ತಿಗಳನ್ನು ಅನುಶಾಸನ ಮಾಡುವುದು ಎಂಬ ಎರಡು ಉಪಾಯಗಳನ್ನು ತಾನು ಅವಲಂಬಿಸಿದೆನೆಂದು ಸಾರುತ್ತಾನೆ. "ಇದಕ್ಕಾಗಿಯೇ ನನ್ನಿಂದ ಧರ್ಮಸ್ತಂಭಗಳನ್ನು ಮಾಡಿಸಲಾಗಿದೆ; ಧರ್ಮ ಮಹಾಮಾತ್ರರನ್ನು ನಿಯಮಿಸಲಾಗಿದೆ; ಧರ್ಮಲಿಪಿಗಳನ್ನು ಮಾಡಿಸಲಾಗಿದೆ" ಎಂದು ಅಶೋಕನು ಹೇಳುತ್ತಾನೆ. ಕಲಿಂಗಯುದ್ಧ ಮುಗಿದು ತಾನು ಮತ್ತೆ ದಿಗ್ವಿಜಯ ಮಾಡುವುದಿಲ್ಲವೆಂದು ಜನರ ಮುಂದೆ ತಪ್ಪನ್ನೊಪ್ಪಿಕೊಂಡು ಆಗಲೇ ಇಪ್ಪತ್ತು ವರ್ಷಗಳಾಗಿದ್ದುವು. ಅಷ್ಟರವರೆಗೆ ಇಡೀ ಸಾಮ್ರಾಜ್ಯ ಅಂತಃಕಲಹಗಳಿಲ್ಲದೆ ನೆರೆಜನಾಂಗಗಳ ಆಕ್ರಮಣವಿಲ್ಲದೆ ಶಾಂತವಾಗಿದ್ದುದನ್ನು ಕಂಡು ಅಶೋಕನು, "ನಾನು ಸಾಧುವಾದ್ದನ್ನು ಏನೇನು ಮಾಡಿರುವೆನೋ ಅದನ್ನು ಲೋಕ ಅನುಸರಿಸಿದೆ ಮತ್ತು ಅನುಸರಿಸುತ್ತದೆ." ಎಂದು ಸಂತೋಷ ಪಡುತ್ತಾನೆ.

ಇದಾದ ಮೇಲೆ ಅಶೋಕನ ಮಾತುಗಳು ಯಾವುವೂ ನಮಗೆ ಸಿಕ್ಕುವುದೇ ಇಲ್ಲ. ಮತ್ತೆ ನಾವು ಕಟ್ಟುಕಥೆಗಳನ್ನೇ ಆಶ್ರಯಿಸಬೇಕಾಗಿದೆ. ಅವನ ಆಡಳಿತದ ಮೂವತ್ತನೆಯ ವರ್ಷದಲ್ಲಿ ಅಶೋಕನ ಅಗ್ರಮಹಿಷಿಯೂ ಸಂಬುದ್ಧನ ಧರ್ಮದಲ್ಲಿ ಅಚಲವಾದ ಭಕ್ತಿಶ್ರದ್ಧೆಯನ್ನು ಪಡೆದಿದ್ದವಳೂ ಆದ ಅಸಂಧಿಮಿತ್ರಾ ಎಂಬ ರಾಣಿ ತೀರಿಕೊಂಡಳು. ನಾಲ್ಕು ವರ್ಷಗಳನಂತರ ಧರ್ಮಾಶೋಕನು ಮೋಸಗಾತಿಯಾದ ತಿಷ್ಯರಕ್ಷಿತೆಯನ್ನು ಅಗ್ರಮಹಿಷಿಯನ್ನಾಗಿ ಮಾಡಿದನು. ಇವರಲ್ಲದೆ ಅಶೋಕನಿಗೆ ಪದ್ಮಾವತಿ ಎಂಬ ಒಬ್ಬ ರಾಣಿಯೂ ಕಾರುವಾಕೀ ಎಂಬ ಮತ್ತೊಬ್ಬ ರಾಣಿಯೂ ಇದ್ದಂತೆ ತೋರುತ್ತದೆ. ವಿದಿಶಾದೇವಿಯಂತೂ ವಿದಿಶನಗರದಲ್ಲೇ ಇದ್ದು ಬಿಟ್ಟಿದ್ದಳು.

ತಿಷ್ಯರಕ್ಷಿತಳ ದೆಸೆಯಿಂದ ಅಶೋಕನ ಜೀವನ ವ್ಯಸನಪೂರಿತವಾಯಿತೆಂದು ಬೌದ್ಧಗ್ರಂಥಗಳು ಹೇಳುತ್ತವೆ. ಅವಳಿಗೆ ಬುದ್ಧನ ಧರ್ಮದಲ್ಲಿ ನಂಬಿಕೆ ಇರಲಿಲ್ಲ; ಅದರ ಮೇಲೆ ತಡೆಯಲಾರದಷ್ಟು ದ್ವೇಷವೂ ಇತ್ತು. ಸದಾ ಕಾಲದಲ್ಲೂ ಅಶೋಕನು ಪ್ರೀತಿಯಿಂದ ಪೋಷಿಸುತ್ತಿದ್ದ ಬೋಧಿವೃಕ್ಷವನ್ನು ಹಾಳುಮಾಡಲು ಅವಳು ಪ್ರಯತ್ನಿಸಿದಳಂತೆ. ಅವಳು ಇನ್ನೂ ಅನೇಕ ಅನಾರ್ಯ ಕೆಲಸಗಳನ್ನು ಮಾಡಿ ಜನರ ಆಕ್ರೋಶಕ್ಕೂ ಅಶೋಕನ

ಕೋಪಕ್ಕೂ ಪಾತ್ರಳಾದಳು. ಪದ್ಮಾವತಿ ಎಂಬ ರಾಣಿಯಲ್ಲಿ ಅಶೋಕನಿಗೆ ಧರ್ಮವಿವರ್ಧನ ಎಂಬ ಒಬ್ಬ ಮಗನು ಜನಿಸಿದನು. ಅವನ ಮನೋಹರವಾದ ಕಣ್ಣುಗಳಿಗೆ ಮುಗ್ಧರಾಗಿ ಎಲ್ಲರೂ ಅವನನ್ನು ಕುಣಾಲ ಎಂದು ಕರೆಯಲು ಮೊದಲುಮಾಡಿದರಂತೆ. ಹಿಮಾಲಯ ಪ್ರಾಂತದಲ್ಲಿರುವ ಒಂದು ಪಕ್ಷಿಯ ಹೆಸರೇ ಕುಣಾಲ ಎಂಬುದು. "ನೇತ್ರಾನುರಾಗೇನ ಸ ಪಾರ್ಥಿವೇಂದ್ರಃ ಸುತಃ ಕುಣಾಲೇತಿ ತದಾ ಬಭಾಷೆ" ಎಂದು ದಿವ್ಯಾವದಾನದಲ್ಲಿ ಹೇಳಿದೆ. ತಿಷ್ಯರಕ್ಷಿತಳು ಕುಣಾಲನನ್ನು ಮೋಹಿಸಿ ಅವನನ್ನು ಕೆಟ್ಟದಾರಿಗೆಳೆಯಲು ಹವಣಿಸಿದಾಗ ಕುಣಾಲನು ಒಲ್ಲೆನೆಂದನು. ಇದಕ್ಕಾಗಿ ಆಕೆ ಕೋಪಗೊಂಡು ಅಶೋಕನಿಗೆ ಮಂಕುಬೂದಿ ಎರಚಿ ಅವನನ್ನು ಮರುಳುಮಾಡಿ ಕುಣಾಲನ ಕಣ್ಣು ಕೀಳಿಸುವಂತೆ ಅವನಿಂದ ಆಜ್ಞೆಯೊಂದನ್ನು ಹೊರಡಿಸಿದಳು. ತಕ್ಷಶಿಲಾ ನಗರದಲ್ಲಿ ಎದ್ದ ದಂಗೆಯನ್ನಡಗಿಸಲು ತಂದೆಯ ಅಪ್ಪಣೆಯ ಮೇರೆಗೆ ಅಲ್ಲಿಗೆ ಹೋಗಿ, ಅಲ್ಲಿಯ ಪುಂಡರನ್ನಡಗಿಸಿ, ಪೌರಜಾನಪದಗಳಿಂದ ಸುಸ್ವಾಗತವನ್ನು ಪಡೆದಿದ್ದ ಕುಣಾಲನು ತಂದೆಯ ಆಜ್ಞೆಯನ್ನು ಕಾಣುತ್ತಲೇ ಚಂಡಾಲರನ್ನು ಕರಸಿ ತಾನೇ ಕಣ್ಣನ್ನು ಕೀಳಿಸಿಕೊಂಡನಂತೆ. ಆದರೆ ಮಾಂಸಚಕ್ಷುಗಳು ಮಾಯವಾದಾಗ ಕುಣಾಲನಿಗೆ ಮಾಯೆಯೇ ಹರಿದಂತಾಗಿ—ಪ್ರಜ್ಞಾಚಕ್ಷುಗಳು ತೆರೆದುವು. ಕಾಂಚನಮಾಲಾ ಎಂಬ ಧರ್ಮಪತ್ನಿಯೊಡನೆ ಅಂಧಕುಮಾರನು ವೀಣಾವಾದನಮಾಡುತ್ತಾ ತಿರುಪೆಯಿಂದ ಬದುಕನ್ನು ನೂಕುತ್ತಾ ಕಡೆಗೆ ಪಾಟಲೀಪುತ್ರವನ್ನೂ ಪ್ರವೇಶಮಾಡಿದನು. ಅರಮನೆಯ ಬಾಗಿಲಲ್ಲಿ ಅವರಿಬ್ಬರನ್ನೂ ಆಳುಗಳು ತಡೆದರು. ಅವರು ಹಿಂತಿರುಗಿ ಯಾನಶಾಲೆಯಲ್ಲೇ ಮಲಗಿ ಬೆಳಗಿನ ಜಾವದಲ್ಲಿ ತಮ್ಮ ಸುಮಧುರವಾಣಿಯಿಂದ ಗಾನಮಾಡುತ್ತಿದ್ದಾಗ ಅಶೋಕನು ಮನಸೋತು ಅವರನ್ನು ಕರೆಸಿ ಕುಲಗೋತ್ರಗಳನ್ನು ವಿಚಾರಿಸಿದನಂತೆ. ಅವನು ಕುಣಾಲನೇ ಎಂದು ತಿಳಿದಾಗ ಪುತ್ರಶೋಕದಿಂದ ಅಶೋಕನು ಮೂರ್ಛಿತನಾದನು. ಇಂತಹ ಅನಾರ್ಯಕರ್ಮವನ್ನೆಸಗಿದ ಸ್ತ್ರೀಯನ್ನು ವಧೆಮಾಡುವುದೇ ಆರ್ಯಧರ್ಮವೆಂದು ನಿಶ್ಚಯಿಸಿ ತಿಷ್ಯರಕ್ಷಿತಳನ್ನು ಜೀವಸಹಿತ ಕಿಚ್ಚಿಗೆಸೆಯುವಂತೆ ಅಶೋಕನು ಆಜ್ಞಾಪಿಸಿದನಂತೆ. ಭಗವಾನ್ ಬುದ್ಧದೇವನ ಕರುಣೆಯಿಂದ ಕುಣಾಲನಿಗೆ ಮತ್ತೆ ದೃಷ್ಟಿಭಾಗ್ಯ ಲಭಿಸಿತು. ಇದೇ ಆ ಕಥೆ. ಆದರೆ, ಇದರಲ್ಲಿ ನಿಜಾಂಶವೆಷ್ಟಿದೆಯೋ, ಬಲ್ಲವರಾರು?

ಕನ್ನಡ 'ವಡ್ಡಾರಾಧನೆ'ಯಲ್ಲಿಯೂ ಈ ಕಥೆ ಬೇರೊಂದು ರೀತಿಯಲ್ಲಿ ಬಂದಿದೆ. ಅಶೋಕನೊಮ್ಮೆ ಪರಚಕ್ರದ ಮೇಲೆ ದಂಡೆತ್ತಿ ಹೋಗಿದ್ದಾಗ

ತನ್ನ ಮಗ ಕುಣಾಲನಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂದು 'ಕುಮಾರ ಮಧ್ಯಾಪಯೇತ್' ಎಂದು ಮಂತ್ರಿಗೆ ಬರೆದ ಓಲೆಯನ್ನು 'ಕುಮಾರ ಮಂಧಾಪ ಯೇತ್' ಎಂದು ವಿಪರೀತವಾಗಿ ಓದಿ ಆ ಮೇರೆಗೆ ಕುಮಾರನ ಕಣ್ಣುಗಳನ್ನು ಕಿತ್ತರಂತೆ. ಆಗ ಅಶೋಕನು ತುಂಬಾ ವಿಷಾದಪಟ್ಟು ಕುಣಾಲನ ಅರಸಿ ಚಂದ್ರಾನನೆಯೆಂಬವಳಿಗೆ ಮಗ ಹುಟ್ಟಿದಾಗ ಆತನಿಗೆ ಸಂಪ್ರತಿ ಚಂದ್ರ ಗುಪ್ತನೆಂದು ಹೆಸರಿಟ್ಟು ರಾಜ್ಯಾಭಿಷೇಕ ಮಾಡಿ ಪಟ್ಟ ಕಟ್ಟಿದನು ಎಂಬುದು, ಅಲ್ಲಿ ನಿರೂಪಿತವಾಗಿರುವ ಕಥಾಭಾಗ. ಈ ರೀತಿಯ ಕಥೆಗಳು ಸಾಮಾನ್ಯ ವಾಗಿ ಅನೇಕ ದೇಶಗಳ ಹಾಗೂ ಅನೇಕ ರಾಜವಂಶಗಳ ಇತಿಹಾಸಗಳಲ್ಲಿ ಬರುವಂತಹವು.

ಶಾಸನಗಳಲ್ಲಿ ಅಶೋಕನು "ದ್ವಿತೀಯ ದೇವೀ ತೀವಲಮಾತಾ" ಎಂದು ಹೇಳಿರುವುದರಿಂದ, ತೀವಲ ಎಂಬ ಒಬ್ಬ ಮಗನ ಹೆಸರನ್ನು ಮಾತ್ರ ನಾವು ನಿಸ್ಸಂದೇಹವಾಗಿ ತಿಳಿದುಕೊಳ್ಳಬಹುದಾಗಿದೆ. ಇತರ ಮಕ್ಕಳ ಪೈಕಿ ಮಹೇಂದ್ರನ ಹೆಸರನ್ನು ಸಿಂಹಳ ಗ್ರಂಥದಲ್ಲೂ ಕುಣಾಲನ ಹೆಸರನ್ನು ಉತ್ತರ ಬೌದ್ಧ ಗ್ರಂಥಗಳಲ್ಲೂ, ಕಾಶ್ಮೀರದ ರಾಜತರಂಗಿಣಿಯಲ್ಲಿ ಜಲೌಕ ಎಂಬ ಮತ್ತೊಬ್ಬ ಮಗನ ಹೆಸರನ್ನೂ ಹೇಳಿದೆ.

ಬೌದ್ಧ ಸಂಘಕ್ಕೆ ಅಶೋಕನು ನೀಡಿದ ಸೇವೆಯ ಪ್ರತಿಧ್ವನಿಯಂತೆ ಅವನ ದಾನದ ಮಹತ್ವವನ್ನು ವಿವರಿಸುವ ಕಥೆಯೊಂದು ದಿವ್ಯಾವದಾನದಲ್ಲಿ ಸೇರಿ ಕೊಂಡಿದೆ. ಭಗವಾನರ ಶಾಸನಕ್ಕಾಗಿ ನೂರು ಕೋಟಿ ಸುವರ್ಣವನ್ನು ದಾನಮಾಡಬೇಕೆಂದು ಅಶೋಕನು ಸಂಕಲ್ಪಮಾಡಿಕೊಂಡಿದ್ದನಂತೆ. ಅದ ರಂತೆ "ಜಾತೌ ಬೋಧೌ ಧರ್ಮಚಕ್ರೆ ಪರಿನಿರ್ವಾಣೆ ಚ ಸರ್ವತ್ರ ಶತ ಸಹಸ್ರಂ ದತ್ತಂ." ಅಂದರೆ, ಭಗವಾನರು ಜನಿಸಿದ, ಬೋಧಿಜ್ಞಾನವನ್ನು ಪಡೆದ, ಧರ್ಮಚಕ್ರವನ್ನು ಮೊದಲು ನಡೆಸಿದ, ಪರಿನಿರ್ವಾಣ ಹೊಂದಿದ, ಪುಣ್ಯಸ್ಥಳಗಳಲ್ಲಿ ಶತಸಹಸ್ರ ಸುವರ್ಣದಾನಮಾಡಿದ್ದಾಯಿತು. ಆದರೂ ಅಶೋಕನ ಧರ್ಮದಾಹ ಶಮನವಾಗಲಿಲ್ಲ. ಇನ್ನೂ ನಾಲ್ಕು ಲಕ್ಷ ಸುವರ್ಣದ ದಾನ ಉಳಿದಿರುವಾಗಲೇ ಅವನ ಹೆಬ್ಬಯಕೆಗೆ ಅಡ್ಡವಾಗಿ ಅನೇಕ ಆತಂಕ ಗಳು ಮೇಲೇರಿಬಂದುವು. ಕುಣಾಲನ ಮಗ, ಯುವರಾಜ ಸಂಪ್ರತಿ ಹೀಗೆ ದೇಶದ ಕೋಶವನ್ನೆಲ್ಲ ಬರಿದುಮಾಡಿ ಭಿಕ್ಷುಗಳಿಗೆ ಧಾರೆ ಎರೆಯ ಕೂಡದೆಂದನು. ಅಶೋಕನ ಅಪ್ಪಣೆ ಇದ್ದರೂ ಕೂಡ ಭಂಡಾಗಾರದಿಂದ ಸುವರ್ಣವನ್ನು ಹೊರತೆಗೆಯಕೂಡದೆಂದು ಕಟ್ಟುಮಾಡಿದನು. ತನ್ನ ಮನೋ ರಥವನ್ನು ಹೇಗಾದರೂ ನೆರವೇರಿಸಲೇಬೇಕೆಂದಿದ್ದ ಅಶೋಕನು ತಾನು

ಊಟಕ್ಕಾಗಿ ಉಪಯೋಗಿಸುತ್ತಿದ್ದ ಚಿನ್ನದ ತಟ್ಟೆಯನ್ನೇ ದಾನ ಮಾಡಿದನು. ಆಮೇಲೆ, ಬೆಳ್ಳಿ ತಟ್ಟೆಯನ್ನೂ ಭಿಕ್ಷುಗಳಿಗೆ ಕೊಟ್ಟನು. ಕಡೆಗೆ ಲೋಹಪಾತ್ರೆಯನ್ನೂ ಮಣ್ಣಿನ ಕುಡಿಕೆಯನ್ನೂ ಸಹ ಭಿಕ್ಷುಗಳಿಗೆ ದಾನಮಾಡಿ ಕಡುಬಡವನಾದನು. ಬೌದ್ಧ ಸಂಘದ ಪೋಷಕರಲ್ಲಿ ಅಗ್ರಗಣ್ಯನೆನಿಸಿದ್ದ ಅಶೋಕನು ತನ್ನ ಪ್ರತಿಜ್ಞಾಭಂಗದಿಂದ ತುಂಬಾ ಮನನೊಂದನು. ಕಡೆಗೆ ತನ್ನಲ್ಲಿದ್ದ ಅರ್ಧ ನೆಲ್ಲಿಯಕಾಯನ್ನೂ ಕೂಡ ಅವನು ಸಂಘಕ್ಕೆ ಕೊಟ್ಟುಕಳುಹಿಸಿ ಕಣ್ಣೀರುಬಿಟ್ಟನು. ಹತ್ತಿರದಲ್ಲೇ ನಿಂತು ಕೊರಗುತ್ತಿದ್ದ ವೃದ್ಧನಾದ ಅಮಾತ್ಯ ರಾಧಾಗುಪ್ತನನ್ನು ಅಶೋಕನು ಗದ್ಗದಸ್ವರದಿಂದ ಸಂಬೋಧಿಸಿ, ಒಂದು ದಿನ "ಈಗ ಈ ಪೃಥಿವಿಗೆ ಒಡೆಯನು ಯಾರು?" ಎಂದು ಕೇಳಿದನಂತೆ. ತನ್ನದು ಎಂದು ಹೇಳಿ ಮತ್ತೊಬ್ಬನಿಗೆ ದಾನಮಾಡಲು ಕೈಯಲ್ಲಿ ಒಂದು ಕವಡೆ ಕೂಡ ಇಲ್ಲದ ಅಶೋಕನನ್ನು ವಂದಿಸಿ, ರಾಧಾಗುಪ್ತನು, "ಮಹಾಸ್ವಾಮಿಯಲ್ಲದೆ ಮತ್ತಾರು? ತಾವೇ ಈ ಪೃಥಿವಿಗೆ ಒಡೆಯ!" ಎಂದನಂತೆ. ಅದನ್ನು ಕೇಳಿ ಅಶೋಕನು ಹಿಗ್ಗಿ ಹಿರಿದಾಗಿ ಹಾಸಿಗೆಯಿಂದೆದ್ದು,

ಇಮಾಂ ಸಮುದ್ರೋತ್ತಮ ನೀಲಕಂಚುಕಾಂ
ಅನೇಕ ರತ್ನಾಕರ ಭೂಷಿತಾನನಾಂ
ದದಾಮ್ಯಹಂ ಶಾತಧರಾಂ ವಸುಂಧರಾಂ
ಸಂಘಾಯ ತಸ್ಮಿನ್ನುಪ ಭುಜ್ಯತೆ ಫಲಂ

ಎಂದು ಹೇಳಿ ತನ್ನ ಸಾಮ್ರಾಜ್ಯವನ್ನೆಲ್ಲ ಸಂಘಕ್ಕೆ ದಾನಮಾಡಿ ಪತ್ರಬರೆದು ಮುದ್ರೆ ಒತ್ತಿದನು. ಕೂಡಲೇ ಕಾಲವಶನಾದನು. ಅನಂತರ ಸಂಪ್ರತಿ ತನ್ನ ಅಪರಾಧಕ್ಕಾಗಿ ಪರಿತಪಿಸಿ ನಾಲ್ಕು ಕೋಟಿ ಸುವರ್ಣವನ್ನು ತಾನೇ ತೆತ್ತು ಸಾಮ್ರಾಜ್ಯವನ್ನು ಹಿಂದಕ್ಕೆ ತೆಗೆದುಕೊಂಡನಂತೆ.

ಈ ಕಥೆಯನ್ನು ಬೌದ್ಧಪೌರಾಣಿಕರು ಯಾವ ಉದ್ದೇಶಕ್ಕಾಗಿ ರಚಿಸಿದರು ಎಂದು ನಿಶ್ಚಯಿಸುವುದು ಸುಲಭ! ಅಶೋಕನ ದಾನಬುದ್ಧಿಯನ್ನು ಹೊಗಳುವುದಕ್ಕೆ ಎಂಬುದು ಮೇಲುಮೇಲಕ್ಕೆ ಕಾಣಬರುವ ಉದ್ದೇಶ. ಸಂಪ್ರತಿ ಜೈನಧರ್ಮಕ್ಕೆ ತಲೆಬಾಗಿದ್ದರಿಂದ, ಅಶೋಕನು ಬೌದ್ಧಸಂಘಕ್ಕೆ ಅವಿಚ್ಛಿನ್ನವಾಗಿ ನೀಡಿದ ಪ್ರೋತ್ಸಾಹಕ್ಕೆ ಬರಬರುತ್ತಾ ಅವನು ಅಡ್ಡಿ ಆತಂಕಗಳನ್ನು ತಂದೊಡ್ಡಿದನೆಂದು ಹೊರಗೆಡಹುವುದೇ ಉದ್ದೇಶವಾಗಿರಬಹುದು. "ಶ್ರೇಯಾಂಸಿ ಬಹು ವಿಘ್ನಾನಿ" ಎಂಬ ನೀತಿಯನ್ನು ತಿಳಿಸುವುದಕ್ಕಾಗಿಯೂ ಇಂತಹ ಕಥೆಗಳು ಹುಟ್ಟುವುದುಂಟು. ಇದರಿಂದ, ಅಶೋಕನು

ಮುದಿತನದಲ್ಲಿ ಅಕ್ಬರನಂತೆ ಮಕ್ಕಳ ಮತ್ತು ಮುಮ್ಮಕ್ಕಳ ವಿರೋಧಕ್ಕೆ ಒಳಗಾಗಿ ತಳಮಳಿಸಿದನೆಂದು ಮಾತ್ರ ನಾವು ಊಹಿಸಬಹುದಾಗಿದೆ.

ಕಡೆಗೆ, ಸುಮಾರು ೪೦ ವರ್ಷಗಳ ಕಾಲ ಭಾರತವರ್ಷಕ್ಕೆ ಸುಖಶಾಂತಿಗಳನ್ನು ನೀಡಿ, ತನ್ನ ಅಂತರಂಗವನ್ನು ತೊಳೆದು ಬೆಳಗಿಸಿದ ಮಹೋತ್ಸಾಹವನ್ನೂ ಪರಾಕ್ರಮವನ್ನೂ ತನ್ನ ಪ್ರಜೆಗಳಲ್ಲೂ ಹರಡಿ, ಹಿಂದಿನ ರಾಜರು ಕಂಡ ಕನಸುಗಳನ್ನೂ ಕಣ್ಣಮುಂದೆ ಕಟ್ಟಿದ್ದ ಆದರ್ಶಗಳನ್ನೂ ನನಸಾಗಿಸಿ ಕಾರ್ಯರೂಪಕ್ಕೆ ತಂದು, ನೆರೆಯ ಜನಸಮುದಾಯಗಳನ್ನೂ ಶತಮಾನಗಳ ಅನಂತರ ಬಂದಿರುವ ನಮ್ಮನ್ನೂ ಧರ್ಮಮಾರ್ಗದಲ್ಲಿ ನಡೆಯುವಂತೆ ಎಚ್ಚರಗೊಳಿಸಿ ಅಶೋಕನು ತನ್ನ ಎಪ್ಪತ್ತೆರಡನೆಯ ವಯಸ್ಸಿನಲ್ಲಿ ಕೀರ್ತಿಶರೀರವನ್ನು ಪಡೆದನು. ಮೌರ್ಯವಂಶದ ಮೊದಲಿನ ಮೂವರು ಅರಸರಾದ ಚಂದ್ರಗುಪ್ತನೂ ಬಿಂದುಸಾರನೂ ಅಶೋಕನೂ ಭಾರತವರ್ಷದ ವಿವಿಧ ಜನಾಂಗಗಳೂ ವಿವಿಧ ಧರ್ಮೀಯರೂ ಒಟ್ಟಾಗಿ ಬಾಳಿ ಬದುಕಿ ದೇಶದಲ್ಲಿ ಸುಖಶಾಂತಿಗಳು ನೆಲಸುವಂತೆ ದಕ್ಷತೆಯಿಂದಲೂ ಪರಾಕ್ರಮದಿಂದಲೂ ದುಡಿದರು. ಅಲೆಕ್ಸಾಂಡರನ ಆಡಳಿತವನ್ನು ಮುರಿದು ಯವನರನ್ನೋಡಿಸಿ ಸೆಲ್ಯೂಕಸ್ಸನ್ನು ಹಿಂದಕ್ಕೆ ಅಟ್ಟಿದರು. ದಕ್ಷಿಣದ ಚೇರ ಚೋಳ ಪಾಂಡ್ಯ ದೇಶಗಳಲ್ಲೂ ಕೂಡ ತಮ್ಮ ಪ್ರಭಾವವನ್ನು ಬೀರುತ್ತ ಆಸೇತ:ಹಿಮಾಚಲ ಒಂದು ಧಾರ್ಮಿಕ ಕ್ರಾಂತಿಯನ್ನು ಎಬ್ಬಿಸಿ ಭಾರತದಲ್ಲಿ ನವಚೈತನ್ಯವನ್ನುಂಟುಮಾಡಿದರು.

ಆದರೆ ಅಶೋಕನ ಕಾಲಾನಂತರ ಭಾರತವರ್ಷ ಮತ್ತೆ ಅಂತಃಕಲಹಗಳಿಗೂ ಆಕ್ರಮಣಗಳಿಗೂ ತುತ್ತಾಗಿ ಆ ಭಾಗ್ಯವನ್ನು ಕಳೆದುಕೊಂಡಿತು. ಕಾಶ್ಮೀರ ಪಂಜಾಬ್ ಮಾಳವ ಮಗಧ ಮುಂತಾದ ಪ್ರಾಚೀನ ಜನಪದಗಳು ತಮ್ಮ ತಮ್ಮ ದಾರಿಯನ್ನು ಹಿಡಿದು ದೇಶದ ಒಟ್ಟು ಹಿತವನ್ನೇ ಮರೆತವು. ಅಶೋಕನ ಮಕ್ಕಳಲ್ಲಿ 'ಕಾರುವಾಕೀ' ರಾಣಿಯ ಮಗನಾದ ತೀವಲನು ಅವನ ಅನಂತರ ಸಿಂಹಾಸನಕ್ಕೆ ಬರಲೇ ಇಲ್ಲ. ಬಹುಶಃ ಅವನು ತಂದೆಯ ಕಾಲದಲ್ಲೇ ತೀರಿಕೊಂಡಿರಬೇಕೆಂದು ತೋರುತ್ತದೆ. ಮತ್ತೊಬ್ಬ ಮಗನು ಬೌದ್ಧ ಭಿಕ್ಷುವಾಗಿ ಸಂಸಾರವನ್ನೇ ತೊರೆದುಬಿಟ್ಟಿದ್ದನು. ವಾಯುಪುರಾಣದಲ್ಲಿ ಕೊಟ್ಟಿರುವ ವಂಶಾವಳಿಯಂತೆ ಅಶೋಕನ ಅನಂತರ ಎಂಟು ವರ್ಷಗಳ ಕಾಲ 'ಕುಣಾಲ' ರಾಜ್ಯವಾಳಿದನಂತೆ. ಆದರೆ, ಜೈನಗ್ರಂಥಗಳಲ್ಲಿ ಮಾತ್ರ ಆತನ ಮೊಮ್ಮಗ ಸಂಪ್ರತಿಯೇ ಅಶೋಕನ ಅನಂತರ ಸಿಂಹಾಸನಾರೋಹಣ ಮಾಡಿದ್ದು ಎಂದು ಹೇಳಿದೆ. ಅಲ್ಲದೆ, ಸಂಪ್ರತಿಯೂ ಕೂಡ ಅಶೋಕನಂತೆಯೇ ಜೈನಧರ್ಮಕ್ಕೆ ತುಂಬಾ ಬೆಂಬಲವಿತ್ತನೆಂದೂ ಹೇಳಿದೆ. ಬಹುಶಃ, ಕುಣಾಲನು ರಾಜನಾಗಿ

ದ್ದರೂ ಕೂಡ ಆತನ ಮಗ ಸಂಪ್ರತಿ ತಂದೆಯ ಅಧಿಕಾರಸರ್ವಸ್ವವನ್ನೂ ವಹಿಸಿಕೊಂಡು ಹಲವು ವರ್ಷಗಳವರೆಗೆ ರಾಜ್ಯವಾಳಿದನೆಂದು ತೋರುತ್ತದೆ.

ಆದರೆ, ಸಂಪ್ರತಿಯೂ ಅವನ ಅನಂತರದ ಚಕ್ರವರ್ತಿಗಳೂ ಅಶೋಕನ ಅಖಂಡ ಸಾಮ್ರಾಜ್ಯವನ್ನು ಆಳಲಿಲ್ಲ. ಅಶೋಕನ ಮರಣವಾರ್ತೆ ತಲಪಿದ ಕೂಡಲೇ ಕಾಶ್ಮೀರದಲ್ಲಿ ಜಲೌಕ ಎಂಬ ಅವನ ಮಗನು ಒಂದು ಸ್ವತಂತ್ರ ರಾಷ್ಟ್ರವನ್ನು ಸ್ಥಾಪಿಸಿದನೆಂದೂ, ಅಲ್ಲಿಂದ ಮೈದಾನಪ್ರದೇಶಕ್ಕೆ ದಂಡೆತ್ತಿ ಬಂದು ಕನ್ಯಾಕುಬ್ಜದ ವರೆಗೂ ಧಾಳಿ ಎಬ್ಬಿಸಿದನೆಂದೂ ರಾಜತರಂಗಿಣಿಯಲ್ಲಿ ಹೇಳಿದೆ. ವಾಯುವ್ಯಪ್ರಾಂತದ ಗಾಂಧಾರದಲ್ಲಿ ಅಶೋಕನು ಕಾಲವಾಗಿ ೨೫ ವರ್ಷಗಳು ಆಗುವುದರೊಳಗೆ ಸುಭಾಗಸೇನ ಎಂಬ ಒಬ್ಬ ಸ್ವತಂತ್ರ ರಾಜನಿದ್ದನೆಂದು ಯವನರು ತಮ್ಮ ಚರಿತ್ರೆಗಳಲ್ಲಿ ಬರೆದಿದಾರೆ. ರಾಜಧಾನಿಯಿಂದ ಗಾಂಧಾರ ಬಹು ದೂರದಲ್ಲಿತ್ತು. ಬಿಂದುಸಾರನ ಆಳಿಕೆಯಲ್ಲೂ ಕೂಡ ಅಲ್ಲಿಯ ಪ್ರಜೆಗಳು ಆಗಾಗ ಕ್ರೋಧಗೊಂಡು ದಂಗೆ ಏಳುತ್ತಿದ್ದರು. ರಾಜಧಾನಿಯಿಂದ ಬಹು ದೂರದಲ್ಲಿರುವ ಪ್ರಾಂತಗಳ ಅಧಿಕಾರಿಗಳು ರಾಜಾಜ್ಞೆಯನ್ನು ಚೆನ್ನಾಗಿ ತಿಳಿದು ಅದರಂತೆ ನಡೆಯುತ್ತಿರಲಿಲ್ಲವೆಂದು ಅಶೋಕನ ಶಾಸನಗಳಿಂದಲೇ ಗೊತ್ತಾಗುತ್ತದೆ. "ಈ ನನ್ನ ಬಯಕೆ ಎಷ್ಟುದೂರ ಹೋಗುತ್ತದೆ ಎಂದು ನೀವು ತಿಳಿದಿಲ್ಲ. ಒಬ್ಬೊಬ್ಬರು ತಿಳಿದಿರಬಹುದು. ಆದರೆ ಅವರೂ ಕೂಡ ಕೊಂಚವನ್ನು ಮಾತ್ರ ತಿಳಿದುಕೊಂಡಿರುವರು. ಎಲ್ಲವನ್ನೂ ತಿಳಿದಿಲ್ಲ" ಎಂದು ಅಶೋಕನು ಹೇಳುತ್ತಾನೆ. ಅಲ್ಲದೆ, ತನ್ನ ಅನುಶಾಸ್ತಿಯಂತೆ ಅಧಿಕಾರಿಗಳು ನಡೆಯುವರೋ ಇಲ್ಲವೋ ಎಂದು ಪತ್ತೆ ಹಚ್ಚಿ ಅವರನ್ನು ಶಿಕ್ಷಿಸಲು ಮೂರುವರ್ಷಕ್ಕೊಮ್ಮೆ ಮಹಾಮಾತ್ರರನ್ನು ಕಳುಹಿಸುತ್ತೇನೆ, ಎಂದೂ ಹೇಳಿರುವನು. ಕಳಿಂಗಕ್ಕೂ ಉಜ್ಜಯಿನಿಯಿಂದಲೂ ತಕ್ಷಶಿಲೆಯಿಂದಲೂ ಹೀಗೆಯೇ ಮೇಲ್ವಿಚಾರಕರು ಹೊರಡುವರೆಂದು ಅದೇ ಶಾಸನದಲ್ಲೇ ಪ್ರಸ್ತಾಪಿಸಿದೆ. ಅಂದರೆ, ಆ ಪ್ರಾಂತಗಳಲ್ಲೂ ಅಧಿಕಾರಿಗಳ ಮದವೂ ಪ್ರಜೆಗಳ ಅಸಮಾಧಾನವೂ ಅಲ್ಪಸ್ವಲ್ಪ ತಲೆ ಎತ್ತಿರಬೇಕೆಂದು ತೋರುತ್ತದೆ. ಹೀಗೆ ಸಾಮ್ರಾಜ್ಯದಲ್ಲಿ ಒಡಕು ಬಿರುಕುಗಳು ಹುಟ್ಟಿಕೊಂಡುವು. ಸಂಪ್ರತಿಯ ಆಳ್ವಿಕೆಗೆ ಒಳಪಟ್ಟಿದ್ದು ಕೇವಲ ಉಜ್ಜಯಿನಿ ಪ್ರಾಂತ ಮಾತ್ರ. ಅಶೋಕನ ಅಹಿಂಸಾ ತತ್ತ್ವದಿಂದಾಗಲಿ, ಬೌದ್ಧಧರ್ಮಾಭಿಲಾಷೆಯಿಂದಾಗಲಿ ಇಂತಹ ಪರಿಸ್ಥಿತಿ ಉತ್ತಮಗೊಳ್ಳುವಂತಿರಲಿಲ್ಲ.

ಸಂಪ್ರತಿ ಕಾಲವಾದ ಮೇಲೆ, ಸಿಂಹಾಸನವನ್ನೇರಿದ ಶಾಲಿಶುಕನು ರಾಷ್ಟ್ರವನ್ನು ಘೋರವಾಗಿ ಮರ್ದಿಸಿದನೆಂದೂ, ಧರ್ಮವನ್ನು ಸಾರುತ್ತಾ

ಅಧರ್ಮವನ್ನೇ ನಡೆಸಿದನೆಂದೂ ಪುರಾಣಗಳಲ್ಲಿ ಹೇಳಿದೆ. ಅಷ್ಟರೊಳಗೆ, ಮೌರ್ಯಸಾಮ್ರಾಜ್ಯವು ಕಾಶ್ಮೀರ ಗಾಂಧಾರ ಉಜ್ಜಯಿನಿ ದಕ್ಷಿಣಾಪಥ ಮಗಧ ಎಂಬ ನಾಲ್ಕಾರು ಖಂಡಗಳಾಗಿ ಒಡೆದುಹೋಗಿತ್ತು. ಆಂಧ್ರರು ದಕ್ಷಿಣಾಪಥವನ್ನು ಆಳ ಹತ್ತಿದ್ದರು. ಮಗಧರಾಜನಾಗಿ ಉಳಿದ ಕಟ್ಟಕಡೆಯ ಮೌರ್ಯ ಬೃಹದ್ರಥನ ಮೇಲೆ ಅವನ ಕ್ರೂರತರವಾದ ಆಡಳಿತದಿಂದ ಇಡೀ ದೇಶವೇ ಕೆರಳಿ ಹೆಡೆ ಎತ್ತಿತು. ಕ್ರಾಂತಿಕಾಲದಲ್ಲಿ ರಾಜನನ್ನು ಆತನ ದಂಡ ನಾಯಕನಾಗಿದ್ದ ಪುಷ್ಯಮಿತ್ರ ಶುಂಗನು ಜನನಾಯಕನಾಗಿ ನಿಂತು ಕೊಂದು ಶುಂಗರಾಜವಂಶವನ್ನು ಸ್ಥಾಪಿಸಿದನು. ಮೌರ್ಯವಂಶಕ್ಕೆ ಸೇರಿದ ಉಜ್ಜ ಯಿನಿಯಿಂದ ಸಂಪ್ರತಿಯ ಸಂತತಿಯನ್ನು ಓಡಿಸಿ ಅಲ್ಲಿ ತನ್ನ ಮಗ ಅಗ್ನಿಮಿತ್ರ ನನ್ನು ಉಪರಾಜನಾಗಿ ನಿಯಮಿಸಿದನು. ತಂದೆ ಮಗ ಇಬ್ಬರೂ ಎದೆಕೊಟ್ಟು ಕಳಿಂಗರನ್ನೂ ವಿದರ್ಭರಾಷ್ಟ್ರದವರನ್ನೂ ವಾಯವ್ಯದ ಯವನರನ್ನೂ ತಡೆಕಟ್ಟಿ, ಉತ್ತರಾಪಥದ ಬಹುಭಾಗದಲ್ಲಿ ಶಾಂತಿಯನ್ನು ಮತ್ತೆ ನೆಲೆಗೊಳಿಸಿ ದರು. 'ಯಜ್ಞಗಳನ್ನು ಮಾಡಕೂಡದು, ಪ್ರಾಣಿಗಳನ್ನು ಕೊಲ್ಲಕೂಡದು' ಎಂದು ಮುಂತಾಗಿ ಸಾರಿದ ಅಶೋಕ ಸಂಪ್ರತಿ ಇವರುಗಳ ಅಭಿಮತಕ್ಕೆ ವಿರುದ್ಧವಾಗಿ, ಹೊಸ ಸಾಮ್ರಾಜ್ಯದ ಸ್ಥಾಪನೆಯ ಪೀಠಿಕೆಯಂತೆ ಪುಷ್ಯ ಮಿತ್ರನು ಭೇರೀಘೋಷವನ್ನು ಮತ್ತೆ ಮೊಳಗಿಸುತ್ತಾ, ಅಶ್ವಮೇಧಯಾಗ ಮಾಡಿದನು.

# ೪. ಅಶೋಕನ ಧರ್ಮ

ತನ್ನ ಸಾಮ್ರಾಜ್ಯದ ಸಮಸ್ತ ಪ್ರಜೆಗಳೂ ಸುಖಶಾಂತಿಯಿಂದ ಬಾಳ ಬೇಕೆಂಬುದೇ ಅಶೋಕನ ಹೆಬ್ಬಯಕೆಯಾಗಿತ್ತು. ಇಹಲೋಕದಲ್ಲಿ ಸುಖವನ್ನೂ ಪರದಲ್ಲಿ ಮೋಕ್ಷವನ್ನೂ ಕೊಡಲು ಸಾಧಕವಾಗುವುದೇ ಧರ್ಮ. ಆದ್ದರಿಂದ ಪ್ರಜೆಗಳ ನಿಜವಾದ ಯೋಗಕ್ಷೇಮಕ್ಕೆ ಬೇಕಾದದ್ದು ಧರ್ಮಸಂಸ್ಥಾಪನೆ, ಧರ್ಮಪರಿಪಾಲನೆ, ಧರ್ಮಬೋಧೆ ಎಂಬುದನ್ನು ಭಾರತೀಯ ರಾಜತಂತ್ರಜ್ಞ ರೆಲ್ಲರೂ ತಿಳಿದಿದ್ದರು. ಸಮಾಜದ ಸುಸ್ಥಿತಿಗೂ ಶಾಂತಿಗೂ ವರ್ಣಧರ್ಮ ಅತ್ಯವಶ್ಯಕವೆಂದೂ ಮೇಲು ಕೀಳೆಂಬ ದ್ವೇಷಾಸೂಯೆಗಳನ್ನು ತೊರೆದು ಎಲ್ಲ ವರ್ಣಗಳೂ ಪರಸ್ಪರಾವಲಂಬಿಗಳಾಗಿ ದೇಹದ ಅಂಗಾಂಗಗಳಂತೆ ಒಟ್ಟುಗೂಡಿ ಬದುಕಬೇಕೆಂದೂ ಧರ್ಮಶಾಸ್ತ್ರಗಳು ಸಾರಿದವು. ಆಶ್ರಮಗಳಿಗೆ ಪ್ರಾಧಾನ್ಯವನ್ನು ಕೊಟ್ಟದ್ದರಿಂದ ಪ್ರತಿಯೊಬ್ಬರೂ ಜನನದಿಂದ ಮರಣದ ವರೆಗೆ ಅನೇಕ ವಿಧದ ಸಂಸ್ಕಾರಗಳಿಂದ ಪುಟಗೊಂಡು ಅರ್ಥಕಾಮಗಳನ್ನು ಧರ್ಮದೃಷ್ಟಿಯಿಂದ ನೆರವೇರಿಸಿ ಮೋಕ್ಷವನ್ನು ಸಾಧಿಸಲು ಅನುಕೂಲ ವಾಯಿತು. ಈ ವಿಧದ ಜೀವನಪಥದಲ್ಲಿ ನಿಶ್ಚಲವಾದ ನಂಬಿಕೆಯಿದ್ದ ಪ್ರಜಾ ಸಮೂಹ ಒಂದುಕಡೆ, ಅದೇ ಆದರ್ಶವನ್ನು ಕಣ್ಣಲ್ಲಿ ನಿಲ್ಲಿಸಿಕೊಂಡಿದ್ದ ರಾಜನೊಂದುಕಡೆ, ಹೀಗೆ ಸೇರಿದಾಗ ಹಿಂದೂಸ್ಥಾನದಲ್ಲಿ ಧರ್ಮ ವಿಜಯ ವಾದದ್ದರಲ್ಲಿ ಆಶ್ಚರ್ಯವೇನು?

ಅಶೋಕನ ಕಾಲದಲ್ಲಿ ಮತಸಂಬಂಧವಾದ ಅಂತಃಕಲಹಗಳಿರಲಿಲ್ಲವೆಂದಲ್ಲ. ಗೌತಮಬುದ್ಧನ ಕಾಲದಿಂದಲೂ ಅವನ ಧರ್ಮಕ್ಕೆ ಅಡ್ಡಿ ಆತಂಕಗಳನ್ನು ತಂದೊಡ್ಡುತ್ತಿದ್ದ ಆಜೀವಿಕ ನಿರ್ಗ್ರಂಥ ಮುಂಡಶ್ರಾವಕ ಜಟಿಲಕ ಪರಿ ವ್ರಾಜಕ ಮಾಗಂದಿಕ ತ್ರಿದಂಡಿಕ ಅನಿರುದ್ಧಕ ಗೋತಮಕ ದೇವಧರ್ಮಿಕ ಎಂಬ ಗುಂಪಿನವರನ್ನು ಬೌದ್ಧ ಗ್ರಂಥಗಳಲ್ಲಿ ಅನೇಕವಾಗಿ ತೆಗಳಿದ್ದಾರೆ. ಆಜೀವಿ ಕರ ಮೂಲಗುರುವಾದ ಗೋಶಾಲನು ಮೊದಲು ಭಗವಾನ್ ಮಹಾವೀರನ ಶಿಷ್ಯ ಮಂಡಲಿಗೆ ಸೇರಿದ್ದು ಅನಂತರ ತನ್ನದೇ ಒಂದು ಸ್ವತಂತ್ರ ಪಂಥವನ್ನು ರಚಿಸಿದ್ದರಿಂದ ಆಗಿನ ಜೈನರು ಅವನನ್ನು ಬಹಳವಾಗಿ ದೂಷಿಸಲು ಎಡೆ ಉಂಟಾ ಯಿತು. ಗೋಶಾಲನೂ ಅವನ ಅನುಯಾಯಿಗಳೂ ಸಂನ್ಯಾಸಿಗಳಾದದ್ದು, ಮೋಕ್ಷ ಸಾಧನೆಗೆ ವೈರಾಗ್ಯ ಸಹಾಯಕ, ಅತ್ಯಗತ್ಯ, ಎಂಬ ನಂಬಿಕೆಯಿಂದಲ್ಲ, ಉಪಜೀವನ ನಡೆಸಲು ತಿರುಪೆ ಬೇಡುವುದು ಸುಲಭಮಾರ್ಗ ಎಂದು ಮನ

ಗಂಡದ್ದರಿಂದ—ಎಂದುಮುಂತಾಗಿ ಅವರು ಸಾರಿದರು. ಮಹಾವೀರನ ಶಿಷ್ಯರಿಗೆ ಆಧ್ಯಾತ್ಮಿಕ ವಿಷಯಗಳಲ್ಲಿ ತಿಳಿವಳಿಕೆ ಸಾಲದೆಂದೂ ಒಂಟಿಯೊಂಟಿಯಾಗಿ ತಿರುಗುವುದಕ್ಕೆ ಅವರಿಗೆ ಹೆದರಿಕೆಯಾದ್ದರಿಂದ ಅವರು ಗುಂಪುಕಟ್ಟಿಕೊಂಡು ಅಲೆಯುವರೆಂದೂ ಆಜೀವಿಕರು ಕೆಸರೆಸೆದರು. ಸಾಮಾನ್ಯವಾಗಿ ಬೌದ್ಧ ಗ್ರಂಥಗಳಲ್ಲೆಲ್ಲ ಆಜೀವಿಕರ ದೂಷಣೆ ಇರುತ್ತದೆ. ಮಹಾವೀರನನ್ನೂ ಗೋಶಾಲನನ್ನೂ ಕಂಡು ಕೇಳಿದ ಮೇಲೂ ಕೂಡ ಅಜಾತಶತ್ರುಮಹಾರಾಜನು ಆತ್ಮ ತೃಪ್ತಿಗಾಗಿ ಗೌತಮಬುದ್ಧನಲ್ಲಿಗೆ ಬರಬೇಕಾಯಿತೆಂದು ಅವು ಹೆಮ್ಮೆ ಪಡುತ್ತವೆ. ಶ್ರಾವಸ್ತಿಯ ಸಮೀಪದ ಒಂದು ವನದಲ್ಲಿ ಆಜೀವಿಕರು ನಾನಾಬಗೆಯ ಕಾಯಕ್ಲೇಶಗಳನ್ನನುಭವಿಸುತ್ತಾ, ಹಿಮ್ಮಡಿಯ ಮೇಲೆ ಕುಳಿತು, ಬಾವಲಿಗಳಂತೆ ನೇತಾಡಿ, ಮುಳ್ಳಿನ ಮೇಲೆ ಮಲಗಿ, ಪಂಚಾಗ್ನಿ ಮಧ್ಯದಲ್ಲಿ ಬೆಂದು, ಬಳಲುವುದನ್ನು ಕಂಡು ಯಾರೋ ಒಬ್ಬ ಭಿಕ್ಷು ಗೌತಮಬುದ್ಧನ ಬಳಿಗೆ ಬಂದು, "ಭಗವನ್ ! ಈ ರೀತಿಯ ತಪಸ್ಸಿನಿಂದ ಏನಾದರೂ ಫಲವುಂಟೇ?" ಎಂದು ಕೇಳಿದುದಕ್ಕೆ, ಬುದ್ಧನು, "ಏನೂ ಫಲವಿಲ್ಲ" ಎಂದುತ್ತರ ಕೊಟ್ಟನಂತೆ. ಆಜೀವಿಕರಲ್ಲೇ ಬ್ರಾಹ್ಮಣಮತಕ್ಕೆ ಸೇರಿದವರು ಹಲವರು, ಸೇರದವರು ಹಲವರು ಹೀಗೆ ಎರಡು ಪಂಗಡಗಳಿದ್ದುವೆಂದು ಭಂಡಾರ್ಕರವರು ಹೇಳುತ್ತಾರೆ[1]. ಆದ್ದರಿಂದ ಅಶೋಕನ ಕಾಲದಲ್ಲೂ ಮತದ್ವೇಷಗಳು ಹೊಗೆಯಾಡುತ್ತಿದ್ದಿರಬೇಕೆಂದು ನಾವು ಊಹಿಸಬಹುದಾಗಿದೆ. ಬೌದ್ಧಸಂಘಕ್ಕೂ ಬ್ರಾಹ್ಮಣರಿಗೂ ಆಜೀವಿಕರಿಗೂ ನಿರ್ಗ್ರಂಥರಿಗೂ ನಡುವೆ ವೈಮನಸ್ಯಗಳು ಮೊಳೆತು ವಿಷವೃಕ್ಷಗಳಾಗದಂತೆ ಸದಾ ಜಾಗರೂಕತೆಯಿಂದ ಧರ್ಮಮಹಾಮಾತ್ರರು ನೋಡಿಕೊಳ್ಳುತ್ತಿದ್ದರು. ಆಯಾ ಪಂಗಡದವರ ಆಸ್ತಿಪಾಸ್ತಿಗಳನ್ನೂ ಹಕ್ಕು ಬಾಧ್ಯತೆಗಳನ್ನೂ ಅವರ ವಿಹಾರಸ್ತೂಪ ದೇವಸ್ಥಾನ ಮೊದಲಾದವುಗಳ ಆಡಳಿತವನ್ನೂ ಅವರು ನಿಷ್ಪಕ್ಷಪಾತದಿಂದಲೂ ವಿಚಕ್ಷಣೆಯಿಂದಲೂ ಪರಿಪಾಲಿಸಿದರು.

ಅಲೆಕ್ಸಾಂಡರನ ಸಂಗಡ ಬಂದ ಯವನರ ವಿವರಣೆಯಂತೆ ಆಗ ಹಿಂದೂಸ್ಥಾನದಲ್ಲಿ ಪ್ರಾಂನ್ಯೆ ಎಂಬ ಯೋಗಿಗಳಿಗೂ ಬ್ರಾಂನ್ಯೆ ಎಂಬವರಿಗೂ ತುಂಬಾ ದ್ವೇಷವಿತ್ತೆಂದು ಗೊತ್ತಾಗುತ್ತದೆ. "ಆಯುರ್ವೇದವನ್ನೂ ಜ್ಯೋತಿಷವನ್ನೂ ವ್ಯಾಸಂಗಮಾಡುವ ಬ್ರಾಹ್ಮಣರನ್ನು ಪ್ರಾಂನ್ಯೆ (ಪ್ರಾಮಾಣಿಕರು) ಮೂಢರೆಂದೂ ಸುಳ್ಳರೆಂದೂ ಹೀಯಾಳಿಸುವರು. ಪ್ರಾಮಾಣಿಕರಲ್ಲಿ ನಾಗರಿಕರು ಅನಾಗರಿಕರು ಎಂಬ ಎರಡು ಪಂಗಡದವರುಂಟು. ಪರ್ವತ ಪ್ರಾಂತಗಳಲ್ಲಿ ವಾಸಮಾಡುವ ಪ್ರಾಮಾಣಿಕರು ಕೃಷ್ಣಾಜಿನವನ್ನುಟ್ಟು

[1] *Asoka*. p. 170-2.

ತಾಯಿತೆ ಯಂತ್ರಗಳ ಸಹಾಯದಿಂದ ರೋಗಗಳನ್ನು ವಾಸಿಮಾಡುತ್ತೇವೆಂದು ಸಾರುತ್ತಾ ಅದಕ್ಕಾಗಿ ಸಣ್ಣ ಚೀಲಗಳಲ್ಲಿ ನಾರುಬೇರುಗಳನ್ನು ತುಂಬಿಕೊಂಡು ತಿರುಗುವರು. ನಗರದ ಪ್ರಾಮಾಣಿಕರು ತೆಳ್ಳನೆಯ ಬಿಳಿ ಬಟ್ಟೆಯನ್ನುಡುವರು ; ನಗರಗಳಿಗೆ ದೂರವಾಗಿರುವವರು ಜಿಂಕೆಯ ಚರ್ಮವನ್ನೇ ಧರಿಸುವರು,” ಎಂಬುದು ಅವರ ವಿವರಣೆ. ಆದ್ದರಿಂದ, ಧರ್ಮಮಹಾಮಾತ್ರರಿಗೆ ತಮ್ಮ ಕೆಲಸದಲ್ಲಿ ಅನೇಕ ತೊಂದರೆಗಳಿದ್ದಿರಬೇಕೆಂದು ನಾವು ಊಹಿಸಬಹುದು. ಸಂಕುಚಿತ ಭಾವವಿಲ್ಲದ ಪಂಡಿತರಲ್ಲಿ ಈ ತೆರನ ದ್ವೇಷಾಸೂಯೆಗಳೂ ಪ್ರತಿಸ್ಪರ್ಧೆಯೂ ಕಡಮೆಯಾಗಿದ್ದರೂ ಬಹುಸಂಖ್ಯಾತರಾದ ಪಾಮರರಲ್ಲಿ ಅವು ಹರಡಿ ಶಾಂತಿಗೆ ಭಂಗವಾಗುವುದು ಸಹಜ. ಅದಕ್ಕಾಗಿಯೇ ಅಶೋಕನು ತನ್ನ ಆಡಳಿತದ ರೀತಿಯನ್ನೂ ಧರ್ಮಪ್ರಚಾರವನ್ನೂ ಬಹು ಜಾಗರೂಕತೆಯಿಂದ ನಡಸಬೇಕಾಯಿತು.

ಅಶೋಕನ ತಾತ ಚಂದ್ರಗುಪ್ತನ ಶಿಕ್ಷಾಗುರುವಾದ ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಪರಮತಗಳನ್ನು ಆದರಿಸುವುದು ದೇಶದ ಶಾಂತಿಸ್ಥಾಪನೆಗೆ ಒಂದು ಒಳ್ಳೆಯ ಉಪಾಯವೆನ್ನುತ್ತಾನೆ. ಯಾವುದಾದರೊಂದು ದೇಶವನ್ನು ಆಕ್ರಮಿಸಿ ಕೈವಶಮಾಡಿಕೊಂಡರೆ ಅಲ್ಲಿಯ ಜನಗಳನ್ನು ಚಿರಕಾಲ ನೆಮ್ಮದಿಯಿಂದ ಆಳಬೇಕಾದರೆ ಅವರ ಮತಾಚಾರಗಳನ್ನು ಕಡೆಗಾಣದೆ ಪ್ರೀತಿಯಿಂದ ಪರಿಪಾಲಿಸುವುದು ಕ್ಷೇಮವೆಂದು ಅವನು ಉಪದೇಶಿಸಿದ್ದಾನೆ. “ದೇಶ ದೈವತ ಸಮಾಜೋತ್ಸವ ವಿಹಾರೇಷು ಚ ಭಕ್ತಿಮನುವರ್ತೇತ” ಎಂದು ಹೇಳುತ್ತಾನೆ. ಇದು ಬರಿಯ ನೀತಿಯ ಮಾತು. ಅಶೋಕನ ದೃಷ್ಟಿ ಕೇವಲ ಇಂತಹ ರಾಜನೀತಿಯ ದೃಷ್ಟಿ ಎಂದು ಫ್ಲೀಟ್‌ರವರು ಹೇಳುತ್ತಾರೆ[1]. ಆದರೆ, ಅವನದು ಉತ್ತಮವಾದ ದೃಷ್ಟಿ. ಅವನ ಉದ್ದೇಶ ಇನ್ನೂ ವಿಶಾಲ, ಅವನ ಆದರ್ಶ ಇನ್ನೂ ಉದಾತ್ತ.

ಅಶೋಕನು ಯಾವ ಮತದವನು ಎಂದು ನಿರ್ಧರಿಸಲು ಅಸಾಧ್ಯವಾಗುವಷ್ಟು ಅವನ ಸರ್ವಮತ ಪ್ರೀತಿಯೂ ಪರಮತಪೂಜೆಯೂ ಎದ್ದು ಕಾಣುತ್ತವೆ. ರಾಜತರಂಗಿಣಿಯಲ್ಲಿ ಅಶೋಕನ ವಿಷಯವಾಗಿ, “ಪ್ರಪನ್ನೋ ಜಿನಶಾಸನಂ” ಎಂದು ಹೇಳಿರುವುದರಿಂದಲೂ ಅಹಿಂಸೆ ಮೊದಲಾದ ಹಲವು ತತ್ವಗಳನ್ನು ಅಶೋಕನು ಆಚರಣೆಗೆ ತಂದದ್ದರಿಂದಲೂ ಅವನು ಜೈನನಾಗಿದ್ದಿರಬೇಕೆಂದು ಥಾಮಸ್ ಮುಂತಾದವರು ವಾದಿಸುತ್ತಾರೆ. ಇನ್ನು ಕೆಲವರು ಅವನು ಆಜೀವಿಕನಾಗಿರಬೇಕೆಂದು ಹೇಳುತ್ತಾರೆ.

[1] *J.R.A.S.*, 1908. 491-7.

ಹೀರಾಸ್‌ರವರು ಅಶೋಕನು ಕಡೆಯುವರೆಗೂ ವೈದಿಕಮತವನ್ನೇ ನಂಬಿದ್ದ ನೆಂದು ಹೇಳುತ್ತಾರೆ. ಬೌದ್ಧಗ್ರಂಥಗಳಲ್ಲಿ ಅಶೋಕನು ತನ್ನ ಹಿಂದಿನ ಧರ್ಮ ವನ್ನು ತ್ಯಜಿಸಿ ಬೌದ್ಧನಾದನೆಂದು ಹೇಳಿರುವುದನ್ನೆಲ್ಲ ನಾವು ನಂಬಬಾರ ದೆಂಬುದೇ ಅವರ ವಾದ. ಅಶೋಕನಂತಹ ಪ್ರಖ್ಯಾತಪುರುಷ ಸ್ವಧರ್ಮ ವನ್ನು ಹಳಿದು "ಗೌತಮಬುದ್ಧನ ಅನುಯಾಯಿ ಆದನೆಂದರೆ ಭಿಕ್ಷು ಸಂಘಕ್ಕೆ ಅದರಿಂದ ಹೆಚ್ಚು ಲಾಭವುಂಟು. ಆದ್ದರಿಂದಲೇ ಅವರು ಈ ಅಪ ಪ್ರಚಾರಕ್ಕೆ ಕೈಹಾಕಿದ್ದು. ತಮ್ಮ ಧರ್ಮದ ಪುರೋಭಿವೃದ್ಧಿಯನ್ನೇ ಮುಂದಿಟ್ಟು ಜೈನರು ಅಕ್ಬರ್ ಚಕ್ರವರ್ತಿಯನ್ನು ಕೂಡ ಜೈನನೆಂದು ಕೊಂಡಾಡಿಲ್ಲವೆ?" ಎಂದು ಮುಂತಾಗಿ ಹೀರಾಸ್‌ರವರು ವಾದಿಸುತ್ತಾರೆ. ಅಂದರೆ, ತಮಗೆ ಅನುಕೂಲವಾದ ಸಂಗತಿಯನ್ನು ಯಾರೊಬ್ಬರು ಹೇಳಿದರೂ ಅದೇ ಕಾರಣದಿಂದ ಅದನ್ನು ನಾವು ನಂಬಬಾರದೆಂದಹಾಗಾಯಿತು! ಅಶೋ ಕನೇ ತನ್ನ ಶಾಸನದಲ್ಲಿ ತಾನು ಮೊದಲು ಉಪಾಸಕನಾಗಿದ್ದೆನೆಂದೂ ಅನಂತರ ಸಂಘವನ್ನು ಪ್ರವೇಶಿಸಿದೆನೆಂದೂ ಹೇಳಿರುವನು. ಸಿದ್ದಾಪುರ ಬೈರಾಟ್ ಸಹಸ್ರಾಂ ಎಂಬ ಊರುಗಳಲ್ಲಿ 'ಉಪಾಸಕ' ಎಂಬ ಪದವೂ, ರೂಪನಾಥ ದಲ್ಲಿ 'ಶಾಕ್ಯ' ಎಂಬ ಪದವೂ, ಮಸ್ಕಿಯಲ್ಲಿ 'ಬುದ್ಧಶಾಕ್ಯ' ಎಂಬ ಪದವೂ ಆ ಶಾಸನಗಳಲ್ಲಿ ಸಿಕ್ಕುತ್ತವೆ. ಶಾಕ್ಯ, ಬುದ್ಧಶಾಕ್ಯ, ಎಂಬ ಪದಗಳು ಬುದ್ಧನ ಅನುಯಾಯಿಯನ್ನಲ್ಲದೆ ಬೇರೊಬ್ಬರನ್ನು ಸೂಚಿಸಲಾರವು. ಹೀಗೆ ಒಂದೊಂದುಕಡೆ ಒಂದೊಂದು ರೀತಿಯಾಗಿ ಪದಗಳನ್ನು ಉಪಯೋಗಿಸಿರು ವುದಕ್ಕೆ ಹೀರಾಸ್‌ರವರು, "ತಾನು ಉಪಾಸಕನೋ ಶಾಕ್ಯನೋ ಬುದ್ಧ ಶಾಕ್ಯನೋ ಎಂಬುದನ್ನು ಅಶೋಕನು ಇನ್ನೂ ತೀರ್ಮಾನಮಾಡಿರಲಿಲ್ಲ. ಆದ್ದರಿಂದಲೇ ಈ ಎಲ್ಲ ಪದಗಳನ್ನೂ ಅಳವಡಿಸಿಕೊಂಡಿರುವುದು" ಎಂದು ಹೇಳುತ್ತಾರೆ! "ನಾನು ಚೆನ್ನಾಗಿ ಪ್ರಯತ್ನಿಸಲಿಲ್ಲ ಎಂದು ಅಶೋಕನೇ ಒಪ್ಪಿಕೊಳ್ಳುತ್ತಿದಾನಲ್ಲಾ! ಆದ್ದರಿಂದ ಅವನಿಗೆ ಇಂತಹ ಅನುಮಾನ ಬರುವುದು ಸಹಜವೇ!" ಎಂದು ಅವರು ತಮ್ಮ ಊಹೆಗೆ ಊರುಗೋಲನ್ನು ಹುಡುಕುವರು. ಭಾಬ್ರುಶಾಸನದಲ್ಲಿ, "ಪೂಜ್ಯರೇ! ಬುದ್ಧನಲ್ಲೂ, ಧರ್ಮದಲ್ಲೂ, ಸಂಘದಲ್ಲೂ ನನಗೆ ಎಷ್ಟು ಗೌರವ ಎಷ್ಟು ಪ್ರಸಾದ ಇದೆ ಎಂಬುದುನ್ನು ನೀವು ಬಲ್ಲಿರಿ" ಎಂದು ಅಶೋಕನು ಹೇಳಿರುವುದನ್ನು ಕೂಡ "ಭಿಕ್ಷುಗಳಿಗೆ ಹೇಳುವ ಮಾತಿನಲ್ಲಿ ಹೀಗೆ ಗೌರವ, ಪ್ರಸಾದ ಎಂದು ಸೂಚಿಸುವುದೇ ಲೌಕಿಕ!" ಎಂದು ಹೀರಾಸ್‌ರವರು ಸಮಾಧಾನ ಹೇಳುವರು. ಬೌದ್ಧಮತದ ವಿಷಯವಾಗಿ ರಾಜನು ಹೆಚ್ಚು ಮಮತೆ ತೋರಿಸಿದರೆ, ಅದು ಕೇವಲ ವಿಶಾಲಹೃದಯ

ದಿಂದ, ಅಥವಾ ರಾಜಕಾರ್ಯದ ಅವಶ್ಯಕತೆಯಿಂದ! ಬೌದ್ಧರೇ ಆ ವಿಷಯ ಹೇಳಿಕೊಂಡರೆ, ಅದು ಅವರ ಲೋಭದಿಂದ! ಅಶೋಕನೇ ಅದನ್ನು ಸಾರಿದರೆ, ಅದು ಕೇವಲ ಮರ್ಯಾದೆಗಾಗಿ! ವೈದಿಕಪುರಾಣಗಳಲ್ಲಿ ಅಶೋಕನ ಆಸ್ತಿಕ ಧರ್ಮದ ವಿಷಯವಾದ ಪ್ರಸ್ತಾಪ ಇಲ್ಲವಲ್ಲಾ ಅಂದರೆ, ಸರ್ವಜನ ವಿದಿತವಾದದ್ದನ್ನು ಏಕೆ ಬರೆದಿಡಬೇಕೆಂದು ಅವು ಬಿಟ್ಟಿರಬಹುದೆಂಬ ವಾದ! ಅಂತು, ತಾನು ಮೊದಲೇ ನಿರ್ಧಾರಮಾಡಿಕೊಂಡಿರುವ ಒಂದು ಅಭಿಪ್ರಾಯವನ್ನು ಅನಂತರ ಸಾಧಿಸಲು ಸರ್ವಪ್ರಯತ್ನದಿಂದಲೂ ಹೀರಾಸ್‌ರವರು ತೊಡಗಿದ್ದಾರೆ. ಬೌದ್ಧಪುರಾಣಗಳಲ್ಲಿ ಅಶೋಕನನ್ನು ಬೌದ್ಧಧರ್ಮದ ಜ್ಯೋತಿಯೆಂದು ಕೊಂಡಾಡಿರುವುದನ್ನೆಲ್ಲ ಸುಳ್ಳೆಂದು ಒತ್ತಟ್ಟಿಗಿಟ್ಟು ಅವರು ಆ ಗ್ರಂಥಗಳನ್ನೆಲ್ಲ ಕಗ್ಗವೆಂದು ದೂರುವರು! ರಾಜತರಂಗಿಣಿಯಿಂದ ಅಶೋಕನು ಶ್ರೀನಗರದಲ್ಲಿ ಅಶೋಕೇಶ್ವರ ವಿಜಯೇಶ ಭೂತೇಶ ಮೊದಲಾದ ಮಂದಿರಗಳನ್ನು ಕಟ್ಟಿಸಿದನೆಂದು ಗೊತ್ತಾಗುವುದರಿಂದಲೂ ಬೌದ್ಧಧರ್ಮಕ್ಕೆ ಬಹು ಮುಖ್ಯವಾದ ಅಷ್ಟಾಂಗಿಕ ಮಾರ್ಗ, ಚತುಸ್ಸತ್ಯ, ರತ್ನತ್ರಯ, ನಿರ್ವಾಣ ಇವುಗಳ ಪ್ರಸ್ತಾಪವೇ ಅಶೋಕನ ಶಾಸನಗಳಲ್ಲಿ ಇಲ್ಲದಿರುವುದರಿಂದಲೂ, ಅವನು ವೈದಿಕಮತದವನೇ ಆಗಿರಬೇಕೆಂದು ರಾಮಚಂದ್ರ ದೀಕ್ಷಿತರೂ[1] ಮಕ್‌ಫೇಯಿಲ್[2]ರವರೂ, ಮೊನಹರ್‌[3]ರವರೂ ಹೇಳುವರು.

ಆದರೆ, ಅಶೋಕನು ಬೌದ್ಧನಾಗಿದ್ದನೆಂಬುದರಲ್ಲಿ ಸಂದೇಹವೇ ಇಲ್ಲ. ಇದಕ್ಕೆ ಬೇಕಾದ ನಿದರ್ಶನಗಳಿಗೆ ನಾವು ಬೌದ್ಧಪುರಾಣಗಳಿಗೆ ಶರಣುಹೊಗಬೇಕಾಗಿಲ್ಲ. ಅವನ ಧರ್ಮಲಿಪಿಗಳಿಂದಲೂ ಆ ಕಾಲದ ಶಿಲ್ಪದಿಂದಲೂ ನಾವು ಈ ಸಿದ್ಧಾಂತಕ್ಕೆ ಬರಬಹುದಾಗಿದೆ. ಭಾಬ್ರು ಶಾಸನದಲ್ಲಿ ಅಶೋಕನು ತನಗೆ ಬುದ್ಧನಲ್ಲಿರುವ ಭಕ್ತಿಯನ್ನೂ ಧರ್ಮದಮೇಲಿರುವ ಶ್ರದ್ಧೆಯನ್ನೂ ಸಂಘದ ಮೇಲಿರುವ ಅಧಿಕಾರವನ್ನೂ ವ್ಯಕ್ತಗೊಳಿಸಿದಾನೆ. ಸ್ವತಃ ಆ ಧರ್ಮಕ್ಕೆ ಸೇರಿದವನಲ್ಲದಿದ್ದರೆ, "ಭಗವಾನ್ ಬುದ್ಧನ ಭಾಷಿತಗಳಾದ ಇವುಗಳನ್ನು ಭಿಕ್ಷುಗಳೂ ಭಿಕ್ಷುಣಿಯರೂ ಆಗಾಗ ಕೇಳಬೇಕು; ಮನಸ್ಸಿಗೆ ತಂದುಕೊಳ್ಳಬೇಕು; ಹಾಗೆಯೇ ಉಪಾಸಕರೂ ಉಪಾಸಿಕೆಯರೂ ಕೂಡ," ಎಂದು ಹೇಳಲು ಅಶೋಕನು ಮುಂದೆ ಬರುತ್ತಿರಲಿಲ್ಲ. ಬೌದ್ಧ ಪುರಾಣಗಳಲ್ಲಿ ಹೇಳಿರುವ ಹಾಗೆ, ಭಿಕ್ಷುಗಳನ್ನು ಪರೀಕ್ಷಿಸಿ ಅವರ ನಡತೆ ಚೆನ್ನಾಗಿಲ್ಲದಿದ್ದರೆ ಅವರನ್ನು

---

[1] *The Mauryan Polity*—p. 288-9.
[2] *Asoka*, p. 48.
[3] Early History of Bengal, p. 214

ಸಂಘದಿಂದ ಓಡಿಸುವ ಅಧಿಕಾರ ಅಶೋಕನಿಗಿತ್ತೆಂಬುದಕ್ಕೆ ಸಾರನಾಥ ಸಾಂಚಿ ಶಾಸನಗಳೇ ಸಾಕ್ಷಿ. "ಸಂಘವನ್ನು ಯಾರೂ ಭೇದಿಸಕೂಡದು" "ಭಿಕ್ಷು ಸಂಘವೂ ಭಿಕ್ಷುಣೀಸಂಘವೂ ಸಮಗ್ರವಾಗಿರತಕ್ಕದ್ದು" "ಸಂಘವು ಸಮಗ್ರ ವಾಗಿ ಚಿರಸ್ಥಾಯಿಯಾಗಿರಬೇಕೆಂಬುದೇ ನನ್ನ ಇಚ್ಛೆ" ಎಂದು ಅವನು ಅಧಿಕಾರವಾಣಿಯಿಂದ ಘೋಷಿಸುತ್ತಾನೆ. ಹಾಗೆಯೇ "ಬುದ್ಧ ಶಾಕ್ಯಮುನಿ ಇಲ್ಲಿ ಜನಿಸಿದನೆಂದು ತಾನೇ ಇಲ್ಲಿಗೆ ಬಂದು ಆರಾಧಿಸಿದನು; ಭಗವಾನನು ಇಲ್ಲಿ ಜನಿಸಿದನೆಂದು ಒಂದು ಶಿಲಾವಿಕೃತವನ್ನು ಮಾಡಿಸಿದನು; ಶಿಲಾಸ್ತಂಭ ವನ್ನು ನಿಲ್ಲಿಸಿದನು" ಎಂಬ ಶಾಸನದಿಂದ ಅಶೋಕನು ತೀರ್ಥಯಾತ್ರೆ ಮಾಡಿದನೆಂದು ವಿಶದವಾಗುತ್ತದೆ. ಅಲ್ಲದೆ ಶಾಸನಗಳಲ್ಲಿ, ಉಪಾಸಕ, ಶಾಕ್ಯ, ಬುದ್ಧಶಾಕ್ಯ ಎಂಬ ಪದಗಳ ಪ್ರಯೋಗ ಬೇರೆ. ಅಶೋಕನ ಶಿಲಾಸ್ತಂಭ ಗಳ ಮೇಲೆ ಆನೆ ಕುದುರೆ ವೃಷಭ ಚಕ್ರ ಮುಂತಾದವುಗಳ ಪ್ರತಿಮೆ ಗಳಿವೆ. ಶಿಲಾಶಾಸನಗಳಿರುವ ಗಿರಿನಗರದ ಬಂಡೆಯ ಮೇಲೆ "ಸರ್ವಶ್ವೇತೋ ಹಸ್ತಿ ಸರ್ವಲೋಕ ಸುಖಾಹರೋನಾಮ" ಎಂದು ಕೆತ್ತಿದೆ. ಭಗವಾನ್ ಬುದ್ಧನು ಅವತಾರಮಾಡಿದಾಗ ಶ್ವೇತಹಸ್ತಿಯಾಗಿ ಸ್ವರ್ಗದಿಂದಿಳಿದು ಮಾಯಾ ದೇವಿಯಲ್ಲಿ ಜನಿಸಿದ್ದರಿಂದ ಹಸ್ತಿದರ್ಶನ ಬೌದ್ಧರಿಗೆ ಮಂಗಳಕರವಾಯಿತು. ಬುದ್ಧನನ್ನು ಶಾಕ್ಯಸಿಂಹ ಎಂದು ಹೊಗಳುವುದು ವಾಡಿಕೆ. ತರುಣದೆಸೆಯಲ್ಲಿದ್ದ ಬುದ್ಧನನ್ನು ಸ್ಮರಿಸಬೇಕಾದರೆ ವೃಷಭದ ಚಿಹ್ನೆಯೂ ಸಂಸಾರಜೀವನಕ್ಕೆ ಹೇಸಿ ಅರಮನೆಯನ್ನು ತ್ಯಜಿಸಿದ ರಾಜಕುಮಾರನಾದ ಗೌತಮನನ್ನು ಸ್ಮರಿಸ ಬೇಕಾದರೆ ಕುದುರೆಯ ಚಿಹ್ನೆಯೂ ಬೋಧಿಜ್ಞಾನವನ್ನು ಪಡೆದು ಧರ್ಮ ಗುರುವಾಗಿ ಪ್ರಪಂಚವನ್ನು ಉದ್ಧಾರಮಾಡಿದ ಭಗವಾನನನ್ನು ಸ್ಮರಿಸ ಬೇಕಾದರೆ ಚಕ್ರದ ಚಿಹ್ನೆಯೂ ರೂಢಿಗೆ ಬಂದುವು. ಹೀಗೆ ಆನೆ ಗೂಳಿ ಕುದುರೆ ಸಿಂಹ ಚಕ್ರ ಎಂಬ ಚಿಹ್ನೆಗಳು ಬೌದ್ಧರಿಗೆ ಪೂಜ್ಯವಸ್ತುಗಳಾದುವು. ಇದರಿಂದಲೇ ಅಶೋಕನ ಶಿಲಾಸ್ತಂಭಗಳಮೇಲೂ ಕೆಲವು ಶಾಸನಗಳ ಪಕ್ಕದಲ್ಲೂ ಇಂತಹ ವಿಗ್ರಹಗಳನ್ನು ಕೆತ್ತಿ ನಿಲ್ಲಿಸಿರುವರು. ಹೀಗೆ ಈ ವಿಗ್ರಹ ಗಳಿಂದ ಅಶೋಕನ ಧರ್ಮವೇನೆಂಬುದು ಸ್ಪಷ್ಟವಾಗುವುದಾದರೂ ವಿನ್ಸೆಂಟ್ ಸ್ಮಿತ್‌ರವರು ಅವುಗಳ ವಿಷಯವಾಗಿ ಒಂದು ವಿಚಿತ್ರವಾದ ಸಿದ್ಧಾಂತ ಹೂಡಿ ದ್ದಾರೆ. ಅವು ದಿಕ್ಪಾಲಕರ ವಾಹನಗಳೆಂದೂ ನಾಲ್ಕು ದಿಕ್ಕುಗಳನ್ನೂ ಸೂಚಿಸುವ ಸಿಂಹ, ಆನೆ, ಕುದುರೆ ವೃಷಭ ಇವುಗಳ ಮೂಲಕ ನಾಲ್ಕು ಕಡೆ ಗಳಲ್ಲೂ ಇರುವ ಸಂಘವನ್ನು ಸೂಚಿಸುವುದಕ್ಕಾಗಿ ಅಶೋಕನು ಅವುಗಳನ್ನು ಕೆತ್ತಿಸಿದನೆಂದೂ ಅದಕ್ಕಾಗಿಯೇ ಸಾಂಚಿ ಸ್ತಂಭದಮೇಲೆ ನಾಲ್ಕು ಸಿಂಹ

ಗಳನ್ನು ಒಟ್ಟಾಗಿ ನಿಲ್ಲಿಸಿರುವನೆಂದೂ ಅವರಸಿದ್ಧಾಂತ[1]. ಆರ್. ಪಿ. ಚಂದ ಅವರು ಈ ಸ್ತಂಭಗಳನ್ನು ಆಗಿನಕಾಲದಲ್ಲಿ ಪೂಜಿಸುತ್ತಿದ್ದರೆಂದೂ ಅವುಗಳ ಹತ್ತಿರವಿದ್ದ ವಿಹಾರಗಳಲ್ಲಿನ ಭಿಕ್ಷುಗಳ ದೇಶವನ್ನು ಈ ವಿಗ್ರಹಗಳ ಮೂಲಕ ಸೂಚಿಸಲು ಯತ್ನಿಸಿರುವರೆಂದೂ ಅಭಿಪ್ರಾಯಪಡುತ್ತಾರೆ. ಆದರೆ, ಇವೆಲ್ಲವೂ ತೀರಅಸಂಭಾವ್ಯವಾದ ವಿಚಾರಗಳಾಗಿವೆ. ಆದ್ದರಿಂದ ಆಗಿನಕಾಲದಲ್ಲಿ ಅನೇಕ ಜಯಸ್ತಂಭಗಳಿದ್ದುವೆಂದೂ, ಅಶೋಕನ ಕಾಲದಲ್ಲಿ ಅವನು ನಿಲ್ಲಿಸಿದ ಹೊಸ ಸ್ತಂಭಗಳು ಅವನದೇ ಆದ ಧರ್ಮವಿಜಯದ ಶಿಲಾಪತಾಕೆಗಳೆಂದೂ ನಿರ್ಧರಿಸುವುದೇ ಸಮಂಜಸವಾಗಿದೆ.

ಭಾಬ್ರುಶಾಸನದಲ್ಲಂತೂ ಅಶೋಕನು ತನ್ನ ಧರ್ಮವನ್ನು ಸ್ಪಷ್ಟವಾಗಿ ತಿಳಿಸಿದ್ದಾನೆ. "ಪೂಜ್ಯರೇ, ಬುದ್ಧನಲ್ಲೂ ಧರ್ಮದಲ್ಲೂ ಸಂಘದಲ್ಲೂ ನನಗೆ ಎಷ್ಟು ಗೌರವ, ಎಷ್ಟು ಪ್ರಸಾದ ಇದೆ ಎಂಬುದನ್ನು ನೀವು ಬಲ್ಲಿರಿ. ಪೂಜ್ಯರೆ, ಭಗವಾನ್ ಬುದ್ಧನ ಭಾಷಿತಗಳೆಲ್ಲವೂ ಸುಭಾಷಿತಗಳು. ಆದರೂ ಚಿರಸ್ಥಾಯಿಯಾದ ಸದ್ಧರ್ಮವೆಂದು ನನಗೆ ತೋರುವುದನ್ನು ಅರಿಕೆಮಾಡಿಕೊಳ್ಳುತ್ತೇನೆ" ಎಂದು ಹೇಳಿ, ಬೌದ್ಧಧರ್ಮಗ್ರಂಥಗಳಿಂದ ಏಳು ಮುಖ್ಯ ಧರ್ಮಪರ್ಯಾಯಗಳನ್ನು ಉದ್ಧರಿಸಿ, "ಪೂಜ್ಯರೆ, ಭಗವಾನ್ ಬುದ್ಧನ ಭಾಷಿತಗಳಾದ ಇವುಗಳನ್ನು ಭಿಕ್ಷುಗಳೂ ಭಿಕ್ಷುಣಿಯರೂ ಆಗಾಗ ಕೇಳಬೇಕು, ಮನಸ್ಸಿಗೆ ತಂದುಕೊಳ್ಳಬೇಕು. ಹಾಗೆಯೇ ಉಪಾಸಕರೂ ಉಪಾಸಿಕೆಯರೂ ಕೂಡ. ಪೂಜ್ಯರೆ, ಇದಕ್ಕಾಗಿಯೇ ನಾನು ಇದನ್ನು ಬರೆಯಿಸಿರುವೆನು. ನನ್ನ ಅಭಿಮತವನ್ನು ಅವರು ತಿಳಿದುಕೊಳ್ಳಲಿ ಎಂದು" ಎನ್ನುತ್ತಾನೆ. ಅಶೋಕನು ಕೇವಲ ಉಪಾಸಕನಾಗಿರದೆ ಆಗಾಗ ವಿಹಾರಗಳಿಗೆ ಹೋಗಿ ಅಲ್ಲಿಯೇ ಕೆಲಕಾಲವಿದ್ದು ಆಧ್ಯಾತ್ಮಿಕ ವಿಚಾರದಲ್ಲಿ ನಿರತನಾಗಿದ್ದನು. ಹೀಗೆ, ಧರ್ಮದಲ್ಲಿನ ತೀವ್ರವಾದ ಭಕ್ತಿಯೊಂದುಕಡೆ, ಸಂಘವನ್ನು ರಕ್ಷಿಸಲು ಬೇಕಾದ ರಾಜಕೀಯ ಶಕ್ತಿಯೊಂದುಕಡೆ, ಇವೆರಡೂ ಸೇರಿದ್ದರಿಂದ ಅಶೋಕನು ಅಧಿಕಾರವಾಣಿಯಿಂದ ಭಿಕ್ಷುಗಳನ್ನು ಕುರಿತು ಅವರ ಪ್ರವಚನಕ್ಕೆ ಬೇಕಾದ ಸಲಹೆಗಳನ್ನು ಕೊಡಲು ಅರ್ಹತೆಯನ್ನು ಪಡೆದನು. ಅವನು ಆರಿಸಿದ ಏಳು ಪರ್ಯಾಯಗಳಿಂದ ಮುಖ್ಯವಾಗಿ ಭಿಕ್ಷುಗಳ ಆಚಾರವ್ಯವಹಾರಗಳನ್ನು ತಿದ್ದುವುದು, ಅವರಲ್ಲಿ ಅಂತಃಕಲಹಗಳು ಹುಟ್ಟಿ ಸಂಘವೇ ಒಡೆದುಹೋಗುವುದನ್ನು ತಡೆಯುವುದು ಇವೇ ಅಶೋಕನ ಉದ್ದೇಶಗಳಾಗಿದ್ದುವೆಂದು ಗೊತ್ತಾಗುತ್ತದೆ. ಸರಿಯಾದ ಮುನಿ ಹೇಗಿರಬೇಕೆಂದು ಹೇಳುವ ಎರಡು ಭಾಗಗಳನ್ನೂ

[1] *Z.M.G.* vol. LXV, pages 221-240.

ಮುಖ್ಯವಾದ ವಿನಯಾಚಾರಗಳನ್ನು ತಿಳಿಸುವ ಎರಡು ಭಾಗಗಳನ್ನೂ ಸಂಘಕ್ಕೆ ಅಪಾಯವನ್ನುಂಟುಮಾಡುವ ಚರ್ಯೆಗಳನ್ನು ಖಂಡಿಸುವ ಒಂದು ಭಾಗವನ್ನೂ ಸೂಚಿಸಿ ಅವುಗಳನ್ನು ಭಿಕ್ಷುಗಳೂ ಭಿಕ್ಷುಣಿಯರೂ ಆಗಾಗ ಕೇಳಬೇಕು, ಮನಸ್ಸಿಗೆ ತಂದುಕೊಳ್ಳಬೇಕು ಎಂದು ಹೇಳುತ್ತಾನೆ. ಮತ್ತೊಂದು ಧರ್ಮಪರ್ಯಾಯದಲ್ಲಿ ಭಿಕ್ಷುಗಳ ಅಹಂಕಾರವನ್ನು ಖಂಡಿಸುವ ಉಪದೇಶವಿದೆ. "ತಾನು ಹುಟ್ಟಿಬಂದ ಕುಲ ದೊಡ್ಡದೆಂದೂ ಇತರ ಭಿಕ್ಷುಗಳು ಅಷ್ಟು ದೊಡ್ಡಕುಲದಿಂದ ಬಂದವರಲ್ಲವೆಂದೂ ಅಹಂಕಾರಪಡಬಾರದು, ದ್ವೇಷಾಸೂಯೆಗಳು ನಾಶವಾಗುವುದು ಕುಲವನ್ನನುಸರಿಸಿಯಲ್ಲ; ಧರ್ಮದಲ್ಲೇ ಮನಸ್ಸು ನಿಂತರೆ, ಅದರಂತೆ ಬದುಕನ್ನು ನೇರ್ಪಡಿಸಿದರೆ ಆಗ ಅಂತರಂಗದ ಕಲ್ಮಷ ತೊಡೆದುಹೋಗುತ್ತದೆ; ಹಾಗೆಯೇ ತನ್ನ ಮನೆಗೆ ಧನ ಇದೆಯೆಂದೂ ಅದರ ಕೀರ್ತಿ ದೊಡ್ಡದೆಂದೂ ತನಗೆ ಇತರರು ಮರ್ಯಾದೆಮಾಡುವರೆಂದೂ ತಾನು ದೊಡ್ಡ ವಿದ್ವಾಂಸನೆಂದೂ ವಾಚಾಳನೆಂದೂ ತನ್ನ ತಪಸ್ಸು ಹೆಚ್ಚು ತೀಕ್ಷ್ಣವಾದುದೆಂದೂ ತನ್ನ ಸಾಧನೆಗಳು ಸಫಲವಾದುವೆಂದೂ ಅಹಂಕಾರಪಡಕೂಡದು."*

ಅಶೋಕನು ಹೇಳಿರುವ ಏಳನೆಯ ಧರ್ಮಪರ್ಯಾಯದಲ್ಲಿ ಭಗವಾನ್ ಬುದ್ಧನು ರಾಜಗೃಹದ ವೇಣುವನದಲ್ಲಿದ್ದಾಗ ಒಂದು ದಿನ ಪೂಜ್ಯ ರಾಹುಲನಲ್ಲಿಗೆ ಹೋಗಿ ಅವನಿಗೆ ಹೇಳಿದ ಬುದ್ಧಿವಾದವಿದೆ. ರಾಹುಲನು ಭಗವಾನರ ಕಾಲಿಗೆ ನೀರು ಕೊಟ್ಟು ಕೈಮುಗಿದು ನಿಂತಿದ್ದನು. ಭಗವಾನರು ಕಾಲುತೊಳೆದುಕೊಂಡು ಆಸನಸ್ಥರಾದರು. ಪಾತ್ರೆಯಲ್ಲಿ ನೀರು ಒಂದು ತೊಟ್ಟು ಮಾತ್ರ ಉಳಿದಿರುವುದನ್ನು ತೋರಿಸಿ, ಸುಳ್ಳು ಹೇಳುವುದಕ್ಕೆ ಅಂಜದ ಭಿಕ್ಷುವಿನ ಸನ್ಯಾಸವೂ ಕೂಡ ಒಂದೇ ಒಂದು ತೊಟ್ಟು ಮಾತ್ರ, ಎಂದು ಹೇಳುತ್ತಾ ಭಗವಾನರು ಮೃಷಾವಾದವನ್ನು ನಿಷೇಧಿಸಿ ಉಪದೇಶಮಾಡಿದರು. ಆ ನೀರನ್ನೂ ಚೆಲ್ಲುತ್ತಾ ಹೀಗೆಯೇ ಆ ಭಿಕ್ಷುವಿನ ಬದುಕು ಕೂಡ ಚೆಲ್ಲಿದಂತೆಯೇ ಆಗುತ್ತದೆ ಎಂದರು. ಆ ಪಾತ್ರೆಯನ್ನು ಮಗುಚುತ್ತಾ ಹೀಗೆಯೇ ಆ ಭಿಕ್ಷುವಿನ ಜೀವನ ಮಗುಚಿಹೋಗುತ್ತದೆ ಎಂದರು. ಅದನ್ನು ಬರಿದುಮಾಡಿ ನಿಲ್ಲಿಸಿ ಹೀಗೆಯೇ ಅವನೂ ಕೂಡ ಬರಿದಾಗಿ ನಿಲ್ಲುವನು, ಎಂದರು. ಯಾವೊಂದು ಕೆಲಸದಲ್ಲಿ ತೊಡಗುವಾಗಲೂ ಅದರಿಂದ ದುಃಖ ಹೆಚ್ಚುತ್ತದೋ ಎಂದು ವಿಮರ್ಶಿಸಿ ಹಾಗಾಗುವುದಾದರೆ ಅದನ್ನು ತ್ಯಜಿಸಿಬಿಡಬೇಕು; ಯಾವೊಂದು ಕೆಲಸವನ್ನಾಗಲಿ

* ಸತ್ಪುರುಷ ಸೂತ್ರ. Maijh III 37-45.—No. 1 of Bhabru Edict, vide S. N. Mitra I.A XLVIII, 1919.

ಮಾಡಿ ಮುಗಿಸಿದಮೇಲೆ ಅದರಿಂದ ದುಃಖ ಹೆಚ್ಚುವುದೆಂದು ಕಂಡುಬಂದರೆ ಕೂಡಲೇ ಗುರುಹಿರಿಯರಿಗೆ ತಿಳಿಸಿ ಸಂಯಮವನ್ನು ಅಭ್ಯಾಸಮಾಡಬೇಕು; ಹಾಗಲ್ಲದೆ ಅದರಿಂದ ಸುಖ ಹೆಚ್ಚಾಗುವುದೆಂದು ಗೊತ್ತಾದರೆ ಮತ್ತಷ್ಟು ಸ್ಫೂರ್ತಿಗೊಂಡು ಶುಭಕೆಲಸಗಳಲ್ಲೇ ನಿರತರಾಗಬೇಕು; ಹೀಗೆಯೇ ಮಾತಿನಲ್ಲೂ ಮನದಲ್ಲೂ ದುಃಖಕಾರಕವಾದುವುಗಳನ್ನು ಬಿಟ್ಟು ಸುಖೋದಯವಾದದ್ದನ್ನೇ ಹಿಡಿಯಬೇಕು. ಮನಸಾ ವಾಚಾ ಕರ್ಮಣಾ ಶುದ್ಧರಾಗಲು ಪ್ರಯತ್ನಿಸಬೇಕು. ಇದಕ್ಕೆ ನಿರಂತರ ಪರೀಕ್ಷೆ ಅತ್ಯವಶ್ಯಕ. ಹೀಗೆ ಭಗವಾನ್ ಬುದ್ಧನು ಕೊಟ್ಟ ಉಪದೇಶಕ್ಕಾಗಿ ರಾಹುಲನು ಹಿಗ್ಗಿದನು." ಭಗವಾನ್ ಬುದ್ಧನ ಇಂಥ ಸುಭಾಷಿತಗಳಿಂದ ಭಿಕ್ಷುಗಳ ಜೀವನವನ್ನು ತಿದ್ದುವುದಕ್ಕೆ ಬೇಕಾದ ಮುಖ್ಯ ಭಾಗಗಳನ್ನು ಆರಿಸಿ ಪ್ರಕಟಿಸುವ ಸಾಹಸಕ್ಕೆ ತಾನೂ ಆ ಧರ್ಮಕ್ಕೆ ಸೇರದೆ ಇದ್ದಿದ್ದರೆ ಅಶೋಕನು ಎಂದಿಗೂ ಕೈಹಾಕುತ್ತಿರಲಿಲ್ಲ. ಭಾಬ್ರು ಹತ್ತಿರ ಆಗಿನ ಕಾಲದಲ್ಲಿ ಒಂದು ವಿಹಾರವಿದ್ದಿರಬೇಕು. ಅಲ್ಲಿಯ ಭಿಕ್ಷುಗಳೊಂದಿಗೆ ಧರ್ಮಾಭ್ಯಾಸಕ್ಕಾಗಿ ಅಶೋಕನು ಕೆಲಕಾಲವಿದ್ದಿರಬೇಕು. ಆ ಅನುಭವದ ಮೇಲೆ ಶಾಸನವನ್ನು ಬರೆದು ತನ್ನ ಆದರ್ಶವನ್ನು ಪ್ರಸಿದ್ಧಪಡಿಸಿರಬೇಕು.

ಅಶೋಕನು ಎಲ್ಲ ಮತದವರಲ್ಲಿಯೂ ಸಾರವೃದ್ಧಿಯಾಗಬೇಕೆಂದು ಬಯಸಿದನು. ಅವನು ಶಾಸನಗಳಲ್ಲಿ ಹೇಳಿರುವ 'ಧರ್ಮ'ವನ್ನು ಬಿಡಿಸಿ ನೋಡಿದರೆ ನಮಗೆ ಅದರಲ್ಲಿ ಎಲ್ಲ ಮತಗಳ ತಿರುಳೂ ಸಿಕ್ಕುತ್ತದೆ. ಯಜ್ಞಯಾಗಾದಿಗಳಿಗಾಗಿ ಪ್ರಾಣಿಗಳನ್ನು ಕೊಲ್ಲಕೂಡದೆಂದು ವಿಧಿಸಿದ್ದೂ ಕೂಡ ಉಪನಿಷತ್ತುಗಳಲ್ಲಿ ಹೇಳಿರುವ ವೇದಾಂತಧರ್ಮಕ್ಕೆ ವಿರೋಧವಾಗಿಲ್ಲ. ಅವನ 'ಧರ್ಮ'ದಲ್ಲಿ ಹಲವು ಮುಖ್ಯತತ್ತ್ವಗಳು ಅಡಗಿಕೊಂಡಿವೆ. ಅಹಿಂಸೆಯನ್ನು ಅಶೋಕನು ಬಹು ಮುಖ್ಯವೆಂದು ಭಾವಿಸಿರುವನು. "ಜೀವಿಗಳನ್ನು ಜೀವದಿಂದ ಪೋಷಿಸಲಾಗದು" "ಪ್ರಾಣಿಗಳನ್ನು ಕೊಲ್ಲದಿರುವುದು ಸಾಧುವಾದುದು" ಎಂಬುದು ಅವನ ಅಭಿಪ್ರಾಯ. ಅದಕ್ಕಾಗಿ ಅವನು ತಾನೇ ಉದಾಹರಣೆಯಾಗಿ ನಿಂತು ಪ್ರಜೆಗಳಿಗೆ ಉತ್ತೇಜನವನ್ನು ಕೊಟ್ಟನು. 'ಹಿಂದೆ ದೇವಾನಾಂಪ್ರಿಯ ಪ್ರಿಯದರ್ಶಿಯ ಅಡುಗೆ ಮನೆಯಲ್ಲಿ ಪ್ರತಿನಿತ್ಯವೂ ಅನೇಕ ಶತಸಹಸ್ರಪ್ರಾಣಿಗಳನ್ನು ಸೂಪಕ್ಕಾಗಿ ಕೊಲ್ಲುತ್ತಿದ್ದರು. ಈಗ, ಈ ಧರ್ಮಲಿಪಿಯನ್ನು ಬರಸ.ವಾಗ ಮೂರು ಪ್ರಾಣಿಗಳನ್ನು ಮಾತ್ರ ಸೂಪಕ್ಕಾಗಿ ಕೊಲ್ಲಲಾಗುತ್ತಿದೆ—ಎರಡು ನವಿಲುಗಳು, ಒಂದು ಜಿಂಕೆ. ಆ ಜಿಂಕೆಯನ್ನು ಕೂಡ ಪ್ರತಿದಿನವೂ ಕೊಲ್ಲುತ್ತಿಲ್ಲ. ಈ ಮೂರು ಪ್ರಾಣಿ

ಗಳನ್ನು ಇನ್ನುಮುಂದೆ ಕೊಲ್ಲುವುದಿಲ್ಲ,' ಎಂದು ಅವನು ಜನರೆದುರು ಪ್ರತಿಜ್ಞೆ ಮಾಡುತ್ತಾನೆ. ಅರಮನೆ ಅಡುಗೆಮನೆಯ ರಹಸ್ಯವನ್ನು ಮರೆಮಾಚದೆ ಒಪ್ಪಿಕೊಂಡು ತನ್ನ ತ್ಯಾಗದ ಮೇಲುಪಂಕ್ತಿಯನ್ನೇ ಪ್ರಜೆಗಳು ಅನುಸರಿಸ ಬೇಕೆಂದು ಕೋರುತ್ತಾನೆ. ಅನೂಚಾನವಾಗಿ ರಾಜಯೋಗ್ಯವೆಂದು ಹೆಸರು ಗೊಂಡ ಮಯೂರಮಾಂಸವನ್ನು ತೊರೆದದ್ದು ಅಶೋಕನ ಧೈರ್ಯಕ್ಕೆ ಒಂದು ಹೆಗ್ಗುರುತು.

ಅಭಿಷಿಕ್ತನಾಗಿ ಇಪ್ಪತ್ತಾರು ವರ್ಷಗಳಾದಾಗ ಅಶೋಕನು ತನ್ನ ಪ್ರಾಣದಕ್ಷಿಣೆಯ ಸಂಕಲ್ಪವನ್ನು ಒಂದು ದೊಡ್ಡ ಶಾಸನದ ಮೂಲಕ ಸಾಮ್ರಾಜ್ಯದಲ್ಲೆಲ್ಲಾ ಕಾರ್ಯರೂಪಕ್ಕೆ ತಂದನು. ಈ ಶಾಸನವನ್ನು ಪರೀಕ್ಷಿಸಿದರೆ "ಇಲ್ಲಿ ಯಾವ ಜೀವವನ್ನೂ ಕೊಲ್ಲಕೂಡದು" ಎಂಬ ಮೊದಲನೆಯ ಶಿಲಾಫಲಕಶಾಸನದ ಸಂಪೂರ್ಣ ನಿಷೇಧವನ್ನು ಕಾರ್ಯತಃ ನಡಸಲು ಅಶೋಕನಿಗೆ ಸಾಧ್ಯವಾಗಲಿಲ್ಲವೆಂದು ಗೊತ್ತಾಗುವುದು. ಅಂತಹ ವೀರದೀಕ್ಷೆಯನ್ನು ಆ ವಿಶಾಲಸಾಮ್ರಾಜ್ಯದಲ್ಲಿ ನಿರ್ವಹಿಸುವುದು ಅಸಾಧ್ಯವೆಂದು ಕಂಡುಬಂದುದರ ಮೇಲೆ ಈ ಹೊಸ ಶಾಸನ ಹೊರಟಿರಬೇಕು. ಅದರಲ್ಲಿ ಶುಕ ಶಾರಿಕಾದಿ ಅನೇಕ ಪಕ್ಷಿಗಳನ್ನೂ ಪಿಪೀಲಿಕಾದಿ ಪ್ರಾಣಿಗಳನ್ನೂ ಕೆಲವು ಜಾತಿಯ ಮತ್ಸ್ಯಗಳನ್ನೂ ಇನ್ನೂ ಕೆಲವು ಜೀವಿಗಳನ್ನೂ ಅಶೋಕನು "ಅವಧ್ಯ"ವೆಂದು ಸಾರಿ ಅವುಗಳಿಗೆ ಪ್ರಾಣದಾನಮಾಡಿದ್ದಾನೆ. 'ಪ್ರತಿ ಭೋಗಕ್ಕೆ ಬರದ, ಅಥವಾ ಆಹಾರಕ್ಕೊದಗದ ಎಲ್ಲ ಚತುಷ್ಪಾದಗಳ'ನ್ನೂ ಅವಧ್ಯಮಾಡಲಾಗಿದೆ', ಅಷ್ಟೆ. ಅಂದರೆ, ಹಿಂದಿನ ಆದರ್ಶ ಎಷ್ಟು ಇಳಿದು ಹೋಗಿದೆ! ಆಹಾರಕ್ಕೊದಗುವ ಪ್ರಾಣಿಗಳನ್ನು ಕೊಲ್ಲಬಹುದೆಂದಾಯಿತು. ಚರ್ಮ, ಕೊಂಬು, ದಂತ, ಗರಿ ಕೂದಲು ಇವುಗಳನ್ನು ಮನುಷ್ಯನ ಪ್ರತಿ ಭೋಗಕ್ಕಾಗಿ ಕೊಡುವ ಪ್ರಾಣಿಗಳನ್ನೂ ಕೊಲ್ಲಬಹುದೆಂದಾಯಿತು. ಜನರ ನಡತೆಯನ್ನು ಒಮ್ಮೆಯೆ ತಿದ್ದಲು ಸಾಧ್ಯವಾಗದೆ, ಅಶೋಕನು ಕೂಡ ಉದ್ದೇಶವನ್ನು ತಗ್ಗಿಸಿ ಉಪಾಯಗಳನ್ನು ರಚಿಸಿ ಪ್ರಜೆಗಳ ದೃಷ್ಟಿಯನ್ನು ನಿಧಾನವಾಗಿ ಅಹಿಂಸೆಯ ಕಡೆಗೆ ತಿರುಗಿಸಬೇಕಾಯಿತು. ಅದಕ್ಕಾಗಿಯೇ, ಅದೇ ಶಾಸನದಲ್ಲಿ 'ಗಬ್ಬವಾಗಿರುವ ಅಥವಾ ಹಾಲು ಕರೆಯುವ ಆಡು ಕುರಿ ಹಂದಿಗಳನ್ನು ಕೊಲ್ಲಕೂಡದು. ಆರು ತಿಂಗಳಾಗುವ ವರೆಗೂ ಅವುಗಳ ಮರಿ ಗಳನ್ನೂ ಕೊಲ್ಲಕೂಡದು' ಎನ್ನುತ್ತ ಸಾಮಾನ್ಯವಾಗಿ ಎಲ್ಲರ ಹೃದಯ ದಲ್ಲಿಯೂ ಮನೆಮಾಡಿರುವ ಕರುಣೆಯನ್ನು ಅವಲಂಬಿಸಿ ಆಜ್ಞೆಮಾಡಿರುವನು. ಅಲ್ಲದೆ ಪುಣ್ಯ ದಿನಗಳಲ್ಲಿ, ಕರುಣಾಮಯನಾದ ದೇವರ ಧ್ಯಾನಕ್ಕಾಗಿ

ಮಿಾಸಲಾಗಿರುವ ಉತ್ಸವದ ದಿನಗಳಲ್ಲಿ ಪ್ರಾಣಿಹಿಂಸೆ ಮಾಡಕೂಡದೆಂದರೆ ಅದನ್ನು ಪ್ರಜೆಗಳು ನಡೆಸಿಕೊಡುವರು, ಅವರ ಅಂತಃಕರಣ ಆಗ ಮರುಕವನ್ನು ತೋರಿಸಬಲ್ಲುದು ಎಂದು ನಂಬಿ ಅಶೋಕನು ಚಾತುರ್ಮಾಸ್ಯಗಳು, ತಿಷ್ಯಮಾಸದ ಪೌರ್ಣಮಿ ಅಷ್ಟಮಿ ಚತುರ್ದಶಿ ಪಂಚದಶಿ, ಪ್ರತಿಪದಗಳು, ಉಪವಾಸದ ದಿನಗಳು ಪುನರ್ವಸು ನಕ್ಷತ್ರದ ದಿನ ಎಂಬ ಈ ಪುಣ್ಯದಿನಗಳಲ್ಲಿ ಮಿಾನುಗಳನ್ನು ಕೊಲ್ಲಕೂಡದು, ಇತರ ಜೀವಿಗಳನ್ನು ವಧಿಸಕೂಡದು, ಆಡು ಟಗರು ಹಂದಿ ಮುಂತಾದ ಪ್ರಾಣಿಗಳಿಗೆ ಹಿಡಮಾಡಬಾರದು, ಕುದುರೆಗಳಿಗೂ ಎತ್ತುಗಳಿಗೂ ಬರೆ ಹಾಕಕೂಡದು ಎಂದು ನಿಷೇಧಿಸಿರುವನು.

ಆದರೆ ಕೇವಲ, ಶಾಸನಗಳಿಂದ ವಿಧಿನಿಷೇಧಗಳಿಂದ ಜೀವನಧ್ಯೇಯಗಳ ಸೊಟ್ಟನ್ನು ತಿದ್ದಲು ಸಾಧ್ಯವಿಲ್ಲವೆಂಬುದು ಅವನಿಗೆ ತಿಳಿದಿತ್ತು. 'ಧರ್ಮನಿಯಮ ಲಘುವಾದದ್ದು ; ನಿಧ್ಯಪ್ತಿ ಹೆಚ್ಚಿನದು.' "ಧರ್ಮನಿಯಮವೆಂದರೆ ಇಂತಿಂತಹ ಪ್ರಾಣಿಗಳನ್ನು ವಿಧಿಸಕೂಡದೆಂದು ನನ್ನಿಂದ ಮಾಡಲಾಗಿರುವುದು. ನನ್ನಿಂದ ಮಾಡಲಾಗಿರುವ ಸಾಲದು ; ಧರ್ಮನಿಯಮಗಳು ನಿಧ್ಯಪ್ತಿಯಿಂದ ಎಂದರೆ, ಪ್ರಾಣಿಗಳ ವಿಷಯದಲ್ಲಿ ಅಹಿಂಸೆ, ಪ್ರಾಣಿಗಳನ್ನು ಕೊಲ್ಲದಿರುವುದು, ಎಂಬ ಧ್ಯಾನದಿಂದ ಧರ್ಮವೃದ್ಧಿ ಹೆಚ್ಚುತ್ತದೆ" (ಎ. ಸಂ. - ೫: ೭) ಎಂದು ಅಶೋಕನೇ ಹೇಳುತ್ತಾನೆ.

ಅಂತು, ಅಹಿಂಸಾತತ್ವವನ್ನು ಸದಾ ಪ್ರಜೆಗಳ ಕಣ್ಮನಗಳ ಮುಂದಿಟ್ಟದ್ದರಿಂದ ಅಶೋಕನು "ಬಹುಕಾಲದವರೆಗೆ ಅನೇಕ ಶತಮಾನಗಳ ತನಕ ಪ್ರಾಣಿವಧೆಯೂ ಹಿಂಸೆಯೂ ವರ್ಧಿಸಿದೆ. ಆದರೆ ಈಗ ಅನೇಕ ಶತಮಾನಗಳು ನಡೆಯದೆ ಇದ್ದದ್ದು ದೇವಾನಾಂಪ್ರಿಯ ಪ್ರಿಯದರ್ಶಿರಾಜನ ಧರ್ಮಾನುಶಾಸ್ತ್ರಿಯಿಂದ ವರ್ಧಿಸುತ್ತಿದೆ. ಪ್ರಾಣಿಗಳನ್ನು ಕೊಲ್ಲದಿರುವುದು. ಭೂತಗಳ ವಿಷಯದಲ್ಲಿ ಅಹಿಂಸೆ. . . ಈ ವಿಚಾರಗಳಲ್ಲೂ ಇತರ ವಿಧಗಳಲ್ಲೂ ಧರ್ಮಾಚರಣೆ ವರ್ಧಿಸುತ್ತಿದೆ!" ಎಂದು ಹೇಳಿಕೊಳ್ಳುವಷ್ಟು ಜನರು ಅಹಿಂಸೆಯ ಆಚರಣೆಯಲ್ಲಿ ಮುಂದುವರಿದರು.

ಅಹಿಂಸೆ ಎಂದರೆ ಅಶೋಕನ ಧ್ಯೇಯವು ಹಿಂಸೆಮಾಡದಿರುವುದು ಮಾತ್ರವೇ ಅಲ್ಲ. ಹಲಕೆಲವು ದಿನಗಳಲ್ಲಿ ಮಾತ್ರ ಪ್ರಾಣಿಗಳನ್ನು ಕೊಲ್ಲದೆ ಅವುಗಳನ್ನು ಹಿಂಸಿಸದೆ ಇದ್ದ ಮಾತ್ರಕ್ಕೆ ಅಹಿಂಸಾ ದೀಕ್ಷೆ ನೆರವೇರಿತೆಂದು ಅವನು ಮೋಸಹೋಗಲಿಲ್ಲ. ಪ್ರಾಣಿಗಳ ವಿಷಯದಲ್ಲಿ ಸಂಯಮ, ಒಂದು ರೀತಿಯ ಧರ್ಮ ಮಂಗಲ ಎಂದು ಅಶೋಕನು ಹೇಳುತ್ತಾನೆ. ಬ್ರಹ್ಮಗಿರಿ ಶಾಸನದಲ್ಲಿ ಅವನು, "ಪ್ರಾಣಿಗಳಲ್ಲಿ ದಯೆತೋರಿಸತಕ್ಕದ್ದು" ಎಂದು ಹೇಳಿ 'ಅಹಿಂಸೆ'

ಎಂಬ ಮಾತನ್ನು ಮತ್ತಷ್ಟು ಪುಷ್ಟೀಕರಿಸುತ್ತಾನೆ. ರಚನಾತ್ಮಕ ಕಾರ್ಯ ಗಳಲ್ಲಿ ಆಸಕ್ತಿಯನ್ನು ತೋರಿಸುತ್ತಾನೆ. ನನ್ನಿಂದ ಮಾರ್ಗಗಳಲ್ಲಿ ಪಶುಗಳಿಗೆ ಮತ್ತು ಮನುಜರಿಗೆ ನೆರಳಿಗೋಸ್ಕರ ನ್ಯಗ್ರೋಧ ವೃಕ್ಷಗಳನ್ನು ನೆಡಿಸಲಾಗಿದೆ; ಮಾವಿನ ತೋಪುಗಳನ್ನು ನೆಡಿಸಲಾಗಿದೆ. ಪ್ರತಿ ಅರ್ಧಕ್ರೋಶದಲ್ಲೂ ಬಾವಿ ಯನ್ನು ತೋಡಿಸಲಾಗಿದೆ; ಛತ್ರಗಳನ್ನು ಕಟ್ಟಿಸಲಾಗಿದೆ. ಪಶುಗಳ ಮತ್ತು ಮನುಜರ ಉಪಯೋಗಕ್ಕಾಗಿ ಅಲ್ಲಲ್ಲಿ ಅರವಟ್ಟಿಗೆಗಳನ್ನು ಇಡಿಸಲಾಗಿದೆ. (ಸ್ತಂ. ಶಾ. ೭.) ಅಶೋಕನು ತನ್ನ ವಿಜಿತದಲ್ಲೂ ನೆರೆಹೊರೆ ದೇಶಗಳಲ್ಲೂ ಪಶುಚಿಕಿತ್ಸೆಗಾಗಿ ಧಾರಾಳವಾಗಿ ದ್ರವ್ಯಸಹಾಯ ಮಾಡಿದನು. 'ಮನುಷ್ಯ ರಿಗೂ ಪಶುಗಳಿಗೂ ಉಪಯೋಗವಾಗುವ ಗಿಡಮೂಲಿಕೆಗಳು ಎಲ್ಲೆಲ್ಲಿ ಇಲ್ಲವೋ ಅಲ್ಲೆಲ್ಲ ಅವುಗಳನ್ನು ತರಿಸಿ ನೆಡಿಸಲಾಗಿದೆ.' (ಫ. ಶಾ. ಶಾ. ೨.) ಹೀಗೆ ಅಶೋಕನು ಪ್ರಾಣಿದಯೆ ಎಂದು ಬರಿದೆ ಸಾರದೆ ಅದು ಫಲಕಾರಿಯಾಗುವಂತೆ ಬಹು ವಿಚಕ್ಷಣೆಯಿಂದ ವ್ಯವಸ್ಥೆ ಮಾಡಿದನು.

ಆಗಿನ ಕಾಲದಲ್ಲಿ ಸಾಮಾನ್ಯ ಜನರು ವಿನೋದಕ್ಕಾಗಿ 'ಸಮಾಜ'ಗಳಲ್ಲಿ ಸೇರುತ್ತಿದ್ದರೆಂದು ತೋರುತ್ತದೆ. ಒಂದನೆಯ ಶಿಲಾಶಾಸನದಲ್ಲಿ ಅಶೋಕನು ಇವುಗಳ ವಿಷಯವನ್ನೆತ್ತಿ ಅವುಗಳನ್ನು ಸೇರಿಸಲಾಗದು ಎಂದು ಹೇಳಿದ್ದಾನೆ. ಮಹಾಭಾರತದ ವಿರಾಟಪರ್ವದಲ್ಲಿ ಮಹಾಕಾಯರೂ ಮಹಾವೀರರೂ ಆದ ಸಾವಿರಾರು ಮಲ್ಲರು ಒಂದು 'ಸಮಾಜ'ಕ್ಕಾಗಿ ನಾಲ್ಕಾರು ಕಡೆಗಳಿಂದ ಒಂದೆಡೆ ಸೇರುವರೆಂದು ಹೇಳಿದೆ. ಅಂತಹ ಪರಿಷೆಗಳಲ್ಲಿ ಜನರು ಮಾಂಸ ತಿಂದು ಮದ್ಯಕುಡಿದು ಜೂಜಾಡಿ ಕುಣಿದು ಮೆರೆಯುವುದು ವಾಡಿಕೆಯಾ ಗಿತ್ತು. ಆದರೆ, ಅದೇ ಶಾಸನದಲ್ಲಿ ತಾನು ಸಾಧುವೆಂದು ಪರಿಗಣಿಸಿ ಸಮ್ಮತಿ ಇತ್ತಿರುವ ಇತರ ರೀತಿಯ ಸಮಾಜಗಳೂ ಇವೆ ಎಂದು ಅಶೋಕನು ಹೇಳಿರುವನು. ಸರಸ್ವತೀ ದೇವಾಲಯಗಳಲ್ಲಿ ನಡೆಯುವ ಹಲವು ಸಮಾಜ ಗಳನ್ನು ಕುರಿತು ವಾತ್ಸ್ಯಾಯನನ ಕಾಮಸೂತ್ರದಲ್ಲಿ ಹೇಳಿದೆ. ಬಹುಶಃ ಅಂತಹ ಸುಸಂಸ್ಕೃತ ಸಮಾಜಗಳನ್ನು ಅಶೋಕನು ಪ್ರೋತ್ಸಾಹಿಸಿರಬಹುದು.

ಪರಧರ್ಮಗಳ ವಿಷಯದಲ್ಲಿ ಅಶೋಕನು ತನ್ನ ಪ್ರಜೆಗಳಿಗೆ ಕೊಟ್ಟಿರುವ ಉಪದೇಶ ಆಗಿನ ಕಾಲದವರಿಗೆ ಹೊಸತೆನಿಸಿರಲಾರದು. ಆದರೆ ಈಗಿನ ಕಾಲ ದವರಿಗೆ ಅದು ತೀರ ಹೊಸತೆಂದೇ ಹೇಳಬೇಕು. ಭಾರತ ವರ್ಷದ ಇಂದಿನ ಪರಿಸ್ಥಿತಿಯಲ್ಲಿ ಅಶೋಕನ ಉಪದೇಶವೇ ನಮಗೆ ಸಿದ್ಧೌಷಧ. ನಮ್ಮ ದೇಶದ ವಿವಿಧ ಜನಾಂಗಗಳು ಮೈತ್ರಿಯಿಂದ ಬದುಕಲು ಅದೊಂದೇ ದಾರಿ. ಭಾರತ ವರ್ಷಕ್ಕೆ ಮಾತ್ರವೇ ಅಲ್ಲ, ಪ್ರಪಂಚದ ಎಲ್ಲಾ ಮತೀಯರಿಗೂ

ಪಂಗಡದವರಿಗೂ ಅವನ ಮಾತುಗಳು ಮಹದುಪಕಾರ ಮಾಡುತ್ತವೆ. ಪರಮತ ಸಹಿಷ್ಣುತೆ ಎಂಬುದು ಅಷ್ಟು ಪ್ರಶಂಸನೀಯವಾದದ್ದಲ್ಲ; ಏಕೆಂದರೆ, ಉಳಿದವರನ್ನು ತುಳಿದುಹಾಕಲು ತ್ರಾಣವಿಲ್ಲದವರು ಶರಣುಹೊಗುವ ಹತ್ತಿರದ ಅಡ್ಡದಾರಿಯೇ ಸಹಿಷ್ಣುತೆಯ ದಾರಿ! ಅದಲ್ಲದೆ ಅವರಿಗೆ ಗತ್ಯಂತರವಿಲ್ಲ; ಅಥವಾ, ತಿರಸ್ಕಾರದಿಂದ ತಾತ್ಸಾರಬುದ್ಧಿ ಉಂಟಾಗಬಹುದು. ನಮ್ಮ ಧರ್ಮಕ್ಕೆ ಧಕ್ಕೆ ಇಲ್ಲದಿದ್ದರೆ ನಾವು ಪರಮತಗಳನ್ನು ಮೂಲೆಮೊರಡುಗಳಲ್ಲಿ ಇರಗೊಡಿಸಬಹುದು. ಪ್ರಪಂಚದ ಎಲ್ಲ ದೇಶಗಳಲ್ಲೂ ಇದುವರೆಗೆ ಜನನಾಯಕರು ಈ ಎರಡು ಕಾರಣಗಳಿಂದ ಪರಮತಸಹಿಷ್ಣುಗಳಾಗಿ ಹೆಸರು ಪಡೆದಿದಾರೆ. ಎಲ್ಲೋ ಕೆಲವರು ಮಹಾತ್ಮರು, ಧರ್ಮದ ತಿರುಳನ್ನು ತಿಳಿದ ಕವಿಗಳು, ಎಲ್ಲ ಮತಗಳೂ ಪೂಜನೀಯವೆಂದು ಮನಗಂಡಿದ್ದಾರೆ. ತಮ್ಮ ಕಣಸನ್ನು ಪ್ರಚಾರಮಾಡಿದಾಗ ಅವರಿಗೆ ಲಭಿಸಿರುವುದು ವಿಷಪಾತ್ರವೇ ಆದರೂ, ಅವರು ಅದನ್ನು ಸಾರದೆ ಬಿಟ್ಟಿಲ್ಲ. ಅಂತಹ ತತ್ವಜ್ಞಾನಿಗಳಲ್ಲಿ ಅಶೋಕನೂ ಒಬ್ಬನು. ಅವನು ಪರಮತ ಪುರಸ್ಕಾರದಲ್ಲಿ ವಿಶೇಷ ಆಸಕ್ತಿಯನ್ನು ತೋರಿಸಿದನು. ಅದಕ್ಕೆ ಬೇಕಾದ ಆಂತರಿಕ ಸಾಮಗ್ರಿಗಳನ್ನು ಅವನಷ್ಟು ಖಚಿತವಾಗಿ ಯಾರೂ ಬೋಧಿಸಿಲ್ಲ.

ಬ್ರಾಹ್ಮಣ ಶ್ರಮಣರ ದರ್ಶನ, ಅವರಿಗೆ ದಾನ, ಅವರ ಶುಶ್ರೂಷೆ ಎಂದು ಮುಂತಾಗಿ ಅಶೋಕನು ಯಾವಾಗಲೂ ವೈದಿಕಮತದ ಬ್ರಾಹ್ಮಣರಿಗೆ ಮೊದಲ ಮನ್ನಣೆಯನ್ನು ಕೊಟ್ಟು ಅನಂತರ ಶ್ರಮಣರ ಮಾತನ್ನೆತ್ತುತ್ತಾನೆ. ಅಲ್ಲದೆ, "ದೇವಾನಾಂಪ್ರಿಯ ಪ್ರಿಯದರ್ಶಿರಾಜನು ಸರ್ವಮತದವರೂ ಸರ್ವತ್ರ ವಾಸಮಾಡಬಹುದೆಂದು ಇಚ್ಛಿಸುತ್ತಾನೆ. ಏಕೆಂದರೆ ಅವರೆಲ್ಲರೂ ಸಂಯಮವನ್ನೂ ಭಾವಶುದ್ಧಿಯನ್ನೂ ಇಚ್ಛಿಸುತ್ತಾರೆ" ಎಂದು ಹೇಳಿ "ದೇವಾನಾಂಪ್ರಿಯ ಪ್ರಿಯದರ್ಶಿರಾಜನು ಎಲ್ಲ ಮತದವರನ್ನೂ—ಸಂನ್ಯಾಸಿಗಳನ್ನೂ ಗೃಹಸ್ಥರನ್ನೂ ವಿವಿಧ ಪೂಜೆಗಳಿಂದ ಪೂಜಿಸುತ್ತಿರುವನು" ಎಂದು ತನ್ನ ಪ್ರಜೆಗಳನ್ನು ಸಮರಸದ ದಾರಿಗೆಳೆದನು. ಕಲಿಂಗಯುದ್ಧದಿಂದ ಅಶೋಕನಿಗಾದ ಮನೋವ್ಯಥೆಯನ್ನು ಈ ಭಾವನೆ ಮತ್ತಷ್ಟು ಹೆಚ್ಚಿಸಿತೆಂದು ಅವನೇ ಒಪ್ಪಿಕೊಳ್ಳುತ್ತಾನೆ. ಹಿರಿಯರ ಶುಶ್ರೂಷೆ, ಮಾತಾಪಿತೃಗಳ ಶುಶ್ರೂಷೆ, ಗುರುಶುಶ್ರೂಷೆ, ಮಿತ್ರರು ಇಷ್ಟರು, ಜ್ಞಾತಿಗಳು ದಾಸರು ಭೃತ್ಯರು ಇವರಲ್ಲಿ ಸಂಪ್ರತಿಪತ್ತಿ ದೃಢಭಕ್ತಿ ಮುಂತಾದವುಗಳಿಂದ ಕೂಡಿ ಅಲ್ಲಿ ವಾಸವಾಗಿದ್ದ ಬ್ರಾಹ್ಮಣರಿಗೆ ಶ್ರಮಣರಿಗೆ ಅನ್ಯಮತದವರಿಗೆ ಅಥವಾ ಗೃಹಸ್ಥರಿಗೆ ಗಾಯ ಸಾವು ನೋವು ನಂಟರಿಷ್ಟರ ಅಗಲಿಕೆ ಇವು ಸಂಭವಿಸುವುದರಿಂದ ದೇವಾನಾಂಪ್ರಿಯನಿಗೆ ಇನ್ನೂ ಹೆಚ್ಚಿನ ವೇದನೆಯುಂಟಾಗಿದೆ" (ಫ. ಶಾ. ೧೩)

ಎಂದು ಹೇಳಿದ ಅಶೋಕನ ಹೃದಯವೈಶಾಲ್ಯವನ್ನು ನಾವು ಎಷ್ಟು ಕೊಂಡಾಡಿದರೂ ಸಾಲದು. ಧರ್ಮಮಹಾಮಾತ್ರರೆಂಬ ಅಧಿಕಾರಿಗಳು ಬೌದ್ಧರು ಬ್ರಾಹ್ಮಣರು ಆಜೀವಿಕರು ನಿರ್ಗ್ರಂಥರು ಮತ್ತು ನಾನಾಮತದವರು ಇವರ ಅನುಗ್ರಹಕ್ಕಾಗಿ ನಿಯಮಿತರಾಗಿದ್ದಾರೆ ಎಂದು ಅಶೋಕನು ಒತ್ತಿ ಹೇಳುತ್ತಾನೆ.

ಮತಗಳ ಸಾರವನ್ನು ಅರಿತು ಅದನ್ನು ವೃದ್ಧಿಪಡಿಸಿಕೊಂಡರೆ ಜೀವನವು ಪ್ರೀತಿರಸದಿಂದ ಸುಖಮಯವಾಗುವುದೆಂಬುದು ಅವನ ಮತ. ಕೇವಲ ದಾನ ಪೂಜೆಗಳಿಂದ ಅವನು ತೃಪ್ತನಾಗಲಿಲ್ಲ. ವಿವಿಧ ಮತೀಯರಲ್ಲಿ ಸಾರವೃದ್ಧಿಯಾಗಬೇಕೆಂದು ಅವನು ಬಯಸಿದನು, ಅದಕ್ಕಾಗಿ ಪ್ರಯತ್ನಪಟ್ಟನು. ಆಯಾ ಮತದ ಕಾರಣಪುರುಷರು ಮುಖ್ಯವೆಂದು ಹೇಳಿರುವ ಮಾನಸಿಕ ಪರಿವರ್ತನೆಯಾಗದಮೇಲೆ ಎಷ್ಟು ದಾನ ದತ್ತಿಗಳನ್ನು ಮಾಡಿದರೇನು? ಕಲ್ಯಾಣಾಗಮಗಳನ್ನು ಕಳೆದುಕೊಂಡಮೇಲೆ ಬಾಹ್ಯಾಡಂಬರಗಳಿಂದೇನು? ಇದಕ್ಕಾಗಿಯೇ ಅಶೋಕನು ನಿಜವಾದ ಮಂಗಲವೇನೆಂಬುದನ್ನು ತಿಳಿಸುತ್ತಾನೆ. "ಬಾಧೆಗಳೊದಗಿದಾಗ ಆವಾಹ ವಿವಾಹಗಳಾದಾಗ ಸಂತಾನಲಾಭವಾದಾಗ ಪ್ರವಾಸ ಹೊರಡುವಾಗ ಮತ್ತು ಇಂತಹ ಸಮಯಗಳಲ್ಲಿ ಜನರು ವಿಧವಿಧವಾದ ಮಂಗಲಗಳನ್ನು ಮಾಡುತ್ತಾರೆ. ಸ್ತ್ರೀಯರಂತೂ—ಪತ್ನಿಯರೂ ಜನನಿಯರೂ—ಅನೇಕರೀತಿಯ ಕ್ಷುದ್ರ ಮತ್ತು ನಿರರ್ಥಕ ಮಂಗಲಗಳನ್ನು ಮಾಡುತ್ತಾರೆ. ಮಂಗಲಗಳನ್ನೇನೋ ಮಾಡತಕ್ಕದ್ದೆ. ಆದರೆ, ಈ ತೆರನ ಮಂಗಲದಿಂದ ಪ್ರಯೋಜನವಿಲ್ಲ" ಎಂದು ಹೇಳುತ್ತಾ ಅಶೋಕನು ಸಾರವಾದ ಧರ್ಮಮಂಗಲಗಳನ್ನು ಮಾಡುವಂತೆ ಪ್ರಜೆಗಳನ್ನು ಪ್ರೇರಿಸುತ್ತಾನೆ. "ದಾಸರು ಭೃತ್ಯರು ಇವರಲ್ಲಿ ಸಂಪ್ರತಿಪತ್ತಿ, ಗುರುಗಳಲ್ಲಿ ಭಕ್ತಿ, ಪ್ರಾಣಿಗಳ ವಿಷಯದಲ್ಲಿ ಸಂಯಮ, ಬ್ರಾಹ್ಮಣ ಶ್ರಮಣರಿಗೆ ದಾನ, ಧರ್ಮಮಂಗಲವೆಂದರೆ ಇವು ಮತ್ತು ಇಂತಹವು" ಎನ್ನುತ್ತಾನೆ. "ಧರ್ಮಾನುಶಾಸನವೇ ಶ್ರೇಷ್ಠವಾದ ಕರ್ಮ" (ಫ. ಶಾ. ೪) ಹಾಗೆಯೇ, ಪಶುಗಳ ಮತ್ತು ಮನುಷ್ಯರ ಸೌಕರ್ಯಕ್ಕಾಗಿ ಸಾಲುಮರಗಳನ್ನು ನೆಡುವುದು, ಅವರ ದಾಹ ಪರಿಹಾರಕ್ಕಾಗಿ ಅರವಟ್ಟಿಗೆಗಳನ್ನಿರಿಸುವುದು, ಇವು ಹೊರಕ್ಕೆ ಕಾಣುವಂತಹ ಧರ್ಮಕಾರ್ಯಗಳಾದರೂ, 'ಇವುಗಳ ಉಪಯೋಗ ಕೇವಲ ಲಘುವಾದದ್ದು.'

ಹಿಂದಿನ ರಾಜರಿಂದಲೂ ನನ್ನಿಂದಲೂ ಸುಖವನ್ನು ಕೊಡುವ ವಿವಿಧ ಕಾರ್ಯಗಳು ನಡೆದು ಲೋಕ ಸುಖವಾಗಿ ಮಾಡಲ್ಪಟ್ಟಿದೆ. ಆದರೆ, ಧರ್ಮದ ಮಾರ್ಗದಲ್ಲಿ ಜನರು ನಡೆಯುವಂತೆ ನಾನು ಹೀಗೆ ಮಾಡಿರುವೆನು' ಎಂದು

ಅಶೋಕನು ಸಾರವೃದ್ಧಿಯ ಕಡೆಗೆ ಜನರ ಗಮನವನ್ನು ಸೆಳೆಯುತ್ತಾನೆ. ಅಲ್ಲದೆ ಪ್ರತಿಯೊಬ್ಬರೂ ಬಹುಶ್ರುತರಾಗಬೇಕೆಂದು ಅಶೋಕನು ಕೇಳಿಕೊಂಡನು. ಮೌಢ್ಯವೇ ದ್ವೇಷಾಸೂಯೆಗಳಿಗೆ ಮೂಲ, ತಪ್ಪು ತಿಳುವಳಿಕೆಗಳಿಂದಲೇ ದ್ವೇಷ ಬೆಳೆಯುವುದು. ಆದ್ದರಿಂದ ಪರಮತಗಳ ತಿಳಿವಳಿಕೆಯೇ ಸೌಹಾರ್ದದ ತಳಹದಿ. ಅಂದರೆ, "ಇತರರ ಧರ್ಮವನ್ನು ಕೇಳಿ ತಿಳಿದರೆ, ಅದರ ಮೇಲಿನ ಗೌರವ ಹೆಚ್ಚಿ ಅದನ್ನು ಶುಶ್ರೂಷಿಸುವುದು ಕೂಡ ಸಾಧ್ಯವಾಗಬಹುದೆಂಬುದು ಅಶೋಕನ ಅನುಭವ.

ಎಲ್ಲಕ್ಕಿಂತ ಮೇಲಾಗಿ ಸರ್ವರಿಗೂ ವಾಚೋಗುಪ್ತಿ ಇರಬೇಕೆಂದು ಅಶೋಕನು ಹಂಬಲಿಸುತ್ತಾನೆ. "ಅಂದರೆ ಆತ್ಮಮತದ ಪೂಜೆಯನ್ನೂ ಪರಮತದ ದೂಷಣೆಯನ್ನೂ ಸರಿಯಾದ ಪ್ರಕರಣವಿಲ್ಲದೆ ಮಾಡಕೂಡದು; ಅಂತಹ ಪ್ರಕರಣ ಬಂದಾಗ ಕೂಡ, ಅದು ಲಘುವಾಗಿಯೇ ಇರಬೇಕು" ಅಂದರೆ, ಅಶೋಕನ ಸಾಮ್ರಾಜ್ಯದಲ್ಲಿ ಪ್ರಜೆಗಳಿಗೆ ವಾಕ್ಸ್ವಾತಂತ್ರ್ಯವಿರಲಿಲ್ಲವೆಂದಲ್ಲ. ಪ್ರಕರಣವರಿತು ಹಿತವಾಗಿ ಮಿತವಾಗಿ ಪರಮತೀಯರನ್ನೂ ಕೆರಳಿಸದೆ ಪ್ರತಿಯೊಬ್ಬರೂ ತಮ್ಮ ಧರ್ಮದ ಹೆಚ್ಚುಗಾರಿಕೆಯನ್ನೂ ಮತ್ತೊಂದರ ದೋಷಗಳನ್ನೂ ವಿಮರ್ಶಿಸಬಹುದಾಗಿತ್ತು. ಪರಮತದವರನ್ನು ಸಹಿಸಿದರೆ ಸಾಲದು. "ಎಲ್ಲಾ ಪ್ರಕರಣಗಳಲ್ಲೂ ಪರಮತದವರನ್ನು ಪೂಜಿಸಲೇಬೇಕು" ಅದೇ ಆದರಣೀಯವಾದ ನಡತೆ. ಏಕೆಂದರೆ "ಹೀಗೆ ಮಾಡಿದರೆ ಆತ್ಮಮತವೂ ವರ್ಧಿಸುತ್ತದೆ; ಪರಮತಕ್ಕೂ ಉಪಕಾರಮಾಡಿದಂತಾಗುತ್ತದೆ, ಅನ್ಯಥಾ ಮಾಡಿದರೆ ಆತ್ಮಮತಕ್ಕೆ ಹಾನಿ, ಪರಮತಕ್ಕೆ ಅಪಕಾರ; ಏಕೆಂದರೆ, ಆತ್ಮಮತವನ್ನು ಹೇಗೆ ಬೆಳಗಿಸಲಿ ಎಂಬ ಆಸೆಯಿಂದ ಯಾವನು ಅದನ್ನು ಪೂಜಿಸುತ್ತಾನೋ ಮತ್ತು ಯಾವನು ಪರಮತವನ್ನು ಹಳಿಯುತ್ತಾನೋ ಅವನು ಅಂತಹ ವರ್ತನೆಯಿಂದ ತನ್ನ ಮತಕ್ಕೇ ಹೆಚ್ಚು ಹಾನಿಯನ್ನುಂಟು ಮಾಡುತ್ತಾನೆ" ಎಂಬ ಅಶೋಕನ ಮಾತುಗಳು ಸುವರ್ಣಾಕ್ಷರಗಳಲ್ಲಿ ಬರೆದಿಡಲರ್ಹವಾದವುಗಳು. ಪರಮತ ದೂಷಣೆಯಿಂದ ಸ್ವಮತಕ್ಕೆ ಹಾನಿಯೆಂಬುದು ಆಧ್ಯಾತ್ಮಿಕ ದೃಷ್ಟಿಯಿಂದ ನಿಜವಾದರೂ ಅದನ್ನು ಮನಗಂಡು ಇಷ್ಟು ಸ್ಪಷ್ಟವಾಗಿ ಯಾರೂ ಅದುವರೆಗೆ ಹೇಳಿರಲಿಲ್ಲ. ಪರಮತಗಳೆಲ್ಲವೂ ಸುಳ್ಳು ಎಂಬ ಅಸ್ತಿಭಾರದಮೇಲೆಯೇ ಅನೇಕ ಹೊಸಮತಗಳು ಹುಟ್ಟಿಕೊಂಡಿರುವಾಗ, ಆಗಿನ ಭಾರತವರ್ಷದಲ್ಲಿ ವಿವಿಧ ಮತದವರಿಗೆ ಒಳಜಗಳ ವಿಪರೀತವಾಗಿದ್ದಾಗ, ಅಶೋಕನ ಈ ಉಪದೇಶ ಎಷ್ಟು ಕ್ರಾಂತಿಕಾರಕವೋ ಅಷ್ಟೇ ಅವಶ್ಯವೆಂಬುದನ್ನು ಮಾತ್ರ ನಾವು ಮರೆಯಲಾವುದಿಲ್ಲ.

ಎಲ್ಲ ಮತಸ್ಥರ ಉದ್ಧಾರಕ್ಕೂ ಬೇಕಾದ ಕೆಲವು ಮುಖ್ಯ ಗುಣಗಳನ್ನು ಅಶೋಕನ ಮಾತಿನಿಂದಲೇ ನಾವು ತಿಳಿದುಕೊಳ್ಳಬಹುದು: " ವಿಪುಲವಾಗಿ ದಾನಮಾಡಿದರೂ ಕೂಡ ಸಂಯಮ ಭಾವಶುದ್ಧಿ ಕೃತಜ್ಞತೆ ದೃಢಭಕ್ತಿ ಇವು ಇಲ್ಲದಿದ್ದರೆ ನೀಚನೇ ಸರಿ." "ದಯಾ ದಾನ ಸತ್ಯ ಶೌಚ ಮಾರ್ದವ ಸಾಧುತೆ ಇವುಗಳಿಂದ ಲೋಕ ಅಭಿವೃದ್ಧಿಹೊಂದುತ್ತದೆ. ಮೇಲ್ತರದ ಧರ್ಮಕಾಮ, ಮೇಲ್ತರದ ಪರೀಕ್ಷೆ, ಮೇಲ್ತರದ ಶುಶ್ರೂಷೆ ಮೇಲ್ತರದ ಭಯ, ಮೇಲ್ತರದ ಉತ್ಸಾಹ, ಇವುಗಳಿಂದಲ್ಲದೆ ಇಹವನ್ನೂ ಪರವನ್ನೂ ಹೊಂದುವುದು ಕಷ್ಟ" "ಧರ್ಮಕಾಮಿಗಳು ಇತರರನ್ನು ಸದಾ ಎಚ್ಚರಿಸಿ ಅವರನ್ನೂ ಧರ್ಮಮಾರ್ಗದಲ್ಲೇ ನಡಸಬೇಕು." ಏಕೆಂದರೆ, "ಪಾಪಮಾಡುವುದು ಬಹು ಸುಲಭ," "ಕಲ್ಯಾಣವನ್ನು ಮಾಡುವವನು ಕಷ್ಟವಾದದ್ದನ್ನೇ ಮಾಡುತ್ತಾನೆ." ಆದ್ದರಿಂದ "ಮಿತ್ರರಾಗಲಿ ಇಷ್ಟರಾಗಲಿ ಜ್ಞಾತಿಗಳಾಗಲಿ ಪರಿಚಿತರಾಗಲಿ ಆಯಾ ಪ್ರಕರಣಗಳಲ್ಲಿ ಹೀಗೆ ಎಚ್ಚರಿಸತಕ್ಕದ್ದು: ಇದು ಮಾಡತಕ್ಕದ್ದು; ಇದು ಸಾಧುವಾದದ್ದು; ಇದರಿಂದ ಸ್ವರ್ಗವನ್ನು ಪಡೆಯಬಹುದು" "ತಂದೆ, ಮಗ ಸಹೋದರ ಸ್ವಾಮಿ ಮಿತ್ರ ನೆರೆಯವನು ಎಲ್ಲರೂ ಹೀಗೆ ಎಚ್ಚರಿಸತಕ್ಕದ್ದು: ಇದು ಸಾಧುವಾದದ್ದು. ಅರ್ಥಲಾಭವಾಗುವವರೆಗೂ ಈ ಮಂಗಲವನ್ನು ಮಾಡು" "ತಂದೆ, ಮಗ, ಸಹೋದರ ಸ್ವಾಮಿ ಮಿತ್ರ ಇಷ್ಟ ಜ್ಞಾತಿ ಇವರು ಹೀಗೆ ತಿಳಿಸತಕ್ಕದ್ದು: ಇದು ಸಾಧುವಾದದ್ದು, ಇದನ್ನು ಮಾಡಬೇಕು. ಹೀಗೆ ಮಾಡಿದರೆ, ಈ ಧರ್ಮದಾನದಿಂದ ಇಹಲೋಕವನ್ನು ಪಡೆಯುತ್ತಾನೆ. ಪರದಲ್ಲೂ ಅನಂತವಾದ ಪುಣ್ಯವುಂಟಾಗುತ್ತದೆ" (ಫ. ಶಾ. ೧೧).

ಅನೇಕ ಶಾಸನಗಳಲ್ಲಿ ಅಶೋಕನು ತನ್ನ ಧರ್ಮಾಭಿಲಾಷೆಯನ್ನು ಸೂಚಿಸಿದ್ದಾನೆ. ತನ್ನ ಪುತ್ರಪೌತ್ರರನ್ನೂ ಪ್ರಜೆಗಳನ್ನೂ ಎಚ್ಚರಿಸಿ ತಿದ್ದುವುದಕ್ಕಾಗಿಯೇ ಅವನು ಸಾಮ್ರಾಜ್ಯದ ನಾನಾಕಡೆಗಳಿಗೆ ಲಿಪಿಕಾರರನ್ನು ಕಳುಹಿಸಿ ಅವುಗಳನ್ನು ಬರಸಿದ್ದು. "ಇದಕ್ಕಾಗಿಯೇ ಈ ಧರ್ಮಲಿಪಿಯನ್ನು ಬರಸಲಾಯಿತು; ಜನರು ಇದನ್ನನುಸರಿಸಲಿ ಎಂದು, ಇದು ಚಿರಸ್ಥಾಯಿಯಾಗಿರಲಿ ಎಂದು. ಇದನ್ನನುಸರಿಸುವವರು ಸುಕೃತಮಾಡುತ್ತಾರೆ" "ಬಹುಕಾಲದವರೆಗಿನ ರಾಜರಿಗೆ ಧರ್ಮವೃದ್ಧಿಯಿಂದ ಜನರನ್ನು ಅಭಿವೃದ್ಧಿಗೊಳಿಸಬೇಕೆಂಬ ಇಚ್ಛೆಯಿದ್ದರೂ ಅದಕ್ಕನುರೂಪವಾದ ಧರ್ಮವೃದ್ಧಿಯನ್ನು ಪಡೆದು, ಏಕೆ ಜನರು ಅಭಿವೃದ್ಧಿಯಾಗಲಿಲ್ಲ? ಧರ್ಮಬುದ್ಧಿಯಿಂದ ಅವರನ್ನು ಹೇಗೆ ಉದ್ಧರಿಸುವುದು? . . . ನನಗೆ ಹೀಗೆ ಅನ್ನಿಸಿತು: ಧರ್ಮ ಶ್ರವಣಗಳನ್ನು ಶ್ರವಣ

ಮಾಡಿಸುತ್ತೇನೆ; ಧರ್ಮಾನುಶಾಸ್ತಿಗಳನ್ನು ಅನುಶಾಸನವಮಾಡಿಸುತ್ತೇನೆ. ಜನರು ಇವುಗಳನ್ನು ಕೇಳಿ ಉದ್ಧಾರವಾಗುತ್ತಾರೆ" ಹೀಗೆ ಪ್ರತಿಯೊಬ್ಬರಲ್ಲೂ ಒಂದು ಹೊಸ ಆಸಕ್ತಿಯನ್ನುಂಟುಮಾಡಬೇಕೆಂಬುದೇ ಅಶೋಕನ ಧ್ಯೇಯ ವಾಗಿತ್ತು.

ಆತ್ಮಪರೀಕ್ಷೆಯಿಂದ ಮಾನವನು ಪರಿಶುದ್ಧನಾಗಬಹುದೆಂಬುದಕ್ಕೆ ಅಶೋಕನೇ ಸಾಕ್ಷಿ. ಕಲಿಂಗ ದೇಶವನ್ನು ವಶಮಾಡಿಕೊಂಡಮೇಲೆ ಆ ಯುದ್ಧದ ವಿಷಯದಲ್ಲಿ ಅವನು ನಡಸಿದ ಧೀರಪರೀಕ್ಷೆ ಹನ್ನೆರಡನೆಯ ಶಿಲಾಶಾಸನದಲ್ಲಿ ಇಂದಿಗೂ ಅಚ್ಚಳಿಯದೆ ವಿವರವಾಗಿದೆ. ಅನೇಕ ಶತಮಾನಗಳ ಆಚೆಯಿಂದ ಪ್ರತಿಧ್ವನಿತವಾಗಿದ್ದರೂ ನಮ್ಮ ಮನಸ್ಸನ್ನು ಇಂದಿಗೂ ಕರಗಿಸುತ್ತಿದೆ. ತನ್ನಂತೆಯೇ ತನ್ನ ಪ್ರಜೆಗಳೂ ಆತ್ಮಪರೀಕ್ಷೆ ನಡಸಿ ಅಂತರಂಗವನ್ನು ಪುಟವಿಡಲು ಅಶೋಕನು ಪ್ರೋತ್ಸಾಹಿಸುತ್ತಾನೆ. "ಇದನ್ನು ಮನಸ್ಸಿಟ್ಟು ಗಮನಿಸಬೇಕಾಗಿದೆ: ಇದು ನನಗೆಇಹಲೋಕಕ್ಕಾಗಿ; ಇದು ನನಗೆ ಪರಲೋಕಕ್ಕಾಗಿ." "ಈ ಕಲ್ಯಾಣ ನನ್ನಿಂದ ಮಾಡಲಾಯಿತು ಎಂದು ಜನರು ತಾವು ಮಾಡಿರುವ ಕಲ್ಯಾಣವನ್ನೇ ಗಮನಿಸುತ್ತಾರೆ. ಈ ಪಾಪ ನನ್ನಿಂದ ಮಾಡಲಾಯಿತು, ಇದಕ್ಕೆ ಆಸ್ರವ ಎಂದು ಹೆಸರು, ಎಂದು ಜನರು ಪಾಪವನ್ನು ಗಮನಿಸುವುದಿಲ್ಲ. ಹೀಗೆ ಗಮನಿಸುವುದು ಕಷ್ಟ" ಎಂದು ಮನಮರುಗಿ ಅಶೋಕನು ಪ್ರಜೆಗಳಿಗೆ ಬುದ್ಧಿವಾದ ಹೇಳುತ್ತಾನೆ. "ಚಂಡಿತನ ನಿಷ್ಠುರ ಕ್ರೋಧ ಮಾನ ಈರ್ಷ್ಯೆ ಇವು ಆಸ್ರವಗಳು. ಇವುಗಳಿಂದ ನಾನು ಹಾಳಾಗದಿರಲಿ" ಎಂದು ಎಲ್ಲರೂ ಸದಾ ಜಾಗೂಕರಾಗಿರಬೇಕೆಂದು ಅಶೋಕನು ಉಪದೇಶಿಸುತ್ತಾನೆ.

ಮೇಲ್ತರದ ಶುಶ್ರೂಷೆ ಎಂದರೇನೆಂಬುದನ್ನು ಅನೇಕ ಶಾಸನಗಳಲ್ಲಿ ಅಶೋಕನು ವಿಸ್ತಾರವಾಗಿ ತಿಳಿಸಿರುವನು. ಮಾತೃಶುಶ್ರೂಷೆ, ಪಿತೃಶುಶ್ರೂಷೆ, ಹಿರಿಯರ ಶುಶ್ರೂಷೆ, ಗುರು ಶುಶ್ರೂಷೆ ಇತರ ಧರ್ಮಗಳ ಶುಶ್ರೂಷೆ ಇವೇ ಮುಖ್ಯವೆಂಬುದು ಮತ. ಇದಕ್ಕಾಗಿಯೇ ಕೇವಲ ಹಿಂಸಾತ್ಮಕವಾದ ಮೃಗಯಾವಿಹಾರವನ್ನು ತಿರಸ್ಕರಿಸಿ, ಧರ್ಮಯಾತ್ರೆಗಳನ್ನು ಅಶೋಕನು ಮೊದಲು ಮಾಡಿದ್ದು. ಧರ್ಮಯಾತ್ರೆಗಳಲ್ಲಿ "ಬ್ರಾಹ್ಮಣಶ್ರಮಣರ ದರ್ಶನ, ಅವರಿಗೆ ದಾನ; ಹಿರಿಯರ ದರ್ಶನ, ಅವರಿಗೆ ಹಿರಣ್ಯದಾನ; ಜನಪದದ ಮತ್ತು ಜನರ ದರ್ಶನ, ಅವರಿಗೆ ಧರ್ಮಾನುಶಾಸ್ತಿ; ಅವರೊಂದಿಗೆ ಧರ್ಮವಿಷಯದ ಚರ್ಚೆ" ಇವು ನಡೆಯುತ್ತಿದ್ದುವು. ಮಿತ್ರರಿಗೂ ಇಷ್ಟರಿಗೂ ನಂಟರಿಗೂ ಪ್ರೀತಿಯನ್ನು ತೋರಿಸಬೇಕೆಂದೂ, ಅವರಿಗೆ ಕಷ್ಟಬಂದಾಗ ಅದನ್ನು ಪರಿಹರಿಸಬೇಕೆಂದೂ ದಾಸರನ್ನೂ ಭೃತ್ಯರನ್ನೂ ವಿಶ್ವಾಸದಿಂದ ಕಾಣಬೇಕೆಂದೂ ಅಶೋ

ಕನು ಪದೇ ಪದೇ ಹೇಳುವನು. "ನಾನು ನನ್ನ ಜ್ಞಾತಿಗಳನ್ನು ಮಾತ್ರವೇ ಅಲ್ಲ. ಹತ್ತಿರದವರನ್ನೂ ದೂರದವರನ್ನೂ ಸುಖದ ಕಡೆಗೆ ನಡಸುತ್ತಿದ್ದೇನೆ" ಎಂದು ತನ್ನ ಉದಾಹರಣೆಯನ್ನು ಪ್ರಜೆಗಳ ಮುಂದಿಡುತ್ತಾನೆ.

ಮೇಲ್ತರದ ಭಯವೆಂದರೆ, ಅಶೋಕನ ಅಭಿಪ್ರಾಯದಲ್ಲಿ ಪಾಪಭೀತಿ ಎಂಬ ಅರ್ಥವಿದ್ದಂತೆ ತೋರುತ್ತದೆ. ಯುದ್ಧದಲ್ಲಾಗುವ ಪಾಪಕ್ಕೆ ಹೆದರಿ ಯುದ್ಧವನ್ನೇ ತ್ಯಜಿಸಿದ ಧರ್ಮವೀರನವನು.ತನ್ನ ಅಧಿಕಾರಿಗಳನ್ನು ಸಂಬೋಧಿಸಿ ಅಶೋಕನು 'ಅಸೂಯೆ, ಆಶುಕೋಪ ನಿಷ್ಠುರ ಅವಸರ ಅನಭ್ಯಾಸ ಸೋಮಾರಿತನ ಅಲಸಿಕೆ ಮಂಕುತನ ಇಂತಹ ಸ್ವಭಾವಗಳು ಬೆಳೆಯದಿರಲಿ ಎಂದು ನೀವು ಇಚ್ಛಿಸ ಬೇಕು' ಎಂದು ಹೇಳುತ್ತಾನೆ. ಅಲ್ಲದೆ, ನಡತೆಯಲ್ಲಿ ಜಾರುವುದು ಸುಲಭ ವಾದುದರಿಂದ ತನ್ನ ಬುದ್ಧಿವಾದವನ್ನು ಆಗಾಗ ಅಧಿಕಾರಿಗಳು ಮನನಮಾಡು ವಂತೆ "ಈ ಲಿಪಿಯನ್ನು ಚಾತುರ್ಮಾಸ್ಯದಲ್ಲಿ ತಿಷ್ಯನಕ್ಷತ್ರದ ದಿನ ಕೇಳ ತಕ್ಕದ್ದು. ತಿಷ್ಯನಕ್ಷತ್ರಗಳ ನಡುವೆಯೂ ಇಷ್ಟಪಟ್ಟರೆ ಒಬ್ಬೊಬ್ಬರಾಗಿ ಓದಿಸಿ ಕೇಳಬಹುದು. ಹೀಗೆ ಮಾಡಿದರೆ ಇದರಲ್ಲಿ ಸಂಪ್ರತಿಪತ್ತಿ ಸಾಧ್ಯ" ಎನ್ನುತ್ತಾನೆ.

ಧರ್ಮಸಾಧನೆಯಲ್ಲಿ ಅತ್ಯಾವಶ್ಯಕವಾದ ಮೇಲ್ತರದ 'ಉತ್ಸಾಹ'ಕ್ಕೆ ಅಶೋಕನು 'ಪರಾಕ್ರಮ'ವೆನ್ನುತ್ತಾನೆ. ಇದನ್ನು ಕೊಂಡಾಡುವಾಗಲೂ ಅವನು ತನ್ನ ಉದಾಹರಣೆಯನ್ನೇ ಜನರ ಮುಂದಿಡುತ್ತಾನೆ. ಎರಡು ವರ್ಷ ಗಳಿಗಿಂತ ಹೆಚ್ಚುಕಾಲ ಉಪಾಸಕನಾಗಿದ್ದರೂ ಕೂಡ ಆಧ್ಯಾತ್ಮಿಕ ಪ್ರಗತಿ ಗಾಗಿ ಏನೂ ಪ್ರಯತ್ನಮಾಡಲಿಲ್ಲವೆಂದೂ "ಆದರೆ ಈಗ ಒಂದು ಸಂವತ್ಸರಕ್ಕಿಂತ ಹೆಚ್ಚುಕಾಲ ಸಂಘವನ್ನು ಪ್ರವೇಶಿಸಿ ಚೆನ್ನಾಗಿ ಪ್ರಯತ್ನಿ ಸಿದ್ದರಿಂದ" ಜಂಬೂದ್ವೀಪದಲ್ಲೆಲ್ಲಾ ಧರ್ಮವಿಜಯವಾಯಿತೆಂದೂ ಹೇಳಿ, ಇವೆಲ್ಲದರ ಮೂಲಕಾರಣವನ್ನು ಒಂದೇ ಒಂದು ಮಾತಿನಲ್ಲಿ ಅಶೋಕನು ಗುರುತಿಸುತ್ತಾನೆ: "ಪರಾಕ್ರಮದ ಫಲವಿದು." ಇದನ್ನು ಕೇಳಿದ ಪ್ರಜೆಗಳು ಮಹಾರಾಜರಿಗೆ ಸಾಧ್ಯವಾದದ್ದು ತಮಗೆ ಹೇಗೆ ಸಾಧ್ಯ' ಎಂದು ಕೈಕಟ್ಟಿ ಕುಳಿತಿರದೆ ಪರಾಕ್ರಮ ತಾಳಲು "ಹೀಗೆ ಮಾಡುವುದು ಮಹಾತ್ಮರಿಗೆ ಮಾತ್ರ ಸಾಧ್ಯವೆಂದು ತಿಳಿಯಬೇಡಿ. ಕ್ಷುದ್ರ ಜನರೂ ಕೂಡ ಪರಾಕ್ರಮದಿಂದ ವಿಪುಲವಾದ ಸ್ವರ್ಗವನ್ನು ಪಡೆಯಬಹುದು. ನನ್ನ ಪುತ್ರರೂ ಪ್ರಪೌತ್ರರೂ ಸರ್ವಲೋಕಹಿತಕ್ಕಾಗಿ ಪರಾಕ್ರಮಮಾಡಲಿ; ವಿಶೇಷ ಪರಾಕ್ರಮದಿಂದಲ್ಲದೆ ಇದನ್ನು ಸಾಧಿಸುವುದು ಕಷ್ಟ" ಎನ್ನುತ್ತಾನೆ. ಹಾಗೆಯೇ "ಸರ್ವಲೋಕ ಹಿತವೇ ನನ್ನ ಕರ್ತವ್ಯ. ಅದನ್ನು ಸಾಧಿಸಲು ಮುಖ್ಯವಾದುದೇನೆಂದರ

ಎಚ್ಚರಿಕೆಯಾಗಿರುವುದು ಮತ್ತು ಕಾರ್ಯಸಾಧನೆಯಾಗುವತನಕ ಪ್ರಯತ್ನ ಮಾಡುವುದು " ಎಂದು ಬೇರೊಂದು ಶಾಸನದಲ್ಲಿ ಹೇಳುತ್ತಾನೆ. ಧರ್ಮಾಚರಣೆಯಲ್ಲಿ ಮಾತ್ರ ವೃದ್ಧಿಯಾಗದಿದ್ದರೂ ಚಿಂತೆಯಿಲ್ಲ. ಕ್ಷಯ ಹೊಂದದಿರುವುದೆ ಮೇಲು ಎಂದು ಹೇಳಿ ಅದರ ತೊಡಕುಗಳ ಕಡೆ ನಮ್ಮ ದೃಷ್ಟಿಯನ್ನು ಸೆಳೆಯುತ್ತಾನೆ. "ವೃದ್ಧಿಯಾಗುವಂತೆ ಅವರು ಯೋಚಿಸಲಿ ; ಕ್ಷಯ ಮಾತ್ರ ಕಂಡುಬರದಿರಲಿ " ಎಂದು ಆಶಿಸುತ್ತಾನೆ.

ಪರಲೋಕ ಎಂಬುದೊಂದಿದೆಯೆಂದೂ ಪುಣ್ಯಕೆಲಸಗಳಿಂದಲೂ ಧರ್ಮಜೀವನದಿಂದಲೂ ಸ್ವರ್ಗಸುಖವನ್ನು ಸಾಧಿಸಬಹುದೆಂದೂ ಅಶೋಕನು ಪದೇ ಪದೇ ಹೇಳುವನು. "ಸ್ವರ್ಗವನ್ನು ಪಡೆಯುವುದಕ್ಕಿಂತ ಮೇಲಾದ ಕರ್ತವ್ಯ ಯಾವುದು ?" ಎಂದು ಕೇಳುತ್ತ "ನಾನು ಕಿಂಚಿತ್ತಾದರೂ ಪರಾಕ್ರಮ ಮಾಡುತ್ತಿದ್ದರೆ ಅದು ಇದಕ್ಕಾಗಿ . . . ಪರದಲ್ಲಿ ಜೀವಿಗಳು ಸ್ವರ್ಗವನ್ನು ಪಡೆಯುವ ಸಲುವಾಗಿ," ಎಂದು ತನ್ನ ಜೀವನದ ಆದರ್ಶವನ್ನು ಸಾರಿದ್ದಾನೆ. "ಪ್ರಿಯದರ್ಶಿ ರಾಜನು ಮಾಡುವ ಅಲ್ಪಸ್ವಲ್ಪ ಪರಾಕ್ರಮವೆಲ್ಲವೂ ಪರಕ್ಕೋಸ್ಕರವಾಗಿ " ಎನ್ನುತ್ತಾನೆ. ಅಧಿಕಾರಿಗಳನ್ನೂ ಕೂಡ "ಹೀಗೆ ಮಾಡಿದರೆ ನೀವು ಸ್ವರ್ಗವನ್ನು ಪಡೆಯಬಹುದು " ಎಂದು ಹುರಿದುಂಬಿಸುತ್ತಾನೆ. ಆದರೆ, ಪರ ಒಂದನ್ನೇ ಸಾಧಿಸಲು ಜೀವನವನ್ನೆಲ್ಲಾ ಮೀಸಲಾಗಿಟ್ಟು ಇಹವನ್ನು ಕಳೆದುಕೊಳ್ಳಬೇಕೆಂದು ಅಶೋಕನು ಹೇಳಿಲ್ಲ. "ಅವರು ಧರ್ಮರತಿಯನ್ನೇ ಬೆಳಸಲಿ. ಇಹಲೋಕಕ್ಕೂ ಪರಲೋಕಕ್ಕೂ ಅದೇ ; " . . "ಇಹಲೋಕವನ್ನು ಪಡೆಯುತ್ತಾನೆ, ಪರದಲ್ಲೂ ಅನಂತವಾದ ಪುಣ್ಯವುಂಟಾಗುತ್ತದೆ ;" ಹೀಗೆ ಉತ್ತೇಜನ ಕೊಡುತ್ತಾ ಎರಡನ್ನೂ ಪಡೆದುಕೊಳ್ಳುವ ಉಪಾಯವನ್ನೇ ಅಶೋಕನು ಬೋಧಿಸುತ್ತಾನೆ.

ಪುಣ್ಯ ಕೆಲಸಗಳನ್ನು ಮಾಡಿ ಧರ್ಮದ ದಾರಿಯಲ್ಲಿಯೇ ನಡೆದವರು ಬೌದ್ಧ ಮತದಲ್ಲಿ ಹೇಳುವಂತೆ ಪರದಲ್ಲಿ ದೇವತೆಗಳಾಗಬಹುದು. ಅವರಿಗೆ ಸ್ವರ್ಗದಲ್ಲಿನ ವಿಮಾನವೂ ಐರಾವತವೂ ಸಿಕ್ಕುವುದು. ಅವರ ದಿವ್ಯ ದೇಹ ಜ್ಯೋತಿರ್ಮಯವಾಗುವುದು. ಸಾಮಾನ್ಯ ಜನರಲ್ಲಿ ಈ ವಿಧವಾದ ಸ್ವರ್ಗ ಸುಖಗಳ ಹಂಬಲ ಹೆಚ್ಚಿ ಅವರು ಧರ್ಮಪ್ರೇಮಿಗಳಾಗುವಂತೆ ಅಶೋಕನು ಪ್ರಯತ್ನಿಸಿದನು. "ಈಗ ದೇವಾನಾಂಪ್ರಿಯ ಪ್ರಿಯದರ್ಶಿರಾಜನ ಧರ್ಮಾಚರಣೆಯ ಫಲವಾಗಿ ಭೇರೀಘೋಷ ನಿಂತು ಧರ್ಮಘೋಷ ಕೇಳಿಸುತ್ತಿದೆ. ವಿಮಾನ ದರ್ಶನ, ಹಸ್ತಿದರ್ಶನ, ಅಗ್ನಿಸ್ಕಂಧ ಮೊದಲಾದ ದಿವ್ಯರೂಪಗಳ ದರ್ಶನ ಇವು ಈಗ ಜನರಿಗಾಗುತ್ತಿವೆ " ಎಂದು ಹೇಳಿ ಬೌದ್ಧಪುರಾಣಗಳಲ್ಲಿ ಹೇಳಿರುವಂತೆ

ಪರದಲ್ಲಿ ಸಿಕ್ಕುನ ದೇವತ್ವದ ಸವಿಯನ್ನು ಇಹದಲ್ಲೇ ಜನರಿಗೆ ತೋರಿಸಿ ಅವರ ಧರ್ಮ ಪಿಪಾಸೆಯನ್ನು ಹೆಚ್ಚಿಸಲು ಅಶೋಕನು ಪ್ರಯತ್ನಿಸುತ್ತಾನೆ.

ಆದರೆ ಭಾಬ್ರು ಶಾಸನದಲ್ಲಿ ಭಿಕ್ಷುಗಳಿಗಾಗಿಯೇ ಮಾಡಿದ ಉಪದೇಶದಲ್ಲಿ ಸ್ವರ್ಗ, ಪರಲೋಕ, ವಿಮಾನ ಮುಂತಾದವುಗಳ ಪ್ರಸ್ತಾಪವೇ ಇಲ್ಲ. ಹಾಗೆಯೇ ಸಾಮಾನ್ಯಜನರಿಗೆ ಇತರ ಶಾಸನಗಳ ಮೂಲಕ ಮಾಡಿರುವ ಧರ್ಮಬೋಧೆಯಲ್ಲಿ ನಿರ್ವಾಣ ಚತುಸ್ಸತ್ಯ, ರತ್ನತ್ರಯ, ಅಷ್ಟಾಂಗಿಕಮಾರ್ಗ ಮೊದಲಾದ ಪದಗಳ ಪ್ರಯೋಗವೇ ಇಲ್ಲ. ಇದಕ್ಕೆ ಕಾರಣವೇನೆಂದರೆ ತಮ್ಮ ಸಾಮ್ರಾಜ್ಯದ ಪ್ರಜೆಗಳ ಬಹುಭಾಗವಾದ ಗೃಹಸ್ಥರಿಗಾಗಿ ಅವನು ಧರ್ಮ ಲಿಪಿಗಳನ್ನು ಬರೆಸಿದ್ದನಾದ್ದರಿಂದ ಬೌದ್ಧಮತದ ಪ್ರಕಾರ ಗೃಹಸ್ಥರು ಯಾವ ಯಾವ ರೀತಿ ನಡೆದುಕೊಳ್ಳಬೇಕೆಂಬುದನ್ನು ಅವನು ಗಮನದಲ್ಲಿಟ್ಟಿರಬೇಕು. ದೀರ್ಘನಿಕಾಯದಲ್ಲಿನ ಶೃಗಾಲೋವಾದ ಸೂತ್ರ ಎಂಬುದನ್ನು ಗೃಹೀವಿನಯ ಎಂದು ಬೌದ್ಧರು ಕೊಂಡಾಡುತ್ತಾರೆ. ಗೃಹಸ್ಥರೆಲ್ಲರೂ ಅದನ್ನೇ ಓದಿ ಕೇಳಿ ಮನನಮಾಡಿ ಅದರಂತೆಯೇ ಆಚರಿಸಬೇಕೆಂಬುದು ಅವರ ಮತ. ಭಿಕ್ಷುಗಳಿಗೆ ವಿನಯಪಿಟಕ ಹೇಗೋ ಈ ಸೂತ್ರ ಗೃಹಸ್ಥರಿಗೆ ಹಾಗೆ. "ಗೃಹಸ್ಥ ಧರ್ಮ ವನ್ನು ನಿವಾರಿಸುವಾಗ ಈ ಸೂತ್ರ ಒಂದನ್ನು ಹೇಳಿದರೆ ಸಾಕು" ಎಂದು ಬುದ್ಧಘೋಷನೇ ಹೇಳುತ್ತಾನೆ. ಈ ಸೂತ್ರದಲ್ಲಿ ಭಗವಾನ್ ಬುದ್ಧನು ಶೃಗಾಲ ಎಂಬುವನಿಗೆ ದಿಕ್ಕುಗಳ ಆರಾಧನೆಯನ್ನು ಹೇಗೆ ಮಾಡಬೇಕೆಂದು ಉಪದೇಶ ಮಾಡುತ್ತಾನೆ. ತಂದೆಯ ಆಜ್ಞೆಯಂತೆ ಯುವಕ ಶೃಗಾಲನು ಮುಂಜಾನೆಯೇ ಎದ್ದು ಸ್ನಾನ ಮುಗಿಸಿ ಆರು ದಿಕ್ಕುಗಳಿಗೂ ಕೈಮುಗಿಯುತ್ತಿದ್ದನು. ಇದನ್ನು ಕಂಡ ಭಗವಾನನು ಆರ್ಯಧರ್ಮದ ಪ್ರಕಾರ ಅವುಗಳನ್ನು ಆರಾಧಿಸುವ ರೀತಿಯೇ ಬೇರೆ ಎಂದು ತಿಳಿಸಿದನು. ಪೂರ್ವ ದಿಕ್ಕೆಂದರೆ ತಾಯಿತಂದೆಯರು, ದಕ್ಷಿಣದಲ್ಲಿ ಗುರುಗಳು ಪಶ್ಚಿಮದಲ್ಲಿ ಪತ್ನೀ ಪುತ್ರರು ಉತ್ತರವೆಂದರೆ ಮಿತ್ರರು, ಕೆಳಗೆ ದಾಸರು, ಭೃತ್ಯರು; ಮೇಲೆ ಬ್ರಾಹ್ಮಣರು ಶ್ರಮಣರು ಹೀಗೆ ಆ ಆರಾಧನೆಗೆ ಒಂದು ಹೊಸ ಅರ್ಥವನ್ನು ಕೊಟ್ಟು ಪ್ರತಿ ಯೊಬ್ಬರನ್ನೂ ಹೇಗೆ ಶುಶ್ರೂಷಿಸುವುದೆಂದು ಆ ಸೂತ್ರದಲ್ಲಿ ವಿವರವಾಗಿ ಹೇಳಿದೆ. "ಇದೇ ವಿಷಯವನ್ನೇ ಜೈನರೂ ಆಜೀವಿಕರೂ ಇತರರೂ ಹೇಳಿಲ್ಲ ವೆಂದಲ್ಲ. ಆದರೆ ಒಂದೇ ಸೂತ್ರದಲ್ಲಿ ಇಷ್ಟು ಅಡಕವಾಗಿ ಇಷ್ಟು ಸೂಕ್ಷ್ಮ ವಾಗಿ ಇದನ್ನು ಇನ್ನೆಲ್ಲೂ ಹೇಳಿಲ್ಲ, ಗೃಹೀವಿನಯ ಎಂದು ಹೊಗಳಿಸಿ ಕೊಳ್ಳುವಷ್ಟು ಖಚಿತವಾಗಿಯೂ ಸುಲಭವಾಗಿಯೂ ಇರುವ ಈ ಸೂತ್ರ ದಂತಹ ಗ್ರಂಥವನ್ನು ಭಾರತವರ್ಷದ ಇತರ ಯಾವ ಮತಸಾಹಿತ್ಯದಿಂದ

ಲಾದರೂ ಸಂಶೋಧಕರು ತರಲಿ, ನೋಡೋಣ. ಅವರು ಅದನ್ನು ತರುವ ವರೆಗೂ ತನ್ನ ಶಾಸನಗಳ ಮೂಲಕ ಅಶೋಕನು ಪ್ರಚಾರಮಾಡಿದ ಧರ್ಮ ಬೌದ್ಧಗೃಹಸ್ಥರಿಗೆ ಪ್ರತ್ಯೇಕವಾಗಿ ಬುದ್ಧನು ಉಪದೇಶಮಾಡಿರುವ ಧರ್ಮ ಎಂದು ತೀರ್ಮಾನಿಸದೆ ವಿಧಿಯಿಲ್ಲ" ಎಂದು ಭಂಡಾರ್ಕರ್ ಅವರು ಹೇಳುತ್ತಾರೆ.

ಸೆನಾರ್ಟ್ ಎಂಬವರು ಅಶೋಕನ ಶಾಸನಗಳನ್ನೇ ಆಧಾರವಾಗಿಟ್ಟು ಕೊಂಡು, ನಿರ್ವಾಣ ಮುಂತಾದ ಬೌದ್ಧ ತತ್ವಗಳು ಅಶೋಕನ ಅನಂತರ ಹುಟ್ಟಿಕೊಂಡವೆಂದೂ ಅವನ ಕಾಲದಲ್ಲಿ ಬೌದ್ಧಧರ್ಮ ಕೇವಲ ನೀತಿಮಾರ್ಗ ಮಾತ್ರವಾಗಿತ್ತೆಂದೂ ಊಹಿಸುತ್ತಾರೆ. ಆದರೆ ಇದು ಅವರ ಸಂಶೋಧನಾ ಸಾಮರ್ಥ್ಯದ ಮಿತಿಯನ್ನು ಮಾತ್ರ ತೋರಿಸುತ್ತದೆ. ಭಿಕ್ಷುಗಳಿಗೆ ಧರ್ಮಬೋಧೆ ಮಾಡಿದಾಗ ಅವರ ನಡತೆಯನ್ನೇ ಹೆಚ್ಚಾಗಿ ಅಶೋಕನು ತಿದ್ದಬೇಕಾಗಿ ಬಂತು. ಹಾಗೆಯೇ ಸಾಮಾನ್ಯ ಜನರಿಗೆ ನಿರ್ವಾಣವನ್ನು ಉಪದೇಶಿಸಿ ಪ್ರಯೋಜನ ವಿಲ್ಲವೆಂದು ಅವನು ತಿಳಿದು ಸ್ವರ್ಗ, ಪರಲೋಕಸುಖಗಳು ಇವುಗಳನ್ನೇ ಧರ್ಮ ಶ್ರವಣಗಳಲ್ಲಿ ಒತ್ತಿ ಹೇಳಬೇಕಾಗಿ ಬಂತು. ಆದ್ದರಿಂದ ಅವನ ಶಾಸನಗಳ ಆಧಾರದ ಮೇಲೆ ಬೌದ್ಧಧರ್ಮತತ್ವಗಳ ಬೆಳವಣಿಗೆಯನ್ನು ಊಹಿಸುವುದ ಸಾಧ್ಯ. ಯಾವ ಯಾವ ಪಂಗಡದವರಿಗೆ ಯಾವ ಯಾವ ಮಟ್ಟದವರಿಗೆ ಯಾವುದನ್ನು ಉಪದೇಶಿಸಿ ಅವರನ್ನು ಹೇಗೆ ಉದ್ಧರಿಸುವುದೆಂದು ಅಶೋಕ ನಿಗೆ ತಿಳಿದಿತ್ತು. ಧರ್ಮಜೀವನಕ್ಕೆ ಮುಖ್ಯವಾದ ನಡೆನುಡಿಗಳನ್ನು ಅವನು ಮತ್ತೆಮತ್ತೆ ಉದಹರಿಸಿರುವನು. ಆದರೆ, ಯಜ್ಞಯಾಗಾದಿಗಳಲ್ಲಿ ಆಗುತ್ತಿದ್ದ ಪ್ರಾಣಿವಧೆಯನ್ನು ನಿಲ್ಲಿಸಲು ಅವನು ಹಿಂಜರಿಯಲಿಲ್ಲ. ಕಲಿಂಗಶಾಸನದಲ್ಲಿ ಹೇಳಿರುವಂತೆ "ಕ್ಷಮ್ಯವಾದುದನ್ನು ದೇವಾನಾಂಪ್ರಿಯನು ಕ್ಷಮಿಸು ತ್ತಾನೆ." ಅಕ್ಷಮ್ಯವಾದುದನ್ನು ಕ್ಷಮಿಸುವ ದೌರ್ಬಲ್ಯ ಅವನಲ್ಲಿರಲಿಲ್ಲ. ತಾನು ಕಂಡ ಬೆಳಕನ್ನು ತನ್ನವರಿಗೆ ನೀಡಲು ತವಕಪಟ್ಟ ಅಶೋಕನ ಹಿರಿತನವನ್ನು ಪ್ರಶಂಸಿಸುವಾಗ ಅವನ ಜೀವನಚರಿತ್ರೆಕಾರರು ಅವನನ್ನು ಕ್ರೈಸ್ತ ಧರ್ಮ ಪ್ರಚಾರಕ್ಕೆ ಸಹಾಯಮಾಡಿದ ಕಾನ್ಸ್ಟನ್‌ಟೈನಿಗೂ ರಾಜ ಯೋಗಿಯಾಗಿದ್ದ ಮಾರ್ಕಸ್ ಅರೀಲಿಯಸ್ಸನಿಗೂ ವಿಜಿಗೀಷುವಾದ ಚಾರ್ಲಿ ಮ್ಯಾನಿಗೂ ಜಿಜ್ಞಾಸುವಾದ ಅಕ್ಬರನಿಗೂ ಪರಮತ ಸಹಿಷ್ಣುವಾದ ಕಲೀಫ್ ಉಮ್ಮರನಿಗೂ ಸರಳಜೀವಿಯಾದ ಆಲಿವರ್ ಕ್ರಾಮ್ವೆಲ್ಲಿಗೂ ಹೋಲಿಸುವರು. ಆದರೆ ಅಶೋಕನಿಗೆ ಹೋಲಿಸುವಷ್ಟು ಹಿರಿಮೆ ಇವರಲ್ಲನೇಕರಿಗಿಲ್ಲವೆಂದು ಅವನ ಜೀವನವೇ ಘೋಷಿಸುತ್ತದೆ.

## ೫. ಆಡಳಿತಕ್ರಮ

ಅಶೋಕನ ಸಾಮ್ರಾಜ್ಯ ಹಿಂದೂಸ್ತಾನದ ಬಹುಭಾಗವನ್ನೂ ನೈರುತ್ಯ ಗಡಿಯಿಂದಾಚೆ ಇರುವ ಅಫ್ಗಾನಿಸ್ತಾನ ಬೆಲೂಚಿಸ್ತಾನಗಳನ್ನೂ ಒಳಗೊಂಡಿತ್ತೆಂದು ಆಗಲೇ ಹೇಳಿದ್ದೇವೆ. ಇಷ್ಟು ವಿಶಾಲವಾದ ಭೂಭಾಗವನ್ನು ಯಾವ ಮಹೋದ್ದೇಶದ ಹುರುಪಿನಿಂದ ಯಾವ ವ್ಯವಸ್ಥಿತಕ್ರಮದಿಂದ ಅಶೋಕನು ಆಳಿದನೆಂಬುದನ್ನು ತಿಳಿದುಕೊಂಡರೆ ಪ್ರಾಚೀನ ಭಾರತದ ರಾಜಧರ್ಮವನ್ನು ಕುರಿತು ನಮಗೆ ತಿಳಿವಳಿಕೆ ಬಂದಂತಾಗುತ್ತದೆ. ಆಗಿನವರೆಗೂ ಪಶ್ಚಿಮ ಏಷ್ಯ ಪೂರ್ವ ಏಷ್ಯಗಳಲ್ಲಿ ಮೂಡಿ ಮುಳುಗಿದ ಸಾಮ್ರಾಜ್ಯಗಳ ಪೈಕಿ, ಭಾರತೀಯರಿಗೆ ಪರಿಚಯವಾಗಿದ್ದವು ಅಲೆಕ್ಸಾಂಡರನ ಕ್ಷಣಿಕ ಸಾಮ್ರಾಜ್ಯ ಮತ್ತು ಅವನು ಉರುಳಿಸಿದ ಇರಾನಿನ ಅಖಮನಿ ಸಾಮ್ರಾಜ್ಯ, ಇವೆರಡೇ ! ಆದರೆ, ಮೌರ್ಯಸಾಮ್ರಾಜ್ಯ ಇತರ ಆಡಳಿತಗಳ ಪಡಿಯಚ್ಚಾಗಿರಲಿಲ್ಲ. ಅದು ಸಾಧ್ಯವೂ ಇಲ್ಲ. ಅಖಮನಿಯರಂತೆ ಅಶೋಕನೂ ಶಾಸನಗಳನ್ನು ಬರಸಿದನು, ನಿಜ. ಆದರೆ ಅವುಗಳ ವಿಷಯ ಉದ್ದೇಶ ವ್ಯಾಪ್ತಿ ಶೈಲಿ ಇವೆಲ್ಲ ತೀರ ವ್ಯತ್ಯಾಸವಾಗಿರುವುವು. ಅಲ್ಲದೆ, ಭಾರತೀಯರ ಸಂಸ್ಕಾರದಂತೆ, ಭಾರತವರ್ಷದಲ್ಲಿ ಬಳಕೆಯಾಗಿರುವ ಧರ್ಮಶಾಸ್ತ್ರ ಅರ್ಥಶಾಸ್ತ್ರ ರಾಜನೀತಿಶಾಸ್ತ್ರಗಳಿಗನುಗುಣವಾಗಿ ಅಶೋಕನು ತನ್ನ ಸಾಮ್ರಾಜ್ಯದ ಆಡಳಿತವನ್ನು ನಡಸಬೇಕಾಯಿತು. ಅವನು ಯವನರನ್ನಾಗಲಿ ಅಖಮನಿಯರನ್ನಾಗಲಿ ಅನುಕರಿಸುವ ಮೂಢತನಕ್ಕೆ ಹೋಗಲಿಲ್ಲ.

ಪೂರ್ವದೇಶದ ಜನಾಂಗಗಳ ಚರಿತ್ರೆಯನ್ನು ಬರೆದು ಅಲ್ಲಿಯ ನಾಗರಿಕತೆಗಳನ್ನು ವಿಮರ್ಶಿಸಲು ಪ್ರಯತ್ನಿಸಿರುವ ಪಾಶ್ಚಾತ್ಯರನೇಕರು ಅವುಗಳ ಆಡಳಿತವನ್ನು 'ನಿರಂಕುಶ' ಎಂಬ ಒಂದೇ ಮಾತಿನಲ್ಲಿ ದೂರುವರು. ಕಟ್ಟುಕಟ್ಟಳೆಗಳಿಲ್ಲದೆ ರಾಜನು ಸ್ವೇಚ್ಛೆಯಾಗಿ ಪ್ರಜೆಗಳನ್ನು ಹಿಂಸಿಸುವಾಗ, ಅದು ಎಲ್ಲಿ ನಡೆದರೂ, ಅವರು, ಆ ರಾಜನ ಆಡಳಿತವನ್ನು, "ಪೂರ್ವದೇಶಗಳ ನಿರಂಕುಶರಾಜನಂತೆ" ಎಂದು ಟೀಕಿಸುವರು. ಇದು ತೀರ ಅನ್ಯಾಯ. "ನಾ ವಿಷ್ಣುಃ ಪೃಥಿವೀಪತಿಃ" ಎಂದು ಹೇಳಿದ ಮಾತ್ರಕ್ಕೆ ಆ ಪೃಥಿವೀಪತಿಗೆ ಅಂಕೆ ಅಂಕುಶಗಳು ಇಲ್ಲವೇ ಇಲ್ಲವೆಂದಲ್ಲ. "ನನ್ನ ವಚನವೇ ಶಾಸನ; ನಾನೇ ರಾಷ್ಟ್ರ" ಎಂದು ಭಾರತವರ್ಷದ ರಾಜರು ಯಾರೂ ಸ್ಥಾನಮದದಿಂದ ಹೇಳುವಹಾಗಿಲ್ಲ. ಪ್ರಜೆಗಳ ಕ್ಷೇಮಾಭಿವೃದ್ಧಿಗಾಗಿ ದುಡಿಯುವುದೇ

ಕರ್ತವ್ಯವೆಂದು ಸಿಂಹಾಸನಾರೋಹಣಕಾಲದಲ್ಲಿ ರಾಜನನ್ನು ಮಂತ್ರಗಳು ಎಚ್ಚರಿಸುತ್ತಿದ್ದುವು. ರಾಜರ ಶಿಕ್ಷಣಕ್ರಮದಿಂದ ಅವರು ಮೊದಲೇ ಅದಕ್ಕೆ ಸಿದ್ಧತೆ ಪಡೆದಿದ್ದರು. ಧರ್ಮಪ್ರವರ್ತಕರು ಸದಾ ರಾಜನನ್ನು ಸನ್ಮಾರ್ಗದಲ್ಲೇ ನಯಿಸುತ್ತಿದ್ದರು. ಪ್ರಜೆಗಳೂ ಕೂಡ ರಾಜನಿಂದ ಮೇಲುಪಂಕ್ತಿಯನ್ನೇ ನಿರೀಕ್ಷಿಸುತ್ತಿದ್ದರು. ಆದ್ದರಿಂದ, ಅವರಿಗೆ ನಿರಂಕುಶರಾಗಲು ಅವಕಾಶ ತೀರ ವಿರಳ.

ಅಶೋಕನ ವಿಷಯವಾಗಿ ಗ್ರಂಥ ಬರೆದಿರುವ ವಿನ್‌ಸೆಂಟ್ ಸ್ಮಿತ್ ಅವರು "ಸಾಮ್ರಾಜ್ಯದ ಆಡಳಿತ ನಿರಂಕುಶಪ್ರಭುತ್ವವಾಗಿತ್ತು; ರಾಜನ ಇಚ್ಛೆಯನ್ನು ಮೀರಿದ್ದು ಯಾವುದೂ ಇರಲಿಲ್ಲ" ಎಂದು ಹೇಳಿರುತ್ತಾರೆ. ಇಂತಹ ಅಭಿಪ್ರಾಯಗಳು ಭಾರತವರ್ಷದ ಸಂಸ್ಕೃತಿಗೆ ತೀರ ವಿರೋಧ. ಧರ್ಮ ಯಾವುದು ಅಧರ್ಮ ಯಾವುದು ಎಂಬುದನ್ನು ವಿವೇಚಿಸಿ ವಿಧಿಸುವುದು ರಾಜನಪಾಲಿಗೆ ಬಿದ್ದ ಕೆಲಸವೇ ಆಗಿರಲಿಲ್ಲ. ತಮ್ಮ ತಪೋಬಲದಿಂದ ಅದನ್ನು ಅರಿತ ಸ್ಮೃತಿಕರ್ತರು ಆ ಹೊಣೆಯನ್ನು ಹೊತ್ತಿದ್ದರು. ಶಿಷ್ಟರಾದವರು ಒಪ್ಪುವ ನಡತೆಯನ್ನೂ ವಿಧಿನಿಯಮಗಳನ್ನೂ ರಾಜನು ಪರಿಪಾಲಿಸುತ್ತಾ ಬಂದನು. ಅಶೋಕನು 'ಧರ್ಮ' ಎಂದು ಕೊಂಡಾಡುವ ಮೂಲತತ್ವಗಳನ್ನೇ ಎಲ್ಲ ರಾಜರೂ ಆಡಳಿತದ ಮುಖ್ಯಫಲವಾಗಿ ಕಾಣಬಯಸಿರಬೇಕು.

ಇದಲ್ಲದೆ, ದೇಶ ಜಾತಿ ಕುಲ ಗಣ ಇವುಗಳಲ್ಲಿ ಬಳಕೆಯಾಗಿದ್ದ ಆಚಾರಗಳನ್ನು ರಾಜನು ರಕ್ಷಿಸಲೇಬೇಕಾಯಿತು. ಅವುಗಳಿಗೆ ನ್ಯಾಯಸ್ಥಾನಗಳಲ್ಲಿ ಮನ್ನಣೆ ದೊರೆಯಿತು.

ಹೀಗಾಗಿ ಆಡಳಿತಕ್ಕೆ ಒಳಪಟ್ಟ ಕಾರ್ಯಕ್ಷೇತ್ರ ಕೂಡ ಅಷ್ಟು ಖಚಿತವಾಗಿರಲಿಲ್ಲ. ಜಾತಿಧರ್ಮ ಕುಲಧರ್ಮಗಳನ್ನು ಪಾಲಿಸುವುದು, ಧರ್ಮಜೀವಿಗಳಿಗೆ ತೊಂದರೆಯಾಗದಂತೆ ನೋಡಿಕೊಳ್ಳುವುದು, ಪ್ರಜೆಗಳ ಹಿತಸುಖಗಳನ್ನು ಸಾಧಿಸಲು ಆದಷ್ಟು ದುಡಿಯುವುದು, ಬಾಲವೃದ್ಧವ್ಯಾಧಿತ ವ್ಯಸನ್ನನಾಥೆಯರನ್ನು ಕಾಪಾಡುವುದು, ಆಚಾರ್ಯರು ವಿದ್ಯಾವಂತರು ಇವರನ್ನು ಪೂಜಿಸಿ ಪ್ರೋತ್ಸಾಹಿಸುವುದು, ಇವೇ ರಾಜನ ಸಾಮಾನ್ಯ ಕರ್ತವ್ಯಗಳು. ಪ್ರಾಂತಗಳಿಗೂ ನಗರಗಳಿಗೂ, ಗಣಗಳಿಗೂ ತಮ್ಮ ತಮ್ಮ ಕಾರ್ಯನಿರ್ವಾಹಕ್ಕೆ ಹೆಚ್ಚು ಸ್ವಾತಂತ್ರ್ಯವಿದ್ದುದರಿಂದ ರಾಜನ ನಿರಂಕುಶತ್ವಕ್ಕೆ ಕೊಂಚವೂ ಅವಕಾಶವಿರಲಿಲ್ಲ. "ಧರ್ಮ"ವೆಂಬುದು ರಾಜನಿಗಿಂತಲೂ ಶ್ರೇಷ್ಠವೆಂದು ಎಲ್ಲರೂ ಅರಿತಿದ್ದರು. ಅದರ ಪೋಷಣೆಯೇ ರಾಜನ ಮುಖ್ಯ ಕರ್ತವ್ಯವೆಂದು ರಾಜನೂ ಪ್ರಜೆಗಳೂ ಮನಗಂಡಿದ್ದರು. ಇದನ್ನು ಎಲ್ಲ ರಾಜರಿಗಿಂತ

ಹೆಚ್ಚು ಉತ್ಸಾಹದಿಂದಲೂ ವಿಚಕ್ಷಣೆಯಿಂದಲೂ ಅಶೋಕನು ನೆರವೇರಿಸಿದನು. ಜನರ ಮನದಲ್ಲಿ ಮೂಡಿಬರುವ ಧರ್ಮಜೀವನದ ಮೂರ್ತಿಯೇ ರಾಜನು, ಎಂಬುದನ್ನು ನಾವು ಅಶೋಕನಲ್ಲಿ ಕಾಣಬಹುದು.

ಆಗಿನಕಾಲದ ರಾಜರು ಪ್ರತಿದಿನವೂ ಬೆಳಗಿನಿಂದ ರಾತ್ರಿಯತನಕ ಅನುಸರಿಸಿದ್ದ ಕಾರ್ಯಕ್ರಮವನ್ನು ಕೌಟಿಲ್ಯನ ಅರ್ಥಶಾಸ್ತ್ರದಿಂದ ನಾವು ಊಹಿಸಬಹುದು. ಅದರಂತೆ ರಾಜನು ಬೆಳಗ್ಗೆ ಮೂರು ಗಂಟೆಗೆ ಏಳಬೇಕು ನಾಲ್ಕೂವರೆತನಕ ಅವನು ರಾಜ್ಯದ ನಾನಾ ತೊಡಕುಗಳ ವಿಷಯವಾಗಿ ಚಿಂತಿಸಿ ಸಾಧಕ ಬಾಧಕಗಳನ್ನು ಯೋಚಿಸಿ ತೀರ್ಮಾನಗಳಿಗೆ ಬರಬೇಕು. ಅಷ್ಟುಹೊತ್ತಿಗೆ ಸರಿಯಾಗಿ ಋತ್ವಿಕರೂ ಆಚಾರ್ಯರೂ ಪುರೋಹಿತರೂ ಬಂದು ಅವನನ್ನು ಆಶೀರ್ವದಿಸುವರು. ಅನಂತರ ವೈದ್ಯರನ್ನೂ ಪಾಕಶಾಲೆಯ ಅಧಿಕಾರಿಯನ್ನೂ ಜ್ಯೋತಿಷ್ಯರನ್ನೂ ಕಂಡು ದನಕರುವಿಗೆ ಪ್ರದಕ್ಷಿಣೆ ಮಾಡಿ ರಾಜನು ಆಸ್ಥಾನಮಂಟಪಕ್ಕೆ ಬರುವನು. ಅಲ್ಲಿ ಆರು ಗಂಟೆಯಿಂದ ಏಳೂವರೆಯ ತನಕ ಅವನು ಹಿಂದಿನ ದಿನದ ಲೆಕ್ಕವನ್ನೂ ಆದಾಯವೆಚ್ಚಗಳನ್ನೂ ಪರಿಶೀಲಿಸುವನು. ಏಳೂವರೆ ಗಂಟೆಗೆ ಅತ್ಯಗತ್ಯವಾದ ಕೆಲಸಗಳಿಗಾಗಿ ರಾಜನ ಭೇಟಿಗೆ ಬಂದಿರುವ ಪ್ರಜೆಗಳನ್ನು ಕಂಡು ಕೆಲಸಕಾರ್ಯಗಳನ್ನು ಮಾಡಿಸುವನು. ಒಂಬತ್ತು ಗಂಟೆಗೆ ಸರಿಯಾಗಿ ಸ್ನಾನ ಸಂಧ್ಯಾವಂದನೆ ಉಪಹಾರಗಳಿಗಾಗಿ ರಾಜನು ಮಂಟಪವನ್ನು ತೊರೆದು ಅಂತಃಪುರಕ್ಕೆ ತೆರಳುವನು. ಹತ್ತೂವರೆಗೆ ಸಾಮ್ರಾಜ್ಯದ ಮುಖ್ಯ ಅಧಿಕಾರಿಗಳು ರಾಜನನ್ನು ಕಂಡು ತಮ್ಮ ಅಭಿಪ್ರಾಯಗಳನ್ನು ಸೂಚಿಸಿ ಸಲಹೆಗಳನ್ನು ಕೊಟ್ಟು ಹಿಂತಿರುಗುವರು. ಹನ್ನೆರಡು ಗಂಟೆಗೆ ಮಂತ್ರಿಪರಿಷತ್ತನ್ನು ಸೇರಿಸಿ ಅವರೊಂದಿಗೆ ರಾಜಕೀಯ ವಿಷಯವಾದ ಆಲೋಚನೆಯನ್ನು ನಡೆಸುವನು. ಒಂದೂವರೆಯಿಂದ ಮೂರು ಗಂಟೆತನಕ ವಿಶ್ರಮಿಸಿಕೊಂಡು ಬಂದು ಮತ್ತೆ ರಾಜಕಾರ್ಯದಲ್ಲೇ ನಿರತನಾಗುವನು. ಸೈನ್ಯವನ್ನು ಪರೀಕ್ಷಿಸಿ ಅದಕ್ಕೆ ಸಂಬಂಧಿಸಿದ ಏರ್ಪಾಟುಗಳನ್ನು ಮೂರರಿಂದ ನಾಲ್ಕೂವರೆ ವರೆಗೂ ಮಾಡಿ, ಅನಂತರ ಇತರ ದೇಶಗಳಿಂದಲೂ ನೆರೆ ರಾಜರಿಂದಲೂ ಬಂದ ದೂತರನ್ನು ಸ್ವೀಕರಿಸುವನು. ಆ ಮೇಲೆ ಗೂಢಚಾರರನ್ನು ಕಂಡು ಅವರು ರಾಜ್ಯದ ನಾನಾ ಭಾಗಗಳಿಂದ ತಂದ ವೃತ್ತಾಂತಗಳನ್ನು ಪರಾಮರ್ಶಿಸುವನು. ಸಂಜೆ ಸ್ನಾನ ಸಂಧ್ಯಾವಂದನೆಗಳನ್ನು ಮುಗಿಸಿ ಭೋಜನಮಾಡಿ ರಾಜನು ಒಂಬತ್ತುಗಂಟೆಗೆ ನಿದ್ರೆಮಾಡಲು ಹೊರಡುವನು.

ಹೀಗೆ ಕೌಟಿಲ್ಯನು ರಾಜನನ್ನು ಪ್ರಜಾಸೇವಕರಲ್ಲಿ ಅತ್ಯಂತ ಹೆಚ್ಚಿನ ಶ್ರಮ ಜೀವಿಯಾಗಿ ಮಾಡಿದಾನೆ. "ರಾಜನು ಹಗಲು ನಿದ್ದೆ ಮಾಡುವುದೇ ಇಲ್ಲ" ಎಂದು ಸ್ಟ್ರಾಬೊ ಎಂಬ ಯವನ ಗ್ರಂಥಕರ್ತನೂ "ಹಗಲೆಲ್ಲ ರಾಜನು ರಾಜ್ಯಭರಣದಲ್ಲೇ ನಿರತನಾಗಿರುವನು" ಎಂದು ಮೆಗಾಸ್ತನೀಸನೂ ಹೇಳುವುದರಿಂದ ಕೌಟಿಲ್ಯನ ಉಪದೇಶ ಕೇವಲ ಗ್ರಂಥಗತವಾಗಿರಲಿಲ್ಲವೆಂದು ಗೊತ್ತಾಗುತ್ತದೆ. ಇಷ್ಟರ ಮಟ್ಟಿಗೆ ಪ್ರಜೆಗಳಿಗಾಗಿ ದುಡಿಯುವವನನ್ನು ನಿರಂಕುಶನೆಂದು ಹೀಯಾಳಿಸುವುದು ನ್ಯಾಯವಲ್ಲ.

ದೇವಋಣ ಪಿತೃಋಣ ಋಷಿಋಣ ಎಂಬ ಮೂರು ಋಣಗಳನ್ನೂ ಪ್ರತಿಯೊಬ್ಬನೂ ಸಲ್ಲಿಸಬೇಕಾದದ್ದು ಎಂದು ಶಾಸ್ತ್ರಗಳು ಹೇಳುತ್ತವೆ. ಆದರೆ ಅಶೋಕನು ಮತ್ತೊಂದು ತೆರನ ಋಣದಿಂದಲೂ ತಾನು ಬದ್ಧನೆಂದು ತಿಳಿದಿದ್ದನು. "ನಾನು ಕಿಂಚಿತ್ತಾದರೂ ಪರಾಕ್ರಮವನ್ನು ಮಾಡುತ್ತಿದ್ದರೆ ಅದು ಇದಕ್ಕಾಗಿ: ಜೀವಿಗಳಿಗೆ ಕೊಡಬೇಕಾದ ಋಣವನ್ನು ತೀರಿಸುವ ಸಲುವಾಗಿ; ಇಲ್ಲಿ ಅವರು ಸುಖವಾಗಿರುವ ಸಲುವಾಗಿ; ಪರದಲ್ಲಿ ಅವರು ಸ್ವರ್ಗವನ್ನು ಪಡೆಯುವ ಸಲುವಾಗಿ" ಎಂದು ಅಶೋಕನು ಆರನೆಯ ಶಿಲಾ ಫಲಕ ಶಾಸನದಲ್ಲಿ ಹೇಳಿರುವನು. ಹಾಗೆಯೇ ತನ್ನ ಕೈಕೆಳಗಿನ ಅಧಿಕಾರಿಗಳೂ ಕೂಡ ತನಗೆ ಋಣವನ್ನು ಕೊಟ್ಟು ತೀರಿಸಬೇಕೆಂದು ಅಶೋಕನು ಒತ್ತಿ ಹೇಳಿರುವನು. ಶಿಲಾಫಲಕ ಶಾಸನ ಹದಿಮೂರರಲ್ಲಿ, "ಇದಕ್ಕಾಗಿ ಸರ್ವ ದೇಶಗಳಲ್ಲೂ ಅಧಿಕಾರಿಗಳನ್ನು ನಿಯಮಿಸಿರುವೆನು, ಪ್ರಜೆಗಳಿಗೆ ಆಶ್ವಾಸನವನ್ನು ಕೊಡುವುದಕ್ಕೂ ಇಹಪರಲೋಕಗಳಲ್ಲಿ ಅವರು ಹಿತಸುಖಗಳನ್ನು ಪಡೆಯುವಂತೆ ನಡೆಯುವುದಕ್ಕೂ ನೀವು ಸಮರ್ಥರಾಗಿರುವಿರಿ. ಹೀಗೆ ಮಾಡಿದರೆ ನೀವು ಸ್ವರ್ಗವನ್ನು ಪಡೆಯುವಿರಿ, ನನ್ನ ಋಣವನ್ನೂ ತೀರಿಸುವಿರಿ" ಎಂದು ಅವನು ಅವರನ್ನು ಎಚ್ಚರಿಸಿರುವನು. ಅಂತು ಅಶೋಕನ ಪ್ರಭಾವದಿಂದ ಈ ಋಣತತ್ವವು ರಾಜಧರ್ಮದಲ್ಲಿ ಹೆಚ್ಚು ಪ್ರಚಾರವಾಯಿತು.

ಪ್ರಜಾಸೇವೆಯನ್ನು ಒಂದು ವ್ರತವೆಂದು ಅಶೋಕನು ಪರಿಗಣಿಸಿದ ಹಾಗೆ ಕಾಣುತ್ತದೆ. ಅರ್ಥಶಾಸ್ತ್ರದಲ್ಲಿ ಕೌಟಿಲ್ಯನು "ರಾಜ್ಞೋಹಿವ್ರತಮುತ್ಥಾನಂ" ಎಂದು ಹೇಳಿರುವಂತೆ, ಆಡಳಿತದ ನಾನಾ ಕಾರ್ಯಭಾರಗಳಲ್ಲಿ ಅವನಷ್ಟು ಕುತೂಹಲದಿಂದ ಬಹುಶಃ ಯಾರೂ ಭಾಗವಹಿಸಿರಲಾರರು. "ಜನರಿಗಾಗಿ ದುಡಿಯುವುದರಲ್ಲೂ ಅದಕ್ಕಾಗಿ ಪಡುವ ಉತ್ಸಾಹದಲ್ಲೂ ನನಗೆ ತುಷ್ಟಿ ಎಂಬುದೇ ಇಲ್ಲ, ಸರ್ವಲೋಕಹಿತವೇ ನನ್ನ ಕರ್ತವ್ಯ. ಅದನ್ನು ಸಾಧಿಸಲು ಮುಖ್ಯವಾದದ್ದೇನೆಂದರೆ ಉತ್ಥಾನ ಮತ್ತು ಅರ್ಥ

ಸಂತೀರಣ. ಸರ್ವಲೋಕಹಿತಸಾಧನೆಗಿಂತ ಮೇಲಾದ ಕರ್ಮವೇ ಇಲ್ಲ" ಎಂದು ಅಶೋಕನು ತನ್ನ ಹೃದಯದ ಹೆಬ್ಬಯಕೆಯನ್ನು ಬಿಚ್ಚಿ ಹೇಳಿದ್ದಾನೆ. ಇಂತಹ ಮಹದುದ್ದೇಶವನ್ನು ಸಾಧಿಸಲು ಅವನು ಹಗಲಿರುಳೂ ದುಡಿಯಬೇಕಾಯಿತು. ಉತ್ಥಾನದ ವಿಷಯವನ್ನು ಕೌಟಿಲ್ಯನೂ ಅನೇಕ ಸಾರಿ ವಿವರಿಸಿ ರಾಜರಿಗೆ ಅದು ಅತಿ ಮುಖ್ಯವೆಂದು ಹೇಳುತ್ತಾನೆ. "ಉತ್ಥಾನೇನ ಯೋಗಕ್ಷೇಮ ಸಾಧನಂ" (I, 7) "ಅರ್ಥಸ್ಯ ಮೂಲಮುತ್ಥಾನಂ" (I 19) "ಅನುತ್ಥಾನೇಧ್ರುವೋ ನಾಶಃ" ಎಂದು ಮುಂತಾಗಿ ರಾಜಗುರುವಾದ ಕೌಟಿಲ್ಯನು ಹೇಳಿದುದನ್ನೇ ಅನುಸರಿಸಿ ಅಶೋಕನೂ ಕೂಡ ಉತ್ಥಾನವನ್ನು ಕೊಂಡಾಡುತ್ತಾನೆ. ಇದಕ್ಕಾಗಿ ಅಶೋಕನು ಆಡಳಿತದ ಶಾಖೋಪಶಾಖೆಗಳಲ್ಲೂ ಒಂದು ಹೊಸ ಹರ್ಷವನ್ನು ತುಂಬಿ ಎಲ್ಲರನ್ನೂ ಪ್ರಜಾಸೇವಕರಾಗಿ ಮಾರ್ಪಡಿಸಲು ಕಂಕಣಬದ್ಧನಾದನು. ಬಹುದಿವಸದಿಂದ ಬೆಳೆದು ಬಂದಿದ್ದ ಅಧಿಕಾರಿಗಳ ಆಲಸ್ಯವನ್ನು ಒಮ್ಮೆಯೇ ಹೊಡೆದೋಡಿಸಿದನು. "ಬಹುಕಾಲದವರೆಗೆ ಜನರಿಗಾಗಿ ಕರ್ಮಗಳನ್ನು ಮಾಡುವುದು ವೃತ್ತಾಂತಗಳನ್ನು ತಿಳಿಸುವುದು ಇವು ಸರ್ವಕಾಲದಲ್ಲೂ ನಡೆಯುತ್ತಿಲ್ಲ; ಆದ್ದರಿಂದ ನನ್ನಿಂದ ಹೀಗೆ ಮಾಡಲಾಗಿದೆ: ನಾನು ಭೋಜನ ಮಾಡುತ್ತಿರಲಿ ಅಂತಃಪುರದೊಳಗಿರಲಿ ಒಳಮನೆಯಲ್ಲಿರಲಿ ಗೊಶಾಲೆಯಲ್ಲಿರಲಿ ಪಲ್ಲಕ್ಕಿಯಮೇಲಿರಲಿ ಉದ್ಯಾನಗಳಲ್ಲಿರಲಿ ಸರ್ವತ್ರ ಸರ್ವಕಾಲದಲ್ಲಿಯೂ ಪ್ರತಿವೇದಕರು ಬಂದು ನನಗೆ ಜನರ ಅರ್ಥವನ್ನು ತಿಳಿಸತಕ್ಕದ್ದು. ನಾನು ಜನರ ಅರ್ಥವನ್ನು ಸರ್ವತ್ರ ಮಾಡುತ್ತೇನೆ," ಎಂದು ಅಶೋಕನು ಹೇಳಿರುವನು (ಶಿ.ಫ.ಶಾ. ೬) ಹೀಗೆ ತಾನು ಒಂದು ಸೇವಾದೀಕ್ಷೆಯನ್ನು ತೊಟ್ಟಿರುವ ಸಂಗತಿಯನ್ನು ಅಶೋಕನು ತನ್ನ ಸಾಮ್ರಾಜ್ಯದ ಮೂಲೆಮೂಲೆಗಳಲ್ಲಿಯೂ ಪ್ರಕಟಿಸಿದ್ದರಿಂದ ಜನಗಳೆಲ್ಲರಿಗೂ ಒಂದು ಬಗೆಯ ಹೊಸನೆಚ್ಚು ಒಂದು ರೀತಿಯ ಹೊಸ ವಿಶ್ವಾಸ ಮೌರ್ಯಸಿಂಹಾಸನದಲ್ಲಿ ಮೂಡಿರಬೇಕು. ಅಧಿಕಾರಿಗಳನ್ನೆಚ್ಚರಿಸುವ ಆಜ್ಞೆಗಳನ್ನು ಪ್ರಜೆಗಳಿಗೆ ತಿಳುಹಿಸಿದರೆ ಇಬ್ಬರೂ ಜಾಗರೂಕರಾಗಿರಲು ಕಾರಣವಾಗುತ್ತದೆ.

ತನ್ನ ಆಳಿಕೆಯಲ್ಲಿದ್ದ ದೊಡ್ಡ ಸಾಮ್ರಾಜ್ಯವನ್ನು ರಾಜಧಾನಿಯಲ್ಲೇ ಇದ್ದುಕೊಂಡು ಪರೋಕ್ಷವಾಗಿಯೇ ನಡಸಲು ಅಶೋಕನ ಮನಸ್ಸು ಒಪ್ಪಲಿಲ್ಲ. ಜನಪದದ ಮತ್ತು ಜನರ ದರ್ಶನಾರ್ಥವಾಗಿಯೇ ಅವನು ಧರ್ಮಯಾತ್ರೆಗಳನ್ನು ಮೊದಲು ಮಾಡಿದನು. ಜನರಿಂದ ರಾಜನನ್ನು ದೂರಮಾಡುವ ಜನಸೇವೆಯಿಂದ ಅವನ ಅಭಿಲಾಷೆಗಳನ್ನು ಸೆಳೆಯುವ ವಿಹಾರ ಯಾತ್ರೆ

ಗಳನ್ನು ತ್ಯಜಿಸಿದನು. ಧರ್ಮಯಾತ್ರೆ ಎಂದರೆ ಅಶೋಕನು ಹೇಳಿರುವಂತೆ. (ಶಿ.ಫ.ಶಾ. ೮) "ಬ್ರಾಹ್ಮಣ ಶ್ರಮಣರ ದರ್ಶನ ಮತ್ತು ಅವರಿಗೆ ದಾನ; ಹಿರಿಯರ ದರ್ಶನ ಮತ್ತು ಅವರಿಗೆ ಹಿರಣ್ಯದಾನ ಜನಪದದ ಮತ್ತು ಜನರ ದರ್ಶನ ಮತ್ತು ಅವರಿಗೆ ಧರ್ಮಾನುಶಾಸ್ತಿ ಅವರೊಂದಿಗೆ ಧರ್ಮ ವಿಷಯದ ಚರ್ಚೆ." ರಾಜರೂ ರಾಜಕುಮಾರರೂ ಹೀಗೆ ಧರ್ಮಯಾತ್ರೆ ಗಳನ್ನು ಮಾಡುತ್ತಾ ಬಂದರೆ ಜನಾಭಿಪ್ರಾಯವೂ ಜನನಾಯಕರ ಮತವೂ ಅವರಿಗೆ ತಿಳಿಯುವುದು. ದೇಶದ ಮುಂದಾಳುಗಳ ಮನಸ್ಸಿನಲ್ಲಿರುವ ಯೋಜನೆ ಗಳೇನೆಂದು ಅರಿತು ಅವರು ತಮ್ಮ ಆಡಳಿತವನ್ನು ತಿದ್ದಿಕೊಳ್ಳಲು ಅನುಕೂಲ ವಾಗುವುದು.

ಚಂದ್ರಗುಪ್ತನರೇಂದ್ರನಿಗಾಗಿಯೇ ರಚಿಸಿದ್ದು ಎಂದು ಪ್ರಸಿದ್ಧವಾಗಿ ರುವ ತನ್ನ ಅರ್ಥಶಾಸ್ತ್ರದಲ್ಲಿ "ಪಿತೇವಾನುಗೃಹ್ಣೀಯಾತ್" ಎಂದು ಬಾರಿ ಬಾರಿಗೂ ಕೌಟಿಲ್ಯನು ರಾಜನಿಗೆ ಉಪದೇಶಿಸುತ್ತಾನೆ. ಈ ದೃಷ್ಟಿಯನ್ನು ಅಶೋಕನು ಮುಖ್ಯವಾಗಿ ತಾನು ಆಗತಾನೆ ಯುದ್ಧದಲ್ಲಿ ಸೋಲಿಸಿ ಅಪಾರ ಕಷ್ಟ ನಷ್ಟಗಳಿಗೆ ಗುರಿಮಾಡಿಸಿದ ಕಲಿಂಗರ ವಿಷಯದಲ್ಲೂ ಕಲಿಂಗ ದೇಶದ ಸುತ್ತಮುತ್ತಲಿನ ಅವಿಜಿತರಾದ ಅಂತಪ್ರದೇಶಿಯರ ವಿಷಯದಲ್ಲೂ ಅಧಿಕಾರಿಗಳ ಮುಂದೆ ಇಡುತ್ತಾನೆ. ಅವರ ಪ್ರೀತಿವಿಶ್ವಾಸಗಳನ್ನು ಗಳಿಸಲು ಪ್ರೀತಿ ವಿಶ್ವಾಸಗಳೇ ಉತ್ತಮ ಸಾಧನಗಳೆಂದು ಅವನಿಗೆ ತಿಳಿದಿತ್ತು. ಕಲಿಂಗ ದೇಶವನ್ನು ಗೆದ್ದಾಗ ತನಗುಂಟಾದ ಮನೋವೇದನೆಯನ್ನು ವಿವರಿಸಿರುವ ಹದಿಮೂರನೆಯ ಶಿಲಾಫಲಕ ಶಾಸನವನ್ನು ಅಶೋಕನು ಕಲಿಂಗ ದೇಶದಲ್ಲಿ ಪ್ರಕಟಿಸಲಿಲ್ಲ. ಇದರ ಔಚಿತ್ಯ ಸರಿಯಾಗಿಯೇ ಇದೆ. ಅದಕ್ಕೆ ಬದಲಾಗಿ ಅವನು ಎರಡು ಪ್ರತ್ಯೇಕ ಶಾಸನಗಳನ್ನು ಬರೆದು ಅಧಿಕಾರಿಗಳಿಗೆ ಸದ್ಬೋಧನೆಯನ್ನು ಮಾಡಿರುವನು. ಎರಡರಲ್ಲೂ ಪ್ರಜೆಗಳನ್ನು ಮಕ್ಕಳಂತೆ ಭಾವಿಸುತ್ತೇನೆ ಎಂಬ ಉದಾತ್ತ ದೃಷ್ಟಿ ಇದೆ. "ಸರ್ವ ಮನುಷ್ಯರೂ ನನ್ನ ಮಕ್ಕಳು; ಇಹ ಲೋಕದಲ್ಲೂ ಪರಲೋಕದಲ್ಲೂ ನನ್ನ ಮಕ್ಕಳು ಎಲ್ಲ ಹಿತಸುಖಗಳನ್ನೂ ಹೊಂದಬೇಕೆಂದು ನಾನು ಹೇಗೆ ಇಚ್ಛಿಸುತ್ತೇನೋ ಹಾಗೆಯೇ ನಾನು ಎಲ್ಲ ಮನುಷ್ಯರ ವಿಷಯದಲ್ಲೂ ಇಚ್ಛಿಸುತ್ತೇನೆ," ಎಂದು ಅವನು ಎರಡು ಶಾಸನಗಳಲ್ಲೂ ಒತ್ತಿ ಹೇಳಿದ್ದಾನೆ. ಅಲ್ಲದೆ ಎರಡನೆಯ ಕಲಿಂಗ ಶಾಸನದಲ್ಲಿ, "ದೇವಾನಾಂಪ್ರಿಯನು ಅವರಿಗೆ ತಂದೆಯ ಹಾಗೆ; ದೇವಾನಾಂಪ್ರಿಯನು ಅವರನ್ನು ತನ್ನಷ್ಟೇ ಪ್ರೀತಿಸುತ್ತಾನೆ. ದೇವಾನಾಂಪ್ರಿಯನು ಅವರಿಗಾಗಿ, ತನ್ನ ಮಕ್ಕಳಿಗಾಗಿ ಮಾಡುವಂತೆಯೇ, ಅನುಕಂಪಿಸುತ್ತಾನೆ" ಎಂದು

ಹೇಳಿ ಅಧಿಕಾರಿಗಳಲ್ಲೂ ಅದೇ ದೃಷ್ಟಿ ಬಲಪಡುವಂತೆ ಅವರಿಗೆ ಉತ್ತೇಜನ ಕೊಡುವನು. ಬಹುಶತಸಹಸ್ರಜನರ ಮೇಲೆ ಅವರ ಹಿತಸುಖಸಾಧನೆಗಾಗಿ ಅಶೋಕನು ನಿಯಮಿಸಿದ ರಜ್ಜುಕರನ್ನು ಕುರಿತು ಸ್ತಂಭಶಾಸನ ನಾಲ್ಕರಲ್ಲಿ, "ವಿದಗ್ಧಳಾದ ಧಾತ್ರಿಗೆ ಮಗುವನ್ನೊಪ್ಪಿಸಿದನಂತರ ವಿದಗ್ಧಳಾದ ಧಾತ್ರಿ ನನ್ನ ಮಗುವನ್ನು ಪಾಲಿಸುತ್ತಾಳೆ ಎಂದು ಸ್ವಸ್ಥಮಾನಸನಾಗುವಂತೆ ನಾನು ಜನಪದದ ಹಿತಸುಖಗಳಿಗಾಗಿ ರಜ್ಜುಕರನ್ನು ನಿಯಮಿಸಿರುವೆನು" ಎಂದು ಸಾರುತ್ತಾನೆ.

ಭಕ್ತಿಶ್ರದ್ಧೆಯಿಂದ ಶಿಕ್ಷಣ ರಕ್ಷಣೆಗಳನ್ನು ನೀಡುವ ಈ ಪಿತೃಭಾವನೆಯನ್ನೇ ನಿರಂಕುಶತ್ವದ ಚಿಹ್ನೆ ಎಂದು ಡಿ. ಆರ್. ಭಂಡಾರ್ಕರ್‌ರವರು ಹೇಳುತ್ತಾರೆ. "ಮಕ್ಕಳು ತಂದೆಗೆ ಕಟ್ಟುಬಿದ್ದಿರುವಂತೆಯೂ ಮಕ್ಕಳ ವಿಷಯವಾಗಿ ತಂದೆಯು ಮನಬಂದಂತೆ ನಡೆದುಕೊಳ್ಳುವಂತೆಯೂ ಹದ್ದುಬದ್ದಿಲ್ಲದ ತಮ್ಮ ರಾಜನ ಕರುಣೆಯನ್ನೇ ಪ್ರಜೆಗಳು ಅವಲಂಬಿಸಬೇಕಾಗಿ ಬಂತು" ಎಂದು ಅವರು ಬರೆದಿರುವರು.[1] ಆದರೆ ಅಶೋಕನು ತನ್ನ ಜವಾಬ್ದಾರಿಯನ್ನು ಋಣದಂತೆ ಭಾವಿಸಿದ್ದನ್ನು ನೆನಪಿನಲ್ಲಿಟ್ಟರೆ 'ಪ್ರಜೆಗಳು ನನಗೆ ಮಕ್ಕಳಂತೆ' ಎಂಬ ಮಾತಿನಲ್ಲಿ ನೆಲಸಿರುವ ಅವನ ಮನೋಭಾವವನ್ನು ನಾವು ಈ ರೀತಿ ಅಪಾರ್ಥ ಮಾಡುವುದು ಸರಿಯಲ್ಲ. ಭಂಡಾರ್ಕರ್ ಅವರು ಮುಂದೆ ಕೊಡುವ ಅಭಿಪ್ರಾಯ ಇನ್ನೂ ಆಶ್ಚರ್ಯಕರವಾಗಿದೆ. "ಮೌರ್ಯ ಚಕ್ರಾಧಿಪತ್ಯವು ಸ್ಥಾಪನೆಯಾಗುವ ಮೊದಲು ಈ ವಿಧವಾದ ರಾಜಧರ್ಮದ ಪ್ರಚಾರವಿರಲಿಲ್ಲ. ಆಗ ರಾಜನೆಂದರೆ ರಾಷ್ಟ್ರದ ಪ್ರಥಮಸೇವಕ, ಮೊದಲನೆಯ ದಾಸ! ಅವನು ತೆಗೆದುಕೊಳ್ಳುತ್ತಿದ್ದ ಬಲಿ ಮೊದಲಾದವು ತಾನು ಮಾಡಿದ ಸೇವೆಗೆ ಪ್ರತಿಫಲ ಅಷ್ಟೆ!" ಎಂದು ಅವರು ಹೇಳುವರು. ಈ ಮಾತುಗಳಲ್ಲಿ ಎರಡು ತಪ್ಪುಗಳಿವೆ. ಒಂದು, ತಂದೆಯನ್ನು ನಿರಂಕುಶಪ್ರಭು ಎಂದು ಹಳಿದಿರುವುದು! ಎರಡನೆಯದು, ಮೌರ್ಯಸಿಂಹಾಸನದ ಸ್ಥಾಪನೆಯಾದ ಕೂಡಲೇ ರಾಜನ ಸ್ಥಾನಮಾನಗಳಲ್ಲಿ ದೊಡ್ಡ ಬದಲಾವಣೆಯಾಯಿತೆಂದು ಸಾಧಿಸುವುದು. ಅದುವರೆಗೂ ಆಗದಿದ್ದದ್ದು ಆಗೇಕೆ ನಡೆಯಬೇಕು? ಅಂತಹ ದೊಡ್ಡ ಕ್ರಾಂತಿಗೆ ಕಾರಣವಾದರೂ ಏನು? ಅಂತು ಭಂಡಾರ್‌ಕರ್ ಅವರ ವಾದದಲ್ಲಿ ನ್ಯಾಯಕ್ಕಿಂತಲೂ ಧೈರ್ಯವೇ ಹೆಚ್ಚಾಗಿ ಹೊರಹೊಮ್ಮುತ್ತಿದೆ!

ಭಾರತವರ್ಷದ ಇತಿಹಾಸದಲ್ಲಿ ಅಶೋಕನಷ್ಟು ವಿಶಾಲವಾದ ಸಾಮ್ರಾಜ್ಯವನ್ನು ಆಳಿದವರು ಅಪರೂಪ. ಅವನ ಕಾಲದಲ್ಲಿ ಅಫ್ಘಾನಿಸ್ತಾನ ಬೆಲೂಚಿಸ್ತಾನ

[1] *Asoka*, p. 63.

ಗಳೂ ಕೂಡ ಹಿಂದೂಸ್ತಾನಕ್ಕೆ ಸೇರಿದ್ದವು. ಅವುಗಳನ್ನು ಸೆಲ್ಯೂಕಸನು ಚಂದ್ರಗುಪ್ತನಿಗೆ ಬಿಟ್ಟುಕೊಟ್ಟಿದ್ದನು. "ಹಿಂದೂ"ಕುಷ್ ಪರ್ವತಶ್ರೇಣಿಯ ವರೆಗೂ "ಹಿಂದೂ"ಸಂಸ್ಕೃತಿಯೂ ಮೌರ್ಯರ ಆಡಳಿತವೂ ಪಸರಿಸಿತ್ತು. ಸೆಲ್ಯೂಕಸನ ಅನಂತರ ಇರಾಕ್ ಮತ್ತು ಸಿರಿಯಾರಾಜ್ಯಗಳನ್ನು ಕೈವಶ ಮಾಡಿಕೊಂಡಿದ್ದ ಅಂತಿಯೋಕನೇ ಅಶೋಕನ ನೆರೆಯವನು, ಉತ್ತರಕ್ಕೆ ಹಿಮಾಲಯಾಪರ್ವತವೂ ಪೂರ್ವಕ್ಕೆ ಆಸಾಂ ಪ್ರಾಂತದ ಅರಣ್ಯಪ್ರದೇಶವೂ ದಕ್ಷಿಣಕ್ಕೆ ಭಾರತವರ್ಷದ ತುತ್ತ ತುದಿಯಲ್ಲಿನ ಚೋಳ ಚೇರ ಪಾಂಡ್ಯ ರಾಷ್ಟ್ರಗಳೂ ಮೌರ್ಯ ಸಾಮ್ರಾಜ್ಯದ ಎಲ್ಲೆಗಳಾಗಿದ್ದುವು. ಈ ಮಹಾ ಸಾಮ್ರಾಜ್ಯಕ್ಕೆ ಅಶೋಕನು ತನ್ನ ಭುಜಬಲದಿಂದ ಗೆದ್ದು ತಂದದ್ದು ಕಲಿಂಗ ದೇಶವೊಂದನ್ನೇ. ಮಿಕ್ಕ ಎಲ್ಲವನ್ನೂ ಚಂದ್ರಗುಪ್ತನೂ ಬಿಂದುಸಾರನೂ ಸಂಪಾದಿಸಿದ್ದರು.

ಅಶೋಕನು ಹೇಳಿರುವಂತೆ, "ನಾನು ಜಯಿಸಿರುವ ರಾಜ್ಯ ವಿಶಾಲವಾದದ್ದು" (ಶಿ.ಫ.ಶಾ. ೧೪). ಇದಕ್ಕೆ ಅವನ ಶಾಸನಗಳೇ ಅತ್ಯುತ್ತಮವಾದ ಸಾಕ್ಷಿ. ಅವುಗಳು ನಮಗೆ ಎಲ್ಲೆಲ್ಲಿ ಸಿಕ್ಕಿವೆ ಎಂಬುದನ್ನು ಭೂಪಟದ ಮೇಲೆ ಗುರುತುಮಾಡಿದರೆ ಅವನ ಶಾಸನಬದ್ಧವಾದ ರಾಜ್ಯದ ಮೇರೆಗಳು ನಮಗೆ ಸುಲಭದಲ್ಲಿ ತಿಳಿಯುತ್ತವೆ. ಈಗಿನ ಪೆಷಾವರ್ ಜಿಲ್ಲೆಯಲ್ಲಿ ಆಗ ಯವನ ರಾಜ್ಯವೊಂದರ ರಾಜಧಾನಿಯಾಗಿದ್ದ ಅದೇ ಹೆಸರಿನ 'ಪುರುಷನಗರ'ದ 40 ಮೈಲಿ ದೂರದಲ್ಲಿ ಷಾಬಾಸ್ ಗಾಡಿ ಎಂಬಲ್ಲಿಯೂ ಅಬ್ಬಟಬಾದ್ ಎಂಬ ನಗರಕ್ಕೆ ಹದಿನೈದು ಮೈಲಿ ಸಮೀಪದಲ್ಲಿರುವ ಮಷ್‌ಸೆರಾ ಎಂಬಲ್ಲಿಯೂ ಅವನ 'ಹದಿನಾಲ್ಕು ಶಾಸನಗಳು' ದೊರೆತಿವೆ. ಅಲ್ಲಿಂದ ಹಾಗೆಯೇ ಪಶ್ಚಿಮ ತೀರಕ್ಕೆ ಬಂದರೆ, ಕಾಥೇವಾಡದಲ್ಲಿ ಜುನಗಡ್ ಸಂಸ್ಥಾನದಲ್ಲಿರುವ ಗಿರಿನಗರದಲ್ಲಿ ಅವುಗಳೆಲ್ಲವನ್ನೂ ಮತ್ತೆ ಬರೆದಿದೆ. ಅಲ್ಲಿಂದ ದಕ್ಷಿಣಕ್ಕೆ ಬಂದರೆ, ಬೊಂಬಾಯಿ ನಗರಕ್ಕೆ ೩೭ ಮೈಲಿ ಉತ್ತರದಲ್ಲಿ ಸಮುದ್ರ ತೀರದಲ್ಲೇ ಅಪರಾಂತ ಪ್ರಾಂತದ ಹಳೆಯ ರಾಜಧಾನಿಯಾಗಿದ್ದ ಸೊಪಾರ ಎಂಬಲ್ಲಿ 'ಹದಿನಾಲ್ಕು ಶಾಸನಗಳ'ನ್ನು ಪುನಃ ಆ ದೇಶದ ಜನರ ಉತ್ತೇಜನಕ್ಕಾಗಿ ಅಶೋಕನು ಬರಸಿದ್ದನು. ಮೈಸೂರು ಸಂಸ್ಥಾನದ ಉತ್ತರಭಾಗದಲ್ಲಿರುವ ಚಿತ್ರದುರ್ಗ ಜಿಲ್ಲೆಯಲ್ಲಿ ಸಿದ್ದಾಪುರ ಬ್ರಹ್ಮಗಿರಿ ಜತಿಂಗರಾಮೇಶ್ವರ ಎಂಬ ಮೂರು ಸ್ಥಳಗಳಲ್ಲಿಯೂ, ಸಿದ್ಧಾಪುರದಿಂದ ೬೦ ಮೈಲಿ ದೂರದಲ್ಲಿರುವ ನೈಜಾಂ ಪ್ರಾಂತಕ್ಕೆ ಸೇರಿದ ಕೊಪ್ಪಳದ ಹತ್ತಿರ ಪಾಲ್ಕಿಗುಂಡು ಗವಿಮಠ ಎಂಬ ಎರಡು ಸ್ಥಳಗಳಲ್ಲಿಯೂ, ಅಲ್ಲಿಗೆ ೫೪ ಮೈಲಿ ಹತ್ತಿರದಲ್ಲಿರುವ ಮಸ್ಕಿ

ಎಂಬಲ್ಲಿಯೂ ಅಶೋಕನ ಹಲವು ಬಿಡಿ ಶಾಸನಗಳು ದೊರೆತಿವೆ. ಈ ಪ್ರದೇಶಕ್ಕೆ ಸಮೀಪವಾಗಿರುವ ಮದ್ರಾಸಾಧಿಪತ್ಯಕ್ಕೆ ಸೇರಿದ ಅನಂತಪುರ ಜಿಲ್ಲೆಯಲ್ಲಿ ಎರ್ರಗುಡಿ ಎಂಬ ಗ್ರಾಮದಲ್ಲಿ ಅವನ 'ಹದಿನಾಲ್ಕು ಶಾಸನಗಳು' ಲಿಖಿತವಾಗಿವೆ! ಪೂರ್ವಸಮುದ್ರತೀರದಲ್ಲಿ ಗಂಜಾಂ ಜಿಲ್ಲೆಯಲ್ಲಿ ಗಂಜಾಂ ಪಟ್ಟಣದಿಂದ ಹದಿನೆಂಟುಮೈಲಿ ದೂರದಲ್ಲಿ ಜೌಗಡ ಎಂಬಲ್ಲಿಯೂ ಒರಿಸಾ ಪ್ರಾಂತದ ಭುವನೇಶ್ವರದಿಂದ ಏಳು ಮೈಲಿ ಉತ್ತರದಲ್ಲಿರುವ ಧೌಳಿ ಎಂಬಲ್ಲಿಯೂ ಹದಿನಾಲ್ಕು ಶಾಸನಗಳ ಬಹುಭಾಗವೂ ಎರಡು ಕಳಿಂಗ ಶಾಸನಗಳೂ ಇವೆ. ಹಿಮವತ್ ಪರ್ವತದ ಪಾದಭೂಮಿಯಲ್ಲಿ ನೇಪಾಳ ಸಂಸ್ಥಾನದಲ್ಲಿ, ಬುದ್ಧಭಗವಾನನ ಪವಿತ್ರ ಜೀವನದಿಂದ ಪುನೀತವಾದ ಪುಣ್ಯಕ್ಷೇತ್ರಗಳಲ್ಲಿ ಸ್ತಂಭಗಳನ್ನು ನಿಲ್ಲಿಸಿರುವನು. ಲುಂಬಿನೀ ಸ್ತಂಭ, ನಿಗಾಲಿಸಾಗರ ಸ್ತಂಭ, ಇವೆರಡೂ ಅಲ್ಲಿ ಸಿಕ್ಕಿವೆ. ಬಿಹಾರ್ ಪ್ರಾಂತದ ಉತ್ತರಭಾಗದಲ್ಲಿ ಅರಾರಜ್ ರಾಂಪೂರ್ವ ನಂದನ್‌ಗಡ್ ಎಂಬ ಸ್ಥಳಗಳಲ್ಲಿ ಅಶೋಕನು ನಿಲ್ಲಿಸಿದ ಸ್ತಂಭಗಳು ಸಂಶೋಧಕರ ದೃಷ್ಟಿಗೆ ಗೋಚರವಾಗಿವೆ. ಸಂಯುಕ್ತಪ್ರಾಂತದ ಡೆಹ್ರಾಡೂರ್ನ ಜಿಲ್ಲೆಯಲ್ಲಿ ಖಾಲ್‌ಸಿ ಎಂಬ ಸ್ಥಳದಲ್ಲಿ ಮತ್ತೊಂದು ಸ್ತಂಭ ಪತ್ತೆಯಾಗಿದೆ.

ಈ ಪ್ರದಕ್ಷಿಣೆಯ ಮಾರ್ಗದಲ್ಲಿ ಕಾಣಬರುವ ಸ್ಥಳಗಳೆಲ್ಲವೂ ಸುಮಾರು ಅಶೋಕನ ಸಾಮ್ರಾಜ್ಯದ ಹೊರವಲಯಗಳಲ್ಲಿವೆ. ಆದರೆ ಅವನ 'ರಾಜವಿಷಯ'ದ ಒಳಪ್ರಾಂತಗಳಲ್ಲೂ ಶಾಸನಗಳು ಸಿಕ್ಕಿವೆ. ಮಧ್ಯ ಇಂಡಿಯಾದಲ್ಲಿ ರೂಪನಾಥ ಬೈರಾಟ್ ಭಾಬ್ರು ಎಂಬ ಸ್ಥಳಗಳಲ್ಲೂ ಭೋಪಾಲ್ ಸಂಸ್ಥಾನದ ಸಾಂಚಿಯಲ್ಲೂ ಸಂಯುಕ್ತಪ್ರಾಂತದ ಮೀರತ್ ಟೊಪ್ರಾ ಕೌಶಾಂಬಿ ಎಂಬ ಸ್ಥಳಗಳಲ್ಲೂ ಕಾಶಿಯ ಸಮೀಪದಲ್ಲಿರುವ ಸಾರನಾಥದಲ್ಲೂ ಹಿಂದಿನ ಮಗಧ ರಾಜಧಾನಿಯಾದ ಈಗಿನ ಪಾಟ್ನಾದ ಹತ್ತಿರದ ನಾಗಾರ್ಜುನಿ ಬೆಟ್ಟದಲ್ಲೂ ಬಿಹಾರದ ಸಹಸ್ರಾಂ ಎಂಬಲ್ಲಿಯೂ ಅವನ ಶಾಸನಗಳು ದೊರೆತಿವೆ.

ಅಶೋಕನ ಕಾಲದ ಅನೇಕ ಸ್ತಂಭಗಳೂ ಸ್ತೂಪಗಳೂ ಶಾಸನಗಳೂ ಕಾಲಚಕ್ರಕ್ಕೆ ಸಿಲುಕಿ ಕಣ್ಮರೆಯಾಗಿವೆ. ಕೆಲವು ನಿರ್ಜನ ಪ್ರದೇಶಗಳಲ್ಲೂ ಅರಣ್ಯಮಧ್ಯದಲ್ಲೂ ಅಡಗಿಕೊಂಡಿವೆ. ಅವನ ಅನಂತರ ಎಂಟು ಶತಮಾನಗಳು ಕಳೆದಮೇಲೆ ನಮ್ಮ ದೇಶದಲ್ಲಿ ಸಂಚಾರಮಾಡಿದ ಹ್ಯುಯೆನ್‌ತ್ಸಾಂಗನು ತನ್ನ ಪ್ರವಾಸದ ವಿವರಣೆಯಲ್ಲಿ ಅವನು ಕಟ್ಟಿಸಿದ ಸ್ತೂಪಗಳನ್ನು ಕಂಡೆನೆಂದು ಹೇಳಿದಾನೆ. ಅಲ್ಲಿಯವರೆಗೂ ಖಿಲವಾಗದೆ ನಿಂತಿದ್ದ ಅವನ ಶಿಲ್ಪ

ಕಲಾಸೃಷ್ಟಿಗಳು ಅನಂತರದಲ್ಲಿ ಶಿಥಿಲವಾಗಿರಬೇಕೆಂದು ತೋರುತ್ತದೆ. ಆಫ್ಘಾನಿಸ್ತಾನದಲ್ಲೂ ಅಂತಹ ಸ್ತೂಪಗಳು ಹ್ಯುಯನ್‌ತ್ಸಾಂಗನ ಕಣ್ಣಿಗೆ ಬಿದ್ದುವು. ಪೂರ್ವ ಹಿಂದೂಸ್ತಾನದಲ್ಲಿ ಬಂಗಾಳದ ತಾಮ್ರಲಿಪಿ ಸಮತಟ ಪುಂಡ್ರವರ್ಧನ ಕರ್ಣಸುವರ್ಣ ಎಂಬ ಸ್ಥಳಗಳಲ್ಲೂ, ಕಪಿಲವಾಸ್ತು ಕುಶಿನಗರ ವೈಶಾಲಿ ಮುಂತಾದ ಬಿಹಾರಪ್ರಾಂತ ದಕ್ಷಿಣ ನೇಪಾಳಗಳಲ್ಲಿಯ ಬೌದ್ಧ ಪುಣ್ಯಕ್ಷೇತ್ರಗಳಲ್ಲೂ, ದ್ರಾವಿಡ ಮಹಾರಾಷ್ಟ್ರ ಸಿಂಧುಪ್ರಾಂತಗಳಲ್ಲಿಯೂ ಅಶೋಕನ ಸ್ತೂಪಗಳಿದ್ದುವಂತೆ. ಇವಲ್ಲದೆ, ಕಾಶ್ಮೀರದಲ್ಲೂ ನೇಪಾಳದಲ್ಲೂ ಅನೇಕ ವಿಹಾರಗಳನ್ನು ಕಟ್ಟಿಸಿ ಅಶೋಕನು ಬೌದ್ಧಸಂಘಕ್ಕೆ ದಾನ ಮಾಡಿದ ನೆಂದು ಕಥೆ ಇದೆ. ಕಾಶ್ಮೀರದ ಈಗಿನ ರಾಜಧಾನಿಯಾದ ಶ್ರೀನಗರವನ್ನು ಅಶೋಕನೇ ಕಟ್ಟಿಸಿದನೆಂದೂ ಅಲ್ಲಿ ಉನ್ನತವಾದ ೫೦೦ ವಿಹಾರಗಳನ್ನು ಕಟ್ಟಿಸಿದನೆಂದು ರಾಜತರಂಗಿಣಿಯಲ್ಲಿ ಹೇಳಿದೆ. ಇವುಗಳ ಪೈಕಿ ಒಂದುನೂರನ್ನು ಕಣ್ಣಾರ ಕಂಡೆನೆಂದು ಹ್ಯುಯನ್‌ತ್ಸಾಂಗನು ಹಿಗ್ಗುತ್ತಾನೆ. ನೇಪಾಳದಲ್ಲಿರುವ ದೇವಪಟ್ಟಣವನ್ನು ಅಶೋಕನೇ ಸ್ಥಾಪಿಸಿದನಂತೆ. ಅಲ್ಲಿ ಈಗಲೂ ಅಶೋಕ ನಿರ್ಮಿತವೆಂದು ಆದರಿಸುತ್ತಿರುವ ಸ್ತೂಪಗಳ ಅವಶೇಷಗಳನ್ನು ಕಾಣಬಹು ದಾಗಿದೆ. ಆದ್ದರಿಂದ, ಅಶೋಕನ ಸಾಮ್ರಾಜ್ಯ, ಮುಂದೆ ಭಾರತವರ್ಷದ ಇತಿಹಾಸದಲ್ಲಿ ಅತ್ಯಂತ ವಿಶಾಲವೆನಿಸಿದ ಮೊಗಲಾಯಿ ಸಾಮ್ರಾಜ್ಯಕ್ಕಿಂತ ಹೆಚ್ಚು ವಿಸ್ತಾರವಾಗಿತ್ತೆಂದೂ ಬ್ರಿಟಿಷರ ಆಳಿಕೆ ಹಬ್ಬಿ ನೆಲೆಗೊಳ್ಳುವ ಮೊದಲು ಅಂತಹ ಸಾಮ್ರಾಜ್ಯವೇ ನಮ್ಮ ದೇಶದಲ್ಲಿ ಪ್ರತಿಷ್ಠಿತವಾಗಿರಲಿಲ್ಲವೆಂದೂ ನಾವು ಧಾರಾಳವಾಗಿ ಹೇಳಬಹುದು.

ಚಕ್ರವರ್ತಿಗಳ ಸಹಾಯಕ್ಕೆಂದು ರಾಜಧಾನಿಯಲ್ಲಿ ಒಂದು ಮಂತ್ರಿ 'ಪರಿಷತ್ತು' ಇತ್ತು. "ಮಂತ್ರಪೂರ್ವಾಃ ಸರ್ವಾರಂಭಾಃ" ಎಂದು ಕೌಟಿ ಲ್ಯನೂ ಹೇಳುತ್ತಾನೆ. ಅಶೋಕನ ಶಾಸನಗಳಲ್ಲಿ ಈ ಪರಿಷತ್ತನ್ನು ಕುರಿತ ಮಾತುಗಳು ಆಗಾಗ ಬರುತ್ತವೆ. ಕೌಟಿಲ್ಯನ ಅರ್ಥಶಾಸ್ತ್ರ ಪ್ರಕಟವಾಗುವ ತನಕ ಆ ಪದಕ್ಕೆ, "ಆಚಾರ್ಯರೂ ಮುನಿಗಳೂ" ಎಂಬ ಅರ್ಥವನ್ನೇ ಬ್ಯೂಲರ್ ಛಾರ್ಸೆ ಸೇನಾರ್ಟ್ ಮುಂತಾದ ಪ್ರಾಚ್ಯ ಪಂಡಿತರು ಹೇಳುತ್ತಿದ್ದರು. ಆದರೆ ಅದಕ್ಕೆ "ಮುಖ್ಯ ಮಂತ್ರಿಗಳನ್ನೆಲ್ಲ ಒಳಗೊಂಡ ಒಂದು ಸಭೆ" ಎಂಬ ಅರ್ಥವಿದ್ದಂತೆ ಈಚೆಗೆ ಗೊತ್ತಾಗಿದೆ. "ನಾನು ಯಾವುದನ್ನಾದರೂ ಕೊಡ ಬೇಕೆಂದಾಗಲಿ ಹೇಳಬೇಕೆಂದಾಗಲಿ ಮುಖತಃ ಆಜ್ಞಾಪಿಸಿದರೆ, ಅಥವಾ, ಮಹಾಮಾತ್ರರಿಗೆ ಅಗತ್ಯವಾದ ಕೆಲಸವೊಂದನ್ನು ವಹಿಸಿದರೆ, ಆ ವಿಷಯದಲ್ಲಿ ಪರಿಷತ್ತಿನಲ್ಲಿ ವಿವಾದವಾಗಲಿ ವಿಮರ್ಶೆಯಾಗಲಿ ಉಂಟಾದಾಗ, ಅದನ್ನು

ನಾನೆಲ್ಲಿದ್ದರೂ ನನಗೆ ಸರ್ವಕಾಲದಲ್ಲೂ ತಿಳಿಸತಕ್ಕದ್ದು" ಎಂದು ಅಶೋಕನು ಆರನೆಯ ಶಿಲಾಶಾಸನದಲ್ಲಿ ಹೇಳಿರುವನು.

ಅಂದರೆ, ಮಂತ್ರಿಪರಿಷತ್ತಿಗೆ ಎರಡು ಮುಖ್ಯ ಕೆಲಸಕಾರ್ಯಗಳಿದ್ದಂತೆ ತೋರುತ್ತದೆ. ರಾಜನು ಮುಖತಃ ಯಾವುದನ್ನು ಆಜ್ಞಾಪಿಸಿದರೂ ಅದನ್ನು ಕಾರ್ಯರೂಪಕ್ಕೆ ತರುವ ಮೊದಲು ಮಂತ್ರಿಗಳೆಲ್ಲರೂ ಒಟ್ಟಾಗಿ ಪರಿಷತ್ತಿನಲ್ಲಿ ಸೇರಿ ಅದರ ಗುಣಾವಗುಣಗಳನ್ನು ವಿಮರ್ಶಿಸಬೇಕು. ಅಲ್ಲದೆ, ಮಂತ್ರಿಗಳಲ್ಲೇ ಯಾವ ವಿಷಯದಲ್ಲಾದರೂ ಭಿನ್ನಾಭಿಪ್ರಾಯವುಂಟಾದರೆ ಅದನ್ನು ಒಟ್ಟು ಪರಿಷತ್ತಿನಲ್ಲಿ ತೀರ್ಮಾನಿಸಬೇಕು. ಒಮ್ಮತದಿಂದ ಮಂತ್ರಿಪರಿಷತ್ತು ಮಾಡಿದ ನಿರ್ಧಾರವನ್ನೆದುರಿಸಲು ರಾಜನಿಗೂ ಧೈರ್ಯವಿರಲಿಲ್ಲ. ಅದಕ್ಕವನು ಸಾಮಾನ್ಯವಾಗಿ ಒಪ್ಪಲೇಬೇಕಾಗಿತ್ತು. ಆದರೆ ಅವರಲ್ಲಿ ವಿಧವಿಧವಾದ ಅಭಿಮತಗಳು ಮೂಡಿದರೆ ಅವುಗಳನ್ನು ತೂಕಮಾಡಿ ಕಡೆಯ ತೀರ್ಮಾನಕ್ಕೆ ಬರುವ ಭಾರ ರಾಜನದೇ. ಅಲ್ಲದೆ ಪ್ರಜಾಹಿತವನ್ನುದ್ದೇಶಿಸಿ ಯಾವುದಾದರೊಂದು ಹೊಸ ಕ್ರಮವನ್ನು ರಾಜನೇ ಸೂಚಿಸಿದರೆ ಅದನ್ನು ಕೂಲಂಕಷವಾಗಿ ವಿವೇಚನೆ ಮಾಡಿ ರಾಜನ ಯೋಜನೆ ಫಲಕಾರಿಯಾಗುವಂತೆ ಕೆಲಸಕಾರ್ಯಗಳನ್ನು ಅಣಿಮಾಡಿ ಸಂಬಂಧಪಟ್ಟ ಅಧಿಕಾರಿಗಳಿಗೆ ಸಲಹೆಕೊಡುವುದೂ ಪರಿಷತ್ತಿನ ಕಾರ್ಯಭಾಗಕ್ಕೆ ಸೇರಿತ್ತು. "ಅಲ್ಪವಾಗಿ ವ್ಯಯಮಾಡುವುದೂ ಅಲ್ಪವಾಗಿ ಕೂಡಿಡುವುದೂ ಸಾಧುವಾದದ್ದು" ಎಂದು ಅಶೋಕನು ಶಾಸನವೊಂದರಲ್ಲಿ ಒಂದು ನೀತಿಯನ್ನು ನಿರ್ಧರಿಸಿದನು. ಅನಂತರ ಅದೇ ಶಾಸನದಲ್ಲಿ, "ಈ ಆಜ್ಞೆಯ ಕಾರಣವನ್ನೂ ಅರ್ಥವನ್ನೂ ತಿಳಿದು ಗಣನೆಮಾಡುವಂತೆ ಪರಿಷತ್ತು ಯುಕ್ತರಿಗೆ ಆಜ್ಞಾಪಿಸತಕ್ಕದ್ದು" ಎಂದು ಅಶೋಕನೇ ಹೇಳುತ್ತಾನೆ.

ಚಕ್ರಾಧಿಪತ್ಯವನ್ನು ಪ್ರಾಂತಗಳನ್ನಾಗಿಯೂ, ಪ್ರಾಂತಗಳನ್ನು ಆಹಾರ ಅಥವಾ ವಿಷಯಗಳನ್ನಾಗಿಯೂ ವಿಭಾಗಿಸಿತ್ತು. ಶಾಂತಿಸಂರಕ್ಷಣೆಯ ದೃಷ್ಟಿಯಿಂದಲೂ ಆರ್ಥಿಕದೃಷ್ಟಿಯಿಂದಲೂ ಸಾಮ್ರಾಜ್ಯದ ರಕ್ಷಣೆಯ ದೃಷ್ಟಿಯಿಂದಲೂ ಮುಖ್ಯವಾದವುಗಳನ್ನು ಆಳಲು ಅಶೋಕನು ಕುಮಾರರನ್ನೇ ಅಂದರೆ ತನ್ನ ಮಕ್ಕಳನ್ನೇ ನಿಯಮಿಸುತ್ತಿದ್ದನು. ಅಶೋಕನ ತಂದೆಯಾದ ಬಿಂದುಸಾರನು ದಕ್ಷಿಣಾಪಥದ ಮಂಡಳಿಕನಾಗಿದ್ದನೆಂದು ಒಂದು ಪ್ರತೀತಿ ಇದೆ. ಅಶೋಕನೂ ಕೂಡ ಪಟ್ಟಕ್ಕೆ ಬರುವ ಮೊದಲು ಉಜ್ಜಯಿನಿ ಮತ್ತು ತಕ್ಷಶಿಲೆಗಳಲ್ಲಿ ಇಂತಹ ಅಧಿಕಾರಿಯಾಗಿದ್ದನು. ಹಾಗೆಯೇ ಅಶೋಕನ ಕಾಲದಲ್ಲೂ ಉಜ್ಜಯಿನಿ ತೋಸಲಿ ನಗರಗಳನ್ನು 'ಕುಮಾರರೂ' ಸುವರ್ಣಗಿರಿಯಲ್ಲಿ 'ಆರ್ಯಪುತ್ರ'ನೂ ಆಳುತ್ತಿದ್ದರೆಂದು ಶಾಸನಗಳು ಹೇಳುತ್ತವೆ.

ಈಗಿನ ಪಂಜಾಬ್ ಕಾಶ್ಮೀರ ಅಫ್ಘಾನಿಸ್ಥಾನ ಸಿಂಧ್ ಪ್ರಾಂತಗಳನ್ನು ತಕ್ಷಶಿಲೆಯಿಂದಲೂ ಮಾಳವ ಗುಜರಾಥ ಸೌರಾಷ್ಟ್ರಗಳನ್ನು ಉಜ್ಜಯಿನಿಯಿಂದಲೂ ಸುವರ್ಣಗಿರಿಯಿಂದ ದಕ್ಷಿಣಾಪಥವನ್ನೂ ತೋಸಲಿಯಿಂದ ಕಲಿಂಗವನ್ನೂ ಕೌಶಾಂಬಿಯಿಂದ ಈಗಿನ ಸಂಯುಕ್ತಪ್ರಾಂತವನ್ನೂ ಪಾಟಲೀಪುತ್ರದಿಂದ ಅಂಗವಂಗಗಳನ್ನೂ ಪರಿಪಾಲಿಸುತ್ತಿದ್ದಂತೆ ಕಾಣುತ್ತದೆ. ಸಿದ್ದಾಪುರದ ಶಾಸನದಲ್ಲಿ "ಸುವರ್ಣಗಿರಿಯ ಆರ್ಯಪುತ್ರ ಮತ್ತು ಮಹಾಮಾತ್ರರ" ವಚನದಂತೆ "ಇಶಿಲದ ಮಹಾಮಾತ್ರರಿಗೆ ಆರೋಗ್ಯ ಬಯಸಿ ಹೀಗೆ ಹೇಳತಕ್ಕದ್ದು" ಎಂದು ಹೇಳಿದೆ. ಅಂದರೆ, ರಾಜಾಜ್ಞೆಗಳನ್ನು ಮೊದಲು ರಾಜಧಾನಿಯಿಂದ ನೇರವಾಗಿ ಕುಮಾರರಿಗೂ ಆರ್ಯಪುತ್ರರಿಗೂ ಇತರ ಪ್ರಾಂತಾಧಿಕಾರಿಗಳಿಗೂ ಕಳುಹಿಸುವರು. ಅವರು ತಮ್ಮ 'ಪರಿಷತ್ತಿನಲ್ಲಿ' ಅವುಗಳನ್ನು ವಿಮರ್ಶಿಸಿ, ತಮ್ಮ ವಚನದಂತೆ, ಅವುಗಳನ್ನು ತಮ್ಮ ಕೈಕೆಳಗಿನ ಮಹಾಮಾತ್ರರಿಗೆ ತಿಳಿಸುವರು. ಆದರೆ, ಗಂಗಾತಟದ ಪ್ರದೇಶಗಳಲ್ಲಿ ಮಾತ್ರ ರಾಜನೇ ನೇರವಾಗಿ ಆಡಳಿತಸೂತ್ರವನ್ನು ವಹಿಸುತ್ತಿದ್ದನೆಂದು ತೋರುತ್ತದೆ. ಕೌಶಾಂಬಿ ಸಾರನಾಥ ಮುಂತಾದ ನಗರಗಳಲ್ಲಿ ದೊರೆತಿರುವ ಶಾಸನಗಳಲ್ಲಿ 'ಎಲ್ಲೆಡೆಯ ಮಹಾಮಾತ್ರರಿಗೂ ಹೀಗೆ ಹೇಳತಕ್ಕದ್ದು' ಎಂದು ಮಾತ್ರ ಹೇಳಿದೆ.

ದಕ್ಷರಾದ ಅಧಿಕಾರಿಗಳನ್ನೇ, ಅವರ ವಂಶ ಕುಲಗಳನ್ನು ಲೆಕ್ಕಿಸದೆ, ಮೌರ್ಯರು ಪ್ರಾಂತಾಧಿಕಾರಿಗಳಾಗಿ ನಿಯಮಿಸುತ್ತಿದ್ದರೆಂಬುದಕ್ಕೇ ಗುಜರಾಥ್ ಪ್ರಾಂತವನ್ನು ಅಶೋಕನ ಕಾಲದಲ್ಲಿ ಆಳುತ್ತಿದ್ದ 'ಯವನ ತುಷಸ್ಪ'ನೇ ಸಾಕ್ಷಿ. ಅಲೆಕ್ಸಾಂಡರನ ಅನುಯಾಯಿಗಳು ಸ್ಥಾಪಿಸಿದ ಯಾವುದೋ ಒಂದು ಯವನ ರಾಜವಂಶಕ್ಕೆ ಸೇರಿದ ತುಷಸ್ಪನನ್ನು, ಆ ಪ್ರದೇಶವನ್ನು ಆಳಲು ಬೇರೊಬ್ಬರಿಂದಲೂ ಸಾಧ್ಯವಿಲ್ಲದೆ ಇದ್ದದ್ದರಿಂದಲೋ ಏನೋ, ಅಶೋಕನು ನಿಯಮಿಸಿರಬೇಕೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ, ಅದೇ ಸಂಗತಿಯನ್ನು ನಮಗೆ ತಿಳಿಸುವ ಕ್ಷಾತ್ರಪರುದ್ರದಾಮನ ಶಾಸನದಲ್ಲಿ, ಮತ್ತೊಂದು ವಿಷಯವೂ ಅಡಗಿದೆ. ಚಂದ್ರಗುಪ್ತನ ಕಾಲದಲ್ಲಿ ಅದೇ ಗುಜರಾಥ್ ಪ್ರಾಂತವನ್ನು ವೈಶ್ಯಪುಷ್ಯಗುಪ್ತ ಎಂಬ ರಾಷ್ಟ್ರೀಯನು ಆಳುತ್ತಿದ್ದನೆಂದು ಅದರಲ್ಲಿ ಹೇಳಿದೆ. ಆದ್ದರಿಂದ, ಯವನತುಷಸ್ಪ ಎಂಬುವನು ಅಶೋಕನ ಸಾಮ್ರಾಜ್ಯದಲ್ಲಿ ಪಳಗಿದವನೂ ನಂಬಿಕಸ್ಥನೂ ಆದ ಅಧಿಕಾರಿಯಾಗಿರಬೇಕೆಂದು ನಾವು ಹೇಳಬಹುದು.

ಅಶೋಕನ ಆಳ್ವಿಕೆಯಲ್ಲಿ ಅವನು ಪ್ರಾಂತದ ಅಧಿಕಾರಿಗಳಿಗೆ ಹೆಚ್ಚು ಸ್ವಾತಂತ್ರ್ಯವನ್ನು ನೀಡಿದ್ದನು. ಇದು ಕೇವಲ ಆಡಳಿತದ ಪರಿಷ್ಕರಣಕ್ಕಾಗಿ ಮಾಡಿದ ನಿಯಮ. "ವ್ಯವಹಾರದಲ್ಲೂ ದಂಡದಲ್ಲೂ ಅವರನ್ನು ನಾನು ಸ್ವತಂತ್ರರಾಗಿ ಮಾಡಿರುವೆನು. ಏಕೆಂದರೆ, ಹೀಗೆ ಆಶ್ವಾಸಿತರಾದ ಆ ನನ್ನ ರಜ್ಜುಕರು ಕರ್ಮಗಳನ್ನು ಮಾಡುತ್ತಾ ಜನರ ಮತ್ತು ಜನಪದದ ಹಿತಸುಖಗಳನ್ನು ಹೆಚ್ಚಿಸಿ ಅವರನ್ನು ಅನುಗ್ರಹಿಸಲಿ" ಎಂದು ನಾಲ್ಕನೆಯ ಸ್ತಂಭಶಾಸನದಲ್ಲಿ ಹೇಳಿದೆ. ಆದರೆ ಈ ತೆರನ ಸ್ವಾತಂತ್ರ್ಯದಿಂದ ಸಾಮ್ರಾಜ್ಯದ ನಾನಾ ಕಡೆಗಳಲ್ಲಿ ಸಹಜವಾಗಿ ಉಂಟಾಗಬಹುದಾದ ವ್ಯತ್ಯಾಸಗಳನ್ನು ತಡೆಗಟ್ಟಲು ಅಶೋಕನು ಅದೇ ಶಾಸನದಲ್ಲೇ "ವ್ಯವಹಾರ ಸಮತೆಯನ್ನೂ ದಂಡಸಮತೆಯನ್ನೂ ಇಚ್ಛಿಸತಕ್ಕದ್ದು" ಎಂದು ರಜ್ಜುಕರನ್ನು ಎಚ್ಚರಿಸಿರುವನು. ಅಲ್ಲದೆ, ರಾಜಧಾನಿಯಿಂದ ಧರ್ಮಮಹಾಮಾತ್ರರು ಪ್ರಾಂತಗಳಿಗೆ ಹೋಗಿ ಕೇವಲ ಕಟ್ಟುಕಟ್ಟಳೆಗಳ ಮೇಲೆ ನಡೆಯುವ ಆಡಳಿತವನ್ನು ಧರ್ಮದೃಷ್ಟಿಯಿಂದ ಪರಿಶೀಲಿಸಿ ಪ್ರಜಾಹಿತವನ್ನು ಕಾಪಾಡುತ್ತಿದ್ದ.

ಹಿಂದೂಸ್ತಾನದಲ್ಲಿ ಮೊದಲಿಂದಲೂ ದೇಶದ ಐಕಮತ್ಯವನ್ನು ಸಾಧಿಸಲು ಹಲವು ಸಾಧನಗಳಿದ್ದಂತೆಯೇ ಪ್ರಾಂತಗಳ ಪ್ರತ್ಯೇಕತೆಯನ್ನು ಪೋಷಿಸುವ ಹಲವು ಅನುಕೂಲಗಳೂ ಇದ್ದುವು. ಆದ್ದರಿಂದ ಸಾಮ್ರಾಜ್ಯದ ಆಯ ಕಟ್ಟನ್ನು ಸಡಿಲಬಿಡುವ ಹಾಗಿರಲಿಲ್ಲ. ಕೇಂದ್ರ ಸರ್ಕಾರ ಸದಾ ಜಾಗರೂಕತೆಯಿಂದ ಪ್ರಾಂತಗಳನ್ನು ಬಿಗಿಹಿಡಿಯಬೇಕಾಯಿತು. ಇದಕ್ಕಾಗಿಯೇ ಅಶೋಕನು ಧರ್ಮಮಹಾಮಾತ್ರರನ್ನು ಪ್ರಾಂತಗಳಿಗೆ ಕಳುಹಿಸಿದ್ದು. "ಐದು ವರ್ಷಗಳಿಗೊಂದುಸಾರಿ ಕರ್ಕಶರಲ್ಲದ ಚಂಡರಲ್ಲದ ಸಖರಂತೆ ವರ್ತಿಸುವ ಮಹಾಮಾತ್ರರನ್ನು ಈ ನನ್ನ ಅನುಶಾಸ್ತಿಯಂತೆ ನಡೆಯುತ್ತದೆಯೇ ಎಂದರಿಯಲು ನಾನು ಕಳುಹಿಸುತ್ತೇನೆ" ಎಂದು ಎರಡನೆಯ ಸ್ತಂಭಶಾಸನದಲ್ಲಿ ಹೇಳಿರುವನು. "ಈ ಮಹಾಮಾತ್ರರು ಅನುಸಂಯಾನ ಮಾಡುವಾಗ ತಮ್ಮ ಕರ್ಮವನ್ನು ಗಮನಿಸುತ್ತಾ ರಾಜನ ಅನುಶಾಸ್ತಿಯಂತೆ ನಡೆಯುತ್ತದೆಯೇ ಎಂದೂ ಅವರು ಅರಿಯುವರು." ಪ್ರಾಂತಗಳಲ್ಲಿದ್ದ ರಜ್ಜುಕರ ಮೇಲ್ವಿಚಾರಣೆಗೆ ಬೇರೊಂದು ರೀತಿಯ ಏರ್ಪಾಟನ್ನೂ ಅಶೋಕನು ಮಾಡಿದ್ದನು. "ನನ್ನನ್ನು ಪಚರಿಸಲು ರಜ್ಜುಕರೂ ಕಾತುರರಾಗಿರುವರು; ನನ್ನ ಇಚ್ಛೆಯನ್ನರಿತ ಪುರುಷರನ್ನೂ ಅವರುಪಚರಿಸುವರು. ನನ್ನನ್ನು ತುಷ್ಟಿಪಡಿಸಬೇಕೆಂದು ಪುರುಷರೂ ರಜ್ಜುಕರನ್ನು ಎಚ್ಚರಿಸುವರು." (ಸ್ತಂ.ಶಾ. ೪.)

'ಪುರುಷರು' ಎಂಬ ಅದಿಕಾರಿಗಳು ಸಾಮ್ರಾಜ್ಯವನ್ನೆಲ್ಲಾ ಸುತ್ತಿಬಂದು "ಇದೇ ರಾಜನ ಇಚ್ಛೆ; ಇದನ್ನು ನಡೆಸಿ" ಎಂದು ರಜ್ಜುಕರಿಗೆ ಬೋಧಿಸಿ ಅವರ ಶಕ್ತಿಸಾಹಸಗಳನ್ನು ಅಳೆದು ರಾಜಭಕ್ತಿ ದೇಶಭಕ್ತಿಗಳನ್ನು ತೂಕಮಾಡಿ ಅಶೋಕನಿಗೆ ತಿಳಿಸುತ್ತಿದ್ದರೆಂದು ಕಾಣುತ್ತದೆ. ಹೀಗೆ ತನ್ನ ವಿಶಾಲ ಸಾಮ್ರಾಜ್ಯವನ್ನು ಶಾಂತಿಸಮಾಧಾನಗಳಿಂದ ಪಾಲಿಸಲು ಅಶೋಕನಿಗೆ ಸಾಧಿಸಿತು.

ಕುಮಾರರ ಅಧೀನದಲ್ಲಿದ್ದ ಪ್ರಾಂತಗಳಿಗೆ ಕೂಡ ಈ ನಿರ್ಬಂಧಗಳೂ ಕಟ್ಟಳೆಗಳೂ ಅನ್ವಯಿಸಿದುವು. ರಾಜಮನೆತನಕ್ಕೆ ಸಂಬಂಧಪಟ್ಟವರೆಂದು ಅವರಿಗೆ ಯಾವ ಹೆಚ್ಚಿನ ಮರ್ಯಾದೆಯನ್ನೂ ಕೊಡುತ್ತಿರಲಿಲ್ಲ. "ಕೋಸಲೆಯ ಕುಮಾರನಿಗೂ ಮಹಾಮಾತ್ರರಿಗೂ ದೇವನಾಂಪ್ರಿಯನ ವಚನದಂತೆ ಹೀಗೆ ಹೇಳತಕ್ಕದ್ದು" ಎಂದು ಅಶೋಕನು ಒಂದು ಶಾಸನವನ್ನು ಪ್ರಾರಂಭಮಾಡುತ್ತಾನೆ. "ಸುವರ್ಣಗಿರಿಯ ಆರ್ಯಪುತ್ರ ಮತ್ತು ಮಹಾಮಾತ್ರರ ವಚನದಂತೆ . . . ಹೀಗೆ ಹೇಳತಕ್ಕದ್ದು" ಎಂದು ಬ್ರಹ್ಮಗಿರಿ ಶಾಸನದಲ್ಲಿ ಹೇಳುತ್ತಾನೆ. ಅಂದರೆ, ಸಾಧಾರಣವಾಗಿ ಎಲ್ಲಾ ಪ್ರಾಂತಗಳ ಅಧಿಕಾರಿಗಳನ್ನೂ ಒಂದೇ ಸಮವಾಗಿ ಕಾಣುತ್ತಿದ್ದನೆಂದು ಸ್ಪಷ್ಟವಾಗುತ್ತದೆ.

"ಕೋಶಪೂರ್ವಾಃ ಸರ್ವಾರಂಭಾಃ" ಎಂದೂ "ಕೋಶಾಭಾವೇ ಧ್ರುವಂ ದಂಡವಿನಾಶಃ" ಎಂದೂ ಕೌಟಿಲ್ಯನು ಉಪದೇಶಮಾಡಿರುವನು. ಆದ್ದರಿಂದ ಅಶೋಕನ ರಾಜ್ಯಭರಣಕ್ಕೆ ಬೇಕಾಗಿದ್ದ ಕೋಶವನ್ನು ಯಾವರೀತಿ ಅವನು ಶೇಖರಿಸಿದನೆಂದು ವಿಚಾರಿಸೋಣ. ಇದಕ್ಕೆ ಅಶೋಕನ ಶಾಸನಗಳಿಂದ ನಮಗೆ ಯಾವ ಹೆಚ್ಚಿನ ವಿಷಯಗಳೂ ಗೊತ್ತಾಗುವುದಿಲ್ಲ. ಲುಂಬಿನೀ ಗ್ರಾಮಕ್ಕೆ ಅವನು ತೀರ್ಥಯಾತ್ರೆ ಹೋಗಿದ್ದಾಗ ಅಲ್ಲಿಯ ನಿವಾಸಿಗಳು ಅಂದಿನಿಂದ ಅಷ್ಟಭಾಗವನ್ನು ಮಾತ್ರ ಕೊಟ್ಟರೆ ಸಾಕೆಂದೂ ಬಲಿಯನ್ನು ಕೊಡಬೇಕಾಗಿಲ್ಲವೆಂದೂ ಘೋಷಿಸಿ ಅವರನ್ನು ತೃಪ್ತಿಪಡಿಸಿದನು. ಪ್ರಾಚೀನ ಕಾಲದಿಂದಲೂ ವ್ಯವಸಾಯಗಾರರು ಸರ್ಕಾರಕ್ಕೆ ಕೊಡಬೇಕಾಗಿದ್ದುದು ಷಡ್ಭಾಗ. ಅದನ್ನು ಅಷ್ಟಭಾಗಕ್ಕಿಳಿಸಿ ಅಶೋಕನು ಆ ಗ್ರಾಮಕ್ಕೆ ಉಪಕಾರಮಾಡಿದನು. ಇದಲ್ಲದೆ ರಾಜನಿಗೆ ಸ್ವಂತವಾದ ವ್ಯವಸಾಯ ಕ್ಷೇತ್ರಗಳು ಸಾಮ್ರಾಜ್ಯದ ನಾನಾ ಭಾಗಗಳಲ್ಲೂ ಇದ್ದುವು. ಗಣಿಗಳನ್ನೂ ವನಗಳನ್ನೂ ತನ್ನ ನೇರವಾದ ಆಡಳಿತದಲ್ಲೇ ಇಟ್ಟುಕೊಂಡು ಅವುಗಳಿಂದಲೂ ಆದಾಯ ಪಡೆದನು. ಆನೆಗಳೆಲ್ಲವೂ ಸರ್ಕಾರಕ್ಕೆ ಮೀಸಲಾಗಿದ್ದುವು. ಮಾದಕಪದಾರ್ಥಗಳನ್ನು ಸರ್ಕಾರದವರೇ ತಯಾರುಮಾಡಿ ತಮ್ಮ ಅಂಗಡಿ

ಗಳಲ್ಲೇ ಪ್ರಜೆಗಳಿಗೆ ಮಾರಿದ್ದರಿಂದ ಅದರಿಂದಲೂ ಹೆಚ್ಚು ಆದಾಯ ಬರುತ್ತಿತ್ತು. ನೂಲುವ ಮತ್ತು ನೇಯ್ಗೆಯ ಕಾರ್ಖಾನೆಗಳನ್ನೂ ದನಕರುಗಳ ಕಾವಲುಗಳನ್ನೂ ಸರ್ಕಾರದವರೇ ನಡೆಸುತ್ತಿದ್ದರು. ಹೊರದೇಶಗಳಿಂದ ಆಮದಾಗುವ ಪದಾರ್ಥಗಳಿಗೂ ರಾಜಮಾರ್ಗಗಳ ಮೇಲೆ ಮತ್ತು ನದಿಗಳ ಮೇಲೆ ಹಾದುಹೋಗುವ ವ್ಯಾಪಾರಪದಾರ್ಥಗಳಿಗೂ ಸುಂಕ ವಸೂಲು ಮಾಡುತ್ತಿದ್ದರು. ವ್ಯಾಪಾರಕ್ಕನುಕೂಲಿಸುವಂತೆ ನಾಣ್ಯಗಳೂ ಇದ್ದಿರಬೇಕು. ಇವಲ್ಲದೆ, ಪಟ್ಟಣಗಳಲ್ಲೂ ಗ್ರಾಮಗಳಲ್ಲೂ ಸಣ್ಣಪುಟ್ಟ ತೆರಿಗೆ ಗಳನ್ನೆತ್ತಿ ಅಲ್ಲಲ್ಲಿಯ ವೆಚ್ಚವನ್ನು ನೆರವೇರಿಸುತ್ತಿದ್ದರು.

ಜನಜೀವನದಲ್ಲಿ ಸರ್ಕಾರವು ನಿಕಟವಾದ ಸಂಬಂಧವನ್ನಿಟ್ಟುಕೊಂಡು ಅನೇಕ ವಿಧಗಳಲ್ಲಿ ಪ್ರಜಾಸೇವೆಯನ್ನು ಮಾಡುತ್ತಿತ್ತು. ರಾಜ್ಯರಕ್ಷಣೆಯೂ ಶಾಂತಿಸ್ಥಾಪನೆಯೂ ಈಗಿನಂತೆ ಆಗಲೂ ಸರ್ಕಾರದ ಮುಖ್ಯ ಕರ್ತವ್ಯ ವಾಗಿತ್ತು. ಅಶೋಕನ ಸೈನ್ಯದ ವಿಷಯವಾಗಿ ಅವನ ಶಾಸನಗಳಿಂದ ಯಾವುದೂ ಹೊರಬೀಳುವುದಿಲ್ಲ. ಆದರೆ ಅರ್ಥಶಾಸ್ತ್ರದಿಂದಲೂ ಪಾಶ್ಚಾತ್ಯರ ಗ್ರಂಥಗಳಿಂದಲೂ ಅದರ ಸ್ವರೂಪವನ್ನು ನಾವು ಸ್ಥೂಲವಾಗಿ ತಿಳಿದುಕೊಳ್ಳ ಬಹುದಾಗಿದೆ. ಕ್ಷತ್ರಿಯರನ್ನೇ ಹೆಚ್ಚಾಗಿ ಸೈನ್ಯಕ್ಕೆ ಸೇರಿಸಿಕೊಳ್ಳಬೇಕೆಂದೂ, ಆದರೆ ತಾತ್ಕಾಲಿಕವಾಗಿ ಅವಶ್ಯಬಿದ್ದಾಗ ಮಿತ್ರಜನ ಅಟವೀಜನ ಗಣ ಸಂಘ ಗಳಿಂದ ತರಿಸಿದ ಸೈನಿಕರನ್ನು ಉಪಯೋಗಿಸಬಹುದೆಂದೂ ಕೌಟಿಲ್ಯನು ಹೇಳುತ್ತಾನೆ. ಚಂದ್ರಗುಪ್ತನ ಸೈನ್ಯದಲ್ಲಿ ೯,೦೦೦ ಆನೆಗಳೂ ೩೦,೦೦೦ ಕುದುರೆಗಳೂ ೬೦,೦೦೦ ಕಾಲಾಳುಗಳೂ ೮,೦೦೦ ರಥಗಳೂ ಇದ್ದುವೆಂದು ಪ್ಲೈನಿಯೂ ಪ್ಲೂಟಾರ್ಕನೂ ಹೇಳುತ್ತಾರೆ. "ಹಸ್ತಿಪ್ರಧಾನೋಹಿ ವಿಜಯೋ ರಾಜ್ಞಾಂ" ಎಂದು ಕೌಟಿಲ್ಯನು ಹೇಳುತ್ತಾನೆ. (II, ೨) ಪ್ರತಿಯೊಂದು ಆನೆಯ ಮೇಲೆಯೂ ಮಾವುತನಲ್ಲದೆ ಮೂವರು ಬಿಲ್ಲಾಳುಗಳಿದ್ದರು. ಪ್ರತಿ ಯೊಂದು ರಥದಲ್ಲಿಯೂ ಸಾರಥಿಯನ್ನುಳಿದು ಐದುಮಂದಿ ಯೋಧರಿದ್ದರು. ಕಾಲಾಳುಗಳು ಅವರಷ್ಟೇ ಎತ್ತರದ ಬಿಲ್ಲುಗಳನ್ನು ಧರಿಸಿದ್ದರು. ಅದನ್ನು ನೆಲದ ಮೇಲಿರಿಸಿ ಎಡಗಾಲಿನಿಂದೊತ್ತಿ ಹಿಡಿದು ಹೆದೆಯೇರಿಸಿ ಮೂರುಗಜ ಉದ್ದ ವಾದ ಬಾಣಗಳನ್ನು ತೊಡಿಸಿ ಕಿವಿಯವರೆಗೆ ಎಳೆದು ಬಿಟ್ಟರೆ ಎದುರಾಳಿ ಹಿಡಿದ ಚರ್ಮದ ಗುರಾಣಿಯನ್ನೂ ಭೇದಿಸಿಕೊಂಡು ಹೋಗುತ್ತಿತ್ತು. ಅವರ ಹತ್ತಿರ ಅಗಲವಾದ ಖಡ್ಗಗಳೂ ಇದ್ದುವು. ಶತ್ರುಸೈನ್ಯದ ಸಮೀಪಕ್ಕೆ ಬಂದಾಗ ಎರಡು ಕೈಗಳಿಂದಲೂ ಖಡ್ಗವನ್ನು ಹಿಡಿದೆತ್ತಿ ವೀರಾವೇಶದಿಂದ ಅವರು ಕಾದಾಡುತ್ತಿದ್ದರಂತೆ. ಸವಾರರು ಬೆತ್ತಲೆ ಕುದುರೆಗಳ ಮೇಲೆಯೆ ಕುಳಿತು

ಯುದ್ಧಮಾಡುತ್ತಿದ್ದರು. ಪ್ರತಿಯೊಬ್ಬನೂ ಎರಡು ಭರ್ಜಿಗಳನ್ನೂ ಒಂದು ಸಣ್ಣ ಗುರಾಣಿಯನ್ನೂ ಹೊತ್ತಿದ್ದನು. ಪ್ರತಿಯೊಂದು ರಥದಲ್ಲೂ ನಾಲ್ಕು ಕುದುರೆಗಳನ್ನು ಕಟ್ಟಿದ್ದರು. ಭರ್ಜಿಯನ್ನು ಹಿಡಿದ ಇಬ್ಬರು ಸಾರಥಿಗಳು, ಇಬ್ಬರು ಬಿಲ್ಲಾಳಿಗಳು, ಗುರಾಣಿಗಳಿಂದ ಬಾಣಗಳನ್ನು ತಡೆಯಲು ಇಬ್ಬರು— ಹೀಗೆ ಆರುಜನ ಪ್ರತಿಯೊಂದು ರಥದಲ್ಲೂ ಇದ್ದರಂತೆ.

ದೇಶದಲ್ಲಿ ಶಾಂತಿಯನ್ನು ನೆಲೆಗೊಳಿಸಲು ಗೂಢಚಾರರೂ ಪ್ರತಿವೇದಕರೂ ಕಂಟಕಶೋಧಕರೂ ಇದ್ದರು. ನ್ಯಾಯಾಧ್ಯಕ್ಷ ಅಥವಾ ನಗರವ್ಯವಹಾರಕರು ತಪ್ಪಿತಸ್ಥರನ್ನು ಶಿಕ್ಷಿಸುತ್ತಿದ್ದರು. ಪರಿಕ್ಲೇಶ, ಅಂದರೆ, ಚಿತ್ರಹಿಂಸೆಯಿಂದ ನಿಜಾಂಶವನ್ನು ಹೊರಪಡಿಸಲು ಪ್ರಯತ್ನಿಸುವ ತಂತ್ರ ಆಗಿನ ಕಂಟಕ ಶೋಧಕರಿಗೂ ತಿಳಿದಿತ್ತು. ಕಾರಾಗೃಹವಾಸವೂ ವಧೆಯ ಶಿಕ್ಷೆಯೂ ಪ್ರಜೆ ಗಳನ್ನು ಸಭ್ಯರಾಗಿರುವಂತೆ ಎಚ್ಚರಿಸಿದುವು. ಸಾಮಾನ್ಯವಾದ ಎಲ್ಲಾ ಅಪರಾಧಗಳಿಗೂ ದಂಡವನ್ನು ವಿಧಿಸುತ್ತಿದ್ದರು.

ಮುಖ್ಯವಾದ ರಾಜಮಾರ್ಗಗಳನ್ನು ನಿರ್ಮಿಸುವುದೂ ರಕ್ಷಿಸುವುದೂ ಕೇಂದ್ರಸರ್ಕಾರದ ಕರ್ತವ್ಯವಾಗಿತ್ತು. ತಕ್ಷಶಿಲೆಯಿಂದ ಪಾಟಲೀಪುತ್ರದ ವರೆಗೂ ಇಂತಹದೊಂದು ಮಾರ್ಗವಿತ್ತೆಂದು ಮೆಗಾಸ್ತನೀಸನು ಹೇಳುತ್ತಾನೆ. ಪ್ರತಿ ಅರ್ಧಕ್ರೋಶಕ್ಕೂ ಒಂದು ಭಾವಿಯೂ ಅರವಟ್ಟಿಗೆಯೂ ಪ್ರಯಾಣಿ ಕರು ದಣುವಾರಿಸಿಕೊಂಡು ಹೋಗುವಂತೆ ಒಂದು ಮನೆಯೂ ಏರ್ಪಾಟಾ ಗಿತ್ತು. ಬ್ರಹ್ಮಗಿರಿ ಶಾಸನವನ್ನು ಬರೆದ ಲಿಪಿಕಾರನು ತನ್ನ ಹೆಸರನ್ನು ಖರೋಷ್ಠಿಲಿಪಿಯಲ್ಲಿ ಬರೆದಿರುವುದರಿಂದ ಅವನು ಎಷ್ಟು ದೂರದಿಂದ ಬಂದಿರ ಬೇಕೆಂದೂ ಆಗಿನ ಕಾಲದಲ್ಲಿ ಪ್ರಯಾಣಸೌಕರ್ಯ ಚೆನ್ನಾಗಿದ್ದಿತೆಂದೂ ಊಹಿಸಬಹುದು. ನಾಣ್ಯಗಳನ್ನು ಮಾಡುವ ದೊಡ್ಡ ಹೊಣೆಗಾರಿಕೆಯನ್ನು ಕೇಂದ್ರಸರ್ಕಾರವೇ ವಹಿಸಿಕೊಂಡಿತ್ತೆಂದೂ, ಹಿಂದಿನಂತೆ ಸ್ವರ್ಣವ್ಯಾಪಾರಿ ಗಳಿಗೆ ಅದನ್ನು ಬಿಟ್ಟುಕೊಟ್ಟಿರಲಿಲ್ಲವೆಂದೂ ಕೌಟಿಲ್ಯನ ಮಾತುಗಳಿಂದ ಊಹಿಸ ಬಹುದಾಗಿದೆ. ವ್ಯವಸಾಯಕ್ಕೋಸ್ಕರ ಕೆರೆಕಟ್ಟೆಗಳನ್ನು ಕಟ್ಟುವುದು ಸರ್ಕಾ ರದ ಮುಖ್ಯ ಕರ್ತವ್ಯವಾಗಿದ್ದಿತು. ರಾಜಧಾನಿಗೆ ಬಹು ದೂರದಲ್ಲಿದ್ದ ಸೌರಾಷ್ಟ್ರದೇಶದಲ್ಲೂ ಕೂಡ ಕೇಂದ್ರಸರ್ಕಾರದವರು ಸುದರ್ಶನತಟಾಕ ವನ್ನು ನಿರ್ಮಿಸಿ ವ್ಯವಸಾಯಕ್ಕೆ ಸಹಾಯಮಾಡಿಕೊಟ್ಟರೆಂದು ಗೊತ್ತಾಗು ತ್ತದೆ. " ಸಹೋದಕಂ ಆಹಾರ್ಯೋದಕಂ ವಾ ಸೇತುಂ ಬಂಧಯೇತ್ " ಎಂದು ಕೌಟಿಲ್ಯನೂ ರಾಜರಿಗೆ ಉಪದೇಶಮಾಡಿದ್ದಾನೆ.

ಮೌರ್ಯಸಾಮ್ರಾಜ್ಯದಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚು ಆಡಳಿತ ಸ್ವಾತಂತ್ರ್ಯವಿತ್ತು. ಮಗಧದೇಶದ ಉತ್ತರದಲ್ಲಿ ಸ್ವತಂತ್ರ ಗಣರಾಷ್ಟ್ರಗಳು ಅನೇಕವಿದ್ದುವು. ಹಾಗೆಯೇ ಪಂಜಾಬಿಗೂ ಮಧ್ಯಇಂಡಿಯಾವಿಗೂ ನಡುವೆ ಇರುವ ಈಗಿನ ರಾಜಪುತ್ರಸ್ಥಾನದಲ್ಲಿ ಆಗ ಅನೇಕ ಜನಪದಗಳು ಸ್ವತಂತ್ರ ವಾಗಿದ್ದುವೆಂದು ಅಲೆಕ್ಸಾಂಡರನ ಕಾಲದ ಚರಿತ್ರಕಾರರು ಹೇಳುತ್ತಾರೆ. ಇವರೆಲ್ಲರನ್ನೂ ಸಾಮ್ರಾಜ್ಯವಲಯದೊಳಕ್ಕೆ ಸೇರಿಸಿದ್ದರೂ ಕೂಡ ಅವರವರ ಒಳ ಆಡಳಿತವನ್ನು ಅವರವರೇ ನಡೆಸುವಂತೆ ಅಪ್ಪಣೆ ಕೊಟ್ಟಿರಬೇಕು. ಏಕೆಂದರೆ, ಕೌಟಿಲ್ಯನೂ ಕೂಡ ಅದೇ ಸಲಹೆಯನ್ನೇ ಹೇಳಿದ್ದಾನೆ. ಸಾಮ್ರಾಜ್ಯದ ಪಟ್ಟಣಗಳಿಗೂ ಆಡಳಿತದಲ್ಲಿ ಹೆಚ್ಚು ಅಧಿಕಾರವಿದ್ದಂತೆ ಕಾಣುತ್ತದೆ. ಮೌರ್ಯ ರಾಜಧಾನಿಯಾದ ಪಾಟಲೀಪುತ್ರದ ವಿವರಣೆಯನ್ನು ಮೆಗಾಸ್ತನೀಸನು ಕೊಟ್ಟಿರುವನು. ಸೋನಾನದಿ, ಗಂಗಾನದಿಗಳಿಂದ ಸುರಕ್ಷಿತವಾಗಿ ಹದಿನೈದು ಚದರಮೈಲಿಗಳಷ್ಟು ವಿಶಾಲವಾದ ಪಾಟಲೀಪುತ್ರದ ಕೋಟೆಗೆ ೫೭೦ ಗೋಪುರ ಗಳೂ ೬೪ ಬಾಗಿಲುಗಳೂ ಇದ್ದುವಂತೆ. ೬೦೦ ಅಡಿ ಅಗಲದ ಅದರ ಕಂದಕ ದಲ್ಲಿ ೩೦ ಅಡಿ ಆಳದ ನೀರು ಸದಾ ತುಂಬಿತ್ತು. ಅದರ ಆಡಳಿತವು ೩೦ ಸದಸ್ಯರನ್ನೊಳಗೊಂಡ ಒಂದು ಸಭೆಗೆ ಸೇರಿತ್ತೆಂದು ಮೆಗಾಸ್ತನೀಸನು ಹೇಳುತ್ತಾನೆ. ಇವರನ್ನು ಆರು ಪಂಚಾಯಿತಿಗಳಾಗಿ ವಿಭಾಗಮಾಡಿದ್ದರು. ಕೈಗಾರಿಕೆಗಳ ಮತ್ತು ಕೆಲಸಗಾರರ ಮೇಲ್ವಿಚಾರಣೆ, ಶ್ರಮಜೀವಿಗಳ ಕಾರ್ಯ ದಕ್ಷತೆ ಪ್ರಾಮಾಣಿಕತೆ, ಸುಖಜೀವನ ಇವುಗಳನ್ನು ಪೋಷಿಸಲು ಬೇಕಾದ ಕಾರ್ಯಸಾಧನೆ ಇವು ಒಂದು ಸಮಿತಿಯ ಕೆಲಸವಾಗಿತ್ತು. ಕೌಟಿಲ್ಯನೂ ಕೂಡ ಶ್ರಮಜೀವಿಗಳ ವಿಷಯದಲ್ಲಿ ಅನೇಕ ವಿಧಿ ನಿಷೇಧಗಳನ್ನು ಕೊಟ್ಟಿರು ವನು. ನಗರಕ್ಕೆ ಬಂದುಹೋಗುವ ಹೊರದೇಶದವರ ಆಗುಹೋಗುಗಳು, ಅವರ ಆರೋಗ್ಯ ಸಂಪತ್ತು ಅವುಗಳ ರಕ್ಷಣೆ, ಅವರ ಉದ್ಯೋಗ ನಡೆನುಡಿಗಳ ಪರಿಶೀಲನೆ ಮುಂತಾದುವು ಮತ್ತೊಂದು ಸಮಿತಿಯ ಕಾರ್ಯವಾಗಿತ್ತು. ಇಂತಹವರಿಗೆ ಪ್ರತ್ಯೇಕವಾದ ನ್ಯಾಯಸ್ಥಾನಗಳನ್ನು ಕೂಡ ಏರ್ಪಡಿಸ ಬೇಕೆಂದು ಕೌಟಿಲ್ಯನು ಹೇಳಿರುತ್ತಾನೆ. ಜನನಮರಣಗಳ ಗಣನೆ ಮೂರ ನೆಯ ಸಮಿತಿಯ ಕರ್ತವ್ಯ. ಇದು ಕೂಲಂಕಷವಾಗಿ, ಅವಿಚ್ಛಿನ್ನವಾಗಿ ನಡೆಯಬೇಕಾದದ್ದು. ಆಡಳಿತದ ಎಲ್ಲಾ ಕೆಲಸಕಾರ್ಯಗಳಿಗೂ ಅತ್ಯವಶ್ಯಕ ವಾದದ್ದು. ಪ್ರತಿಯೊಂದು ಮನೆಯಲ್ಲಿಯೂ ವಾಸವಾಗಿರುವವರ ಸಂಖ್ಯೆ ಅವರ ವಯಸ್ಸು ಉಪಜೀವನದ ಮಾರ್ಗ ವರಮಾನ ವೆಚ್ಚ ಅವರ ದನಕರುಗಳ ಸಂಖ್ಯೆ ಇವುಗಳೆಲ್ಲವನ್ನೂ ಗಣನೆಮಾಡುವುದು ಈ ಸಮಿತಿಯ ಕಾರ್ಯಕ್ಷೇತ್ರ.

ವ್ಯಾಪಾರಕ್ಕೆ ಬೇಕಾದ ಅಳತೆ ತೂಕಗಳ ಪರೀಕ್ಷೆ, ಸಂತೆ ಮುಂತಾದವುಗಳಲ್ಲಿ ತೆರಿಗೆಯ ವಸೂಲಿ, ಬೆಲೆಯ ಏರಿಳಿತದ ಮೇಲೆ ಹತೋಟಿ, ಇವುಗಳನ್ನು ನಾಲ್ಕನೆಯ ಸಮಿತಿ ಮಾಡುತ್ತಿತ್ತು. ಐದನೆಯ ಸಮಿತಿಯವರು ನಗರ ಸಭೆಯವರೇ ನಡೆಸುತ್ತಿದ್ದ ಕಾರ್ಖಾನೆಗಳಲ್ಲೂ ಸಂಸ್ಥೆಗಳಲ್ಲೂ ತಯಾರಾದ ಪದಾರ್ಥಗಳನ್ನು ಮಾರಿ ಲಾಭಪಡೆಯುವುದರಲ್ಲಿ ಉದ್ಯುಕ್ತರಾಗಿದ್ದರು. ಕಡೆಯದಾಗಿ ಬಟ್ಟೆ ಲೋಹ ಗಂಧ ಎಣ್ಣೆ ಸಕ್ಕರೆ ಉಪ್ಪು ಮೊದಲಾದ ಪದಾರ್ಥಗಳ ಮೇಲೆ ಸುಂಕವನ್ನು ವಸೂಲುಮಾಡುವುದು, ಆರನೆಯ ಸಮಿತಿಯ ಕರ್ತವ್ಯ. ಈ ರೀತಿಯ ಸಮಿತಿಗಳ ಪ್ರಸ್ತಾಪ ಅರ್ಥಶಾಸ್ತ್ರದಲ್ಲಿಲ್ಲದಿದ್ದರೂ ಮೆಗಾಸ್ತನೀಸನಿಗೆ ಪಾಟಲೀಪುತ್ರದ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಹೆಚ್ಚು ಅವಕಾಶವಿದ್ದುದರಿಂದ ಅವನ ಮಾತನ್ನೇ ನಾವು ನಂಬಬೇಕಾಗಿದೆ. ಸಾಮ್ರಾಜ್ಯದ ಇತರ ಪಟ್ಟಣಗಳೂ ಕೂಡ ರಾಜಧಾನಿಯಂತೆಯೇ ಆಡಳಿತವನ್ನು ಅಳವಡಿಸಿಕೊಂಡಿದ್ದುವೆಂದು ನಾವು ಊಹಿಸಬಹುದಾಗಿದೆ.

ಸಾಮಾನ್ಯವಾಗಿ ಅಧಿಕಾರಿಗಳೆಲ್ಲರಿಗೂ "ಪುರುಷ" ಎಂಬ ಹೆಸರಿದ್ದಂತೆ ಕಾಣುತ್ತದೆ. ಕೌಟಿಲ್ಯನೂ ಕೂಡ "ಯುಕ್ತೋಪಯುಕ್ತ ತತ್ಪುರುಷಾಣಾಂ" ಎಂದು ಹೇಳಿ, "ಪುರುಷ" ಎಂಬ ಅಧಿಕಾರಿಗಳಲ್ಲಿ ಯುಕ್ತ, ಉಪಯುಕ್ತ ಎಂಬ ಎರಡು ಪಂಗಡಗಳಿದ್ದುವೆಂದು ತಿಳಿಸುತ್ತಾನೆ. ಪ್ರದೇಶ ಅಥವಾ ಆಹಾರ, ವಿಷಯ ಇವುಗಳಲ್ಲಿ ಸರ್ಕಾರಕ್ಕೆ ಸೇರಿದ ಆಸ್ತಿಪಾಸ್ತಿಗಳನ್ನು ನೋಡಿಕೊಳ್ಳುವುದು, ರಾಜಾದಾಯವನ್ನು ಸಂಗ್ರಹಮಾಡುವುದು ಇವು ಯುಕ್ತರ ಕರ್ತವ್ಯವಾಗಿತ್ತು. ಅವರಿಗೆ ಸಹಾಯಕರಾಗಿ ನಿರ್ವಹಿಸುವವರೇ 'ಉಪಯುಕ್ತ'ರು. ಈಗಿನ ಕಾಲದ 'ಸಿವಿಲ್ ಸರ್ವಿಸ್'ನಂತೆಯೇ 'ಪುರುಷ' ಎಂಬ ಅಧಿಕಾರಿಗಳನ್ನು ನಿಯಮಿಸುತ್ತಿದ್ದರೆಂದೂ, ಅವರ ಕಾರ್ಯದಕ್ಷತೆಗನುಗುಣವಾಗಿ ನಿರ್ದಿಷ್ಟವಾದ ಕಾಲಪ್ರಮಾಣಗಳಲ್ಲಿ ಅವರನ್ನು ಊರಿಂದೂರಿಗೆ ವರ್ಗಾಯಿಸುತ್ತಿದ್ದರೆಂದೂ ಮೇಲುಮೇಲಿನ ಅಧಿಕಾರಗಳಿಗೆ ಏರಿಸುತ್ತಿದ್ದರೆಂದೂ ಕೇಂದ್ರಸರ್ಕಾರದ ಅಧೀನದಲ್ಲೇ ಅವರು ಕೆಲಸಮಾಡುತ್ತಿದ್ದರೆಂದೂ ಹೇಳಬಹುದು. "ನನ್ನ ಪುರುಷರೂ ಕೂಡ: ಉತ್ಕೃಷ್ಟರೂ ನಿಕೃಷ್ಟರೂ ಅಧಮರೂ" ಎಂದು ಮೊದಲನೆಯ ಸ್ತಂಭಶಾಸನದಲ್ಲಿ ಹೇಳಿದೆ. 'ಪುರುಷರು ಬಹುಜನರ ಹಿತಕ್ಕಾಗಿ ನಿಯಮಿತರಾಗಿರುವರು', ಎಂದು ಏಳನೆಯ ಸ್ತಂಭಶಾಸನದಲ್ಲಿ ಹೇಳಿದೆ. ತನ್ನ ಆಜ್ಞೆಗಳನ್ನು ಬಲ್ಲ ಪುರುಷರನ್ನು ರಜ್ಜುಕರು ಅನುಸರಿಸಬೇಕೆಂದು ಅಶೋಕನು ಉಪದೇಶಿಸಿರುವುದರಿಂದ ಪುರುಷರಿಗೂ ಕೇಂದ್ರಸರ್ಕಾರಕ್ಕೂ ವಿಶೇಷ ಸಂಬಂಧವಿದ್ದಿರ

ಬೇಕೆಂದು ತೋರುತ್ತದೆ. ಪ್ರಾಂತಗಳಲ್ಲಿನ ವಿದ್ಯಮಾನಗಳನ್ನು ಪರಿಶೀಲಿಸಿ ಅಲ್ಲಿಯ ಅಧಿಕಾರಿಗಳನ್ನು ಟೀಕಿಸಿ ರಾಜಧಾನಿಗೆ ವರದಿಯನ್ನೊಪ್ಪಿಸಲು ಕೌಟಿಲ್ಯನು ಸೂಚಿಸಿರುವ ಗೂಢಪುರುಷರನ್ನೇ ಶಾಸನಗಳಲ್ಲಿ 'ಪುರುಷ'ರೆಂದು ಹೇಳಿದ್ದರೂ ಇರಬಹುದು. ಈಗ ಸಿವಿಲ್ ಸರ್ವಿಸ್ ವ್ಯವಸ್ಥೆಯಲ್ಲಿ ಆ ಗುಂಪಿನ ಅಧಿಕಾರಿಗಳನ್ನು ರೆವೆನ್ಯೂ ಇಲಾಖೆಯಲ್ಲಿ ಮಾತ್ರವೇ ಅಲ್ಲದೆ ನ್ಯಾಯಸ್ಥಾನಗಳಲ್ಲೂ ಸ್ಥಳೀಯಸಂಸ್ಥೆಗಳಲ್ಲೂ ಇತರ ಇಲಾಖೆಗಳಲ್ಲೂ ನಿಯಮಿಸುವಂತೆ ಆಗಲೂ 'ಪುರುಷ'ರನ್ನು ಇಲಾಖೆಯಿಂದ ಇಲಾಖೆಗೆ ಬದಲಾಯಿಸುತ್ತಿದ್ದರೆಂದು ತೋರುತ್ತದೆ. ಅನುಭವಸ್ಥರೂ ಮೇಧಾವಿಗಳೂ ಆದ 'ಪುರುಷ'ರನ್ನು 'ಮುಖ್ಯರು,' ಎಂದರೆ ಕೌಟಿಲ್ಯನ ಮಾತಿನಲ್ಲಿ 'ಅಧ್ಯಕ್ಷ'ರು, ಇಲಾಖೆಗಳ ಮುಖ್ಯ ಅಧಿಕಾರಿಗಳು, ಪ್ರಾದೇಶಿಕರು, ರಜ್ಜುಕರು, ನಗರವ್ಯವಹಾರಕರು ಮುಂತಾದ ಕೆಲಸಗಳಿಗೆ ನಿಯಮಿಸುತ್ತಿದ್ದರು. ಅಂತಹ ಮೇಲುತರಗತಿಯ 'ಪುರುಷ'ರಿಗೆ 'ಮಹಾಮಾತ್ರ'ರೆಂಬ ಹೆಸರಿದ್ದಂತೆ ಕಾಣುತ್ತದೆ. "ಅಂತ ಮಹಾಮಾತ್ರರು" 'ಮಹಾಮಾತ್ರ ನಾಗರಿಕ' ಎಂಬ ಹೆಸರುಗಳಿಂದ ಇವರು ದೊಡ್ಡ ಶ್ರೇಣಿಗೆ ಸೇರಿದವರೆಂದು ಗೊತ್ತಾಗುತ್ತದೆ.

ಅಶೋಕನ ಕಾಲದಲ್ಲಿ ಧರ್ಮದ ಇಲಾಖೆ ಎಂಬ ಒಂದು ಹೊಸ ಇಲಾಖೆ ಸೃಷ್ಟಿಯಾಯಿತು. ಮಹಾಮಾತ್ರರಲ್ಲಿ ಧರ್ಮಾಭಿಲಾಷಿಗಳಾದ ಹಲವರನ್ನು ಈ ಇಲಾಖೆಗೆ ವರ್ಗಾಯಿಸಿ ಅದರ ಮೂಲಕ ಧರ್ಮವಿಜಯ ನಡೆಯುವಂತೆ ಅಶೋಕನು ಏರ್ಪಾಟುಮಾಡಿದನು. ಕೌಟಿಲ್ಯನು "ಧರ್ಮಸ್ಥರು" ಎಂಬ ಕೆಲವು ಅಧಿಕಾರಿಗಳನ್ನು ಸೂಚಿಸುತ್ತಾನೆ. ದೇವಬ್ರಾಹ್ಮಣ ತಪಸ್ವಿ ಸ್ತ್ರೀ ಬಾಲವೃದ್ಧ ವ್ಯಾಧಿತ ಅನಾಥೆಯರ ಶುಶ್ರೂಷೆಗಾಗಿ ಅವರನ್ನು ವ್ಯವಸ್ಥೆ ಮಾಡಬೇಕೆಂದು ಕೌಟಿಲ್ಯನು ಸೂಚಿಸಿರುವನು. ಈ ಸಲಹೆಯನ್ನೇ ಉಪಯೋಗಿಸಿಕೊಂಡು ಅಶೋಕನು ಧರ್ಮಸ್ಥರ ಕಾರ್ಯಕ್ಷೇತ್ರವನ್ನು ಮತ್ತಷ್ಟು ವಿಸ್ತರಿಸಿ, ಅವರ ಪ್ರಯತ್ನಗಳು ಹೆಚ್ಚು ಫಲಕಾರಿಯಾಗುವಂತೆ ಕಾನೂನು ಮುಂತಾದವುಗಳನ್ನು ಒದಗಿಸಿಕೊಟ್ಟನು. ಧರ್ಮಸಂಘಗಳ ಒಳಾಡಳಿತಗಳು ಸರಿಯಾಗಿ ನಡೆಯುವಂತೆಯೂ, ಅವುಗಳಿಗೆ ದತ್ತಿಯಾಗಿ ಬಂದ ಸ್ವತ್ತನ್ನು ಸರಿಯಾಗಿ ವಿನಿಯೋಗಿಸುವುದಕ್ಕೂ ನ್ಯಾಯಸ್ಥಾನಗಳ ತೀರ್ಪುಗಳನ್ನು ಪುನರ್ವಿಮರ್ಶಿಸಿ ನಿರ್ದಾಕ್ಷಿಣ್ಯವಾದ ನ್ಯಾಯದೃಷ್ಟಿಯಿಂದ ನೊಂದ ಅಪರಾಧಿಗಳಿಗೆ ಸುಖಶಾಂತಿಗಳನ್ನು ದೊರಕಿಸುವುದಕ್ಕೂ, ಅವರಿಗೆ ಅಧಿಕಾರವನ್ನು ಕೊಟ್ಟನು.

ಮೌರ್ಯಸಾಮ್ರಾಜ್ಯದ ಸ್ಥಾಪನೆಗೆ ಮೊದಲೇ ಪೂರ್ವದೇಶಗಳಲ್ಲಿ ಅನೇಕ ರಾಷ್ಟ್ರಗಳು ಮೂಡಿ ಮುಳುಗಿದ್ದುವು. ಮೆಸೂಪೊಟೇಮಿಯಾದಲ್ಲಿ ಸುಮೇರಿಯಾ ಬೆಬಿಲೋನಿಯ ಅಸೀರಿಯಾ ಚಕ್ರಾಧಿಪತ್ಯಗಳ ಆಡಳಿತ ಕ್ರಮವನ್ನೇ ಅನುಸರಿಸಿ ಇರಾನಿಯವರು ಸಿಂಧೂನದಿಯವರೆಗೂ ಹರಡಿದ್ದ ತಮ್ಮ ಅಖಮನಿ ಸಾಮ್ರಾಜ್ಯವನ್ನು ನೆಲೆಗೊಳಿಸಿದರು. ಅದನ್ನು ನಾಶಗೊಳಿಸಿ ಪೂರ್ವ-ಪಶ್ಚಿಮ ಯವನ—ಇರಾನಿ ಸಂಸ್ಕೃತಿಗಳ ಮಿಲನದಿಂದ ಹೊಸ ಯುಗವೊಂದನ್ನು ಪ್ರಾರಂಭಿಸುವೆನೆಂದು ಸಾಹಸಪಟ್ಟ ಅಲೆಕ್ಸಾಂಡರನ ಚಕ್ರಾಧಿಪತ್ಯವು ಒಡೆದ ಕನ್ನಡಿಯಂತೆ ಹರಕುಮುರುಕಾಗಿ ಅಂದಗೆಟ್ಟಿತು. ಆದರೆ, ವೇದಗಳ ಕಾಲದಿಂದಲೂ ಧಾರ್ಮಿಕ ಆದರ್ಶಗಳಿಂದ ಪುಟಗೊಂಡು ಪುನೀತವಾದ ಭಾರತವರ್ಷದಲ್ಲಿ ಅದೇ ಆದರ್ಶಗಳ ಅಸ್ತಿಭಾರದ ಮೇಲೆ ಕಟ್ಟಿದ ಮೌರ್ಯರ ಆಡಳಿತ ಕ್ರಮ ಅನೇಕ ಶತಮಾನಗಳವರೆಗೂ ತನ್ನ ಪ್ರಭಾವವನ್ನು ಬೀರಿ ಇಂದಿಗೂ ಮಾದರಿಯಾಗಿ ನಿಂತಿದೆ.

# ೬. ಅಶೋಕನ ಕಾಲದ ಶಿಲ್ಪ

ಮೌರ್ಯರ ಕಾಲದ ವರೆಗೆ ಹಿಂದೂಸ್ತಾನದಲ್ಲಿ ಶಿಲಾವಿಗ್ರಹಗಳೂ ಇತರ ಶಿಲ್ಪಕಲೆಯ ಕುರುಹುಗಳೂ ಹೆಚ್ಚಾಗಿ ದೊರೆಯುವುದಿಲ್ಲ. ಪಾಟಲೀಪುತ್ರದ ಕೋಟೆಯನ್ನು ಮರದಿಂದ ಮಾಡಿದ್ದರೆಂದು ಮೆಗಾಸ್ತನೀಸ್ ಹೇಳುತ್ತಾನೆ. ೧೯೧೫ರಲ್ಲಿ ಸರ್ ರತನ್ ತಾತಾರವರ ಉದಾರಾಶ್ರಯದಲ್ಲಿ ಪಾಟಲೀಪುತ್ರದ ಪ್ರಾಚೀನ ನಿವೇಶನದ ಸಂಶೋಧನೆಯ ಕೆಲಸವನ್ನು ಡಾ|| ಸ್ಪೂನರ್ ಎಂಬುವರು ಕೈಕೊಂಡರು. ಪಾಟ್ನಾನಗರದ ಹತ್ತಿರ ಬುಲಂದೀಬಾಗ್ ಎಂಬ ಪ್ರದೇಶದಲ್ಲಿ ಅವರು ಭೂಶೋಧನೆ ನಡೆಸಿದಾಗ ಮೆಗಾಸ್ತನೀಸ್ ವಿವರಿಸಿದ ಮರದ ಪೌಳಿಯ ಅವಶೇಷಗಳು ಹೇರಳವಾಗಿ ಗೋಚರವಾದುವು. ನೆಲದಡಿ ೨೨ ಅಡಿಯಷ್ಟು ಕೆಳಮಟ್ಟದಲ್ಲಿ ಓರೆಯಾಗಿ ಊರಿದ್ದ ದೊಡ್ಡದೊಡ್ಡ ಮರದ ತೊಲೆಗಳ ಕೆಳಭಾಗಗಳು ಅವರಿಗೆ ಸಿಕ್ಕಿದುವು. ಉದ್ದಕ್ಕೂ ಸಾಲಾಗಿ ಜೋಡಿಸಿದ್ದ ೧೨, ೧೪ ಅಡಿ ಉದ್ದದ ಸಣ್ಣ ದಿಮ್ಮಿಗಳೂ ಕಂಡುಬಂದುವು. ಹಾಗೆಯೇ, ಮೌರ್ಯರಾಜರ ಅರಮನೆಯ ಅವಶೇಷಗಳನ್ನೊಳಗೊಂಡ ನಿವೇಶನವನ್ನು ಅಗೆದಾಗಲೂ ನೆಲದ ಕೆಳಗೆ ೧೫ ಅಡಿಯಷ್ಟು ಆಳದಲ್ಲಿ ೪೦ ಅಡಿ ಉದ್ದ ಐದೂವರೆ ಅಡಿ ಅಗಲ ನಾಲ್ಕೂವರೆ ಅಡಿ ದಪ್ಪ ಇರುವ ಮರದ ತೊಲೆಗಳನ್ನೇ ಜೋಡಿಸಿ ಮಾಡಿದ ಏಳು ಇಡೀ ಮಂಟಪಗಳು ಸಿಕ್ಕಿದುವು. ಸುತ್ತಲೂ ಮರದ ಕಂಬಗಳನ್ನು ನೆಟ್ಟು ತೊಲೆಗಳ ಗುಂಪನ್ನು ಭದ್ರಪಡಿಸಿತ್ತು. ಒಂದಕ್ಕೊಂದನ್ನು ಸೇರಿಸಿದ್ದು ಗೊತ್ತಾಗದಂತೆ ತೊಲೆಗಳನ್ನು ಬಿಗಿದು ಒಟ್ಟು ಮಂಟಪವನ್ನು ಬಹು ಅಂದವಾಗಿ ರಚಿಸಿತ್ತು. ಆದ್ದರಿಂದ ಮೆಗಾಸ್ತನೀಸ್ ಹೇಳಿರುವಂತೆಯೇ ಆಗಿನ ಕಾಲದಲ್ಲೂ ಅದರ ಹಿಂದೆಯೂ ಕಟ್ಟಡಗಳಿಗಾಗಿ ಮರವನ್ನೇ ಹೆಚ್ಚು ಉಪಯೋಗಿಸಿದ್ದಂತೆ ತೋರುತ್ತದೆ.

ಆದರೆ, ಶಿಲಾಶಿಲ್ಪ ಕೂಡ, ಕಲ್ಲು ಬಂಡೆಗಳು ಅನಾಯಾಸವಾಗಿ ಸಿಗುತ್ತಿದ್ದ ಕಡೆಗಳಲ್ಲಿ, ಅಭಿವೃದ್ಧಿ ಹೊಂದಿತ್ತು. ಅಲೆಕ್ಸಾಂಡರನೊಂದಿಗೆ ಬಂದಿದ್ದ ಯವನ ಚರಿತ್ರಕಾರರು ವಾಯವ್ಯಪ್ರಾಂತದ ಹಲವು ನಗರಗಳನ್ನು ವರ್ಣಿಸುವಾಗ ಈ ವಿಷಯವನ್ನು ಹೊರಗೆಡಹಿದ್ದಾರೆ. ಉದಾಹರಣೆಗೆ, ಅಶ್ಮಕ ಎಂಬ ರಾಜ್ಯದಲ್ಲಿದ್ದ ಮಸ್ಸಗದುರ್ಗದ ಕೋಟೆಗೋಡೆಯ ಅಸ್ತಿಭಾರವನ್ನೆಲ್ಲ ಕಲ್ಲು ಬಂಡೆಗಳಿಂದಲೇ ಮಾಡಿದ್ದರಂತೆ. ಕಟ್ಟಡಗಳಿಗೆ ಮಾತ್ರವೇ ಅಲ್ಲದೆ, ಶಿಲಾಸ್ತಂಭಗಳನ್ನೂ ಆಗಿನ ಕಾಲದಲ್ಲಿ ಮಾಡಿಸಿ ನಿಲ್ಲಿಸುತ್ತಿದ್ದರೆಂದು

ಅಶೋಕನೇ ಹೇಳುತ್ತಾನೆ. ಬ್ರಹ್ಮಗಿರಿ ಶಾಸನದಲ್ಲಿ "ಶಿಲಾಸ್ತಂಭಗಳೆಲ್ಲಿವೆಯೋ ಆ ಶಿಲಾಸ್ತಂಭಗಳ ಮೇಲೂ ಬರೆಯಿಸಿ" ಎಂದು ಅಶೋಕನು ಹೇಳಿರುವುದರಿಂದ ಅವನ ಹಿಂದಿನ ರಾಜರು ಕೂಡ, ಸ್ತಂಭಗಳನ್ನು ಕಡೆದು ನಿಲ್ಲಿಸುತ್ತಿದ್ದರೆಂದು ಗೊತ್ತಾಗುತ್ತದೆ. ಪಾಟಲೀಪುತ್ರದ ನಿವೇಶನವನ್ನಗೆದಾಗ, ಹಿಂದೆ ಮೌರ್ಯರ ಅರಮನೆ ಇದ್ದ ಸ್ಥಳದಲ್ಲಿ ಅವರ ಸಭಾಮಂಟಪದಲ್ಲಿ ನೂರು ಭಾರಿ ಶಿಲಾಸ್ತಂಭಗಳಿದ್ದುವೆಂದೂ ಆ ನಿವೇಶನದಲ್ಲಿ ಈಗ ಸಾಲಾಗಿ ಕಾಣುತ್ತಿರುವ ಗುಳಿಗಳ ಪರೀಕ್ಷೆಯಿಂದ ಅವೆಲ್ಲವೂ ಸುಮಾರು ಹತ್ತು ವರ್ಷಕ್ಕೆ ಒಂದು ಅಂಗುಲದಂತೆ ಆ ಜೌಗು ನೆಲದೊಳಕ್ಕಿಳಿದು ಅದೃಶ್ಯವಾಗಿ ಪಾತಾಳ ಸೇರಿರಬೇಕೆಂದೂ ಡಾ|| ಸ್ಪೂನರ್‌ರವರು ಕಂಡುಹಿಡಿದಿದ್ದಾರೆ. ಆಗಿದ್ದ ನೂರು ಕಂಬಗಳ ಪೈಕಿ ಈಗ ಒಂದೇ ಒಂದು ಕಂಬದ ಅರ್ಧಭಾಗ ಮಾತ್ರ ದೃಷ್ಟಿಗೆ ಗೋಚರವಾಗುವಂತೆ ನೆಲದಡಿಯಲ್ಲಿ ಬಿದ್ದಿದೆ. ಅಶೋಕನು ತನ್ನ ಶಾಸನಗಳನ್ನು ಕತ್ತಿರುವ ಸ್ತಂಭಗಳ ಗಾತ್ರ ಎತ್ತರ ನುಣುಪು ಸೊಬಗು ಇವುಗಳನ್ನು ನೆನೆದರೆ ಆ ಸಭಾಮಂಟಪದ ಕಂಬದ ಸಾಲಿನ ಅಂದಚಂದಗಳನ್ನು ನಾವು ಮನಗಾಣಬಹುದಾಗಿದೆ.

ಪರ್ಷ್ಯಾ ದೇಶದ ಶಿಲ್ಪಿಗಳು ಹಿಂದೂಸ್ತಾನಕ್ಕೆ ಬಂದು ತಮ್ಮ ಸಾಮ್ರಾಜ್ಯದಲ್ಲಿದ್ದ ಸ್ತಂಭನಿರ್ಮಾಣಕಲೆಯನ್ನು ಇಲ್ಲಿಗೆ ತಂದರೆಂದು ಸ್ಪೂನರ್‌ರವರು ಅಭಿಪ್ರಾಯಪಡುತ್ತಾರೆ. ಅಲ್ಲದೆ, ಪರ್ಷ್ಯಾದೇಶದಲ್ಲಿ ಅನುಸರಣೆಯಲ್ಲಿದ್ದ ಅಗ್ನಿಪೂಜೆ, ಅಲ್ಲಿನ ರಾಜ್ಯಭಾರಕ್ರಮ, ಅಲ್ಲಿನ ಸಭಾಮಂಟಪ, ಇವೆಲ್ಲವೂ ಮೌರ್ಯರ ಕಾಲದಲ್ಲಿ ನಮ್ಮ ದೇಶದಲ್ಲೂ ಬಹಳಮಟ್ಟಿಗೆ ಪ್ರಚಾರವಾಯಿತೆಂಬುದು ಅವರ ಮತ. ಪರ್ಷ್ಯಾ ರಾಜಧಾನಿಯಲ್ಲಿದ್ದ ಸಭಾಮಂಟಪವನ್ನೇ ಅಶೋಕನ ಸಭಾಮಂಟಪವು ಕೂಡ ಸರ್ವವಿಧದಲ್ಲೂ ಹೋಲುತ್ತಿತ್ತೆಂದು ಅವರು ವಾದಿಸುತ್ತಾರೆ. ನೆರೆ ದೇಶಗಳ ಸಂಸ್ಕೃತಿ ನಮ್ಮ ದೇಶದಲ್ಲೂ ವ್ಯಾಪಿಸಿತೆಂದರೆ ಅದು ಸಹಜವೆನಿಸುವುದು. ಆದರೆ, ನಮ್ಮ ದೇಶದಲ್ಲಿಲ್ಲದ ಒಂದು ಕಲೆಯನ್ನು ಹೊರದೇಶದ ಶಿಲ್ಪಿಗಳು ಹಠಾತ್ತಾಗಿ ತಂದು ಹರಡಿದರೆಂದರೆ, ಪ್ರಾಚೀನ ಇತಿಹಾಸಕಾಲದಲ್ಲಿ ಅಷ್ಟು ಸಹಜವಲ್ಲ. ಅಲ್ಲದೆ, ಮೌರ್ಯ ಸಾಮ್ರಾಜ್ಯ ಸ್ಥಾಪನೆಯಾಗುವ ಸಮಯಕ್ಕೆ ಸರಿಯಾಗಿ ಪರ್ಷ್ಯಾ ಸಾಮ್ರಾಜ್ಯವೂ ರಾಜಧಾನಿಯೂ ಯವನರ ಕೋಪಾಗ್ನಿಗೆ ತುತ್ತಾಗಿತ್ತು. ಪರ್ಷ್ಯಾ ದೇಶದ ಶಿಲ್ಪಿಗಳ ಸ್ತಂಭಗಳಿಗೂ ಅಶೋಕನ ಸ್ತಂಭಗಳಿಗೂ ಸನ್ನಿವೇಶ ರೂಪು ಪ್ರಯೋಜನ ಶಿರೋವಿಗ್ರಹ, ಇವುಗಳಲ್ಲಿ ಗಣ್ಯವಾದ ವ್ಯತ್ಯಾಸಗಳೂ ಇವೆ. ಆದ್ದರಿಂದ, ಅಶೋಕನ ಕಾಲದ ಶಿಲ್ಪ ಕೇವಲ ಭಾರತೀಯ

ಕಲೆ ಎಂದು ನಾವು ಧಾರಾಳವಾಗಿ ಹೇಳಬಹುದಾಗಿದೆ. ಪ್ರಸಿದ್ಧ ಕಲಾವಿದಗ್ಧರಾದ ಕಾಡ್ರಿಂಗ್‌ಟನ್, ಹ್ಯಾವೆಲ್, ಆನಂದಕುಮಾರಸ್ವಾಮಿ ಮುಂತಾದವರೂ ಅಶೋಕನ ಕಲೆಯನ್ನು ಭಾರತೀಯ ಕಲೆ ಎಂದೇ ಹೇಳುತ್ತಾರೆ.

ಅಶೋಕನ ಕಾಲದ ಸ್ತಂಭಗಳನ್ನು ಕಲಾಭಿಜ್ಞರು ಬಾಯಿತುಂಬ ಹೊಗಳುವರು. ಅವುಗಳನ್ನು ನೂರಾರು ಮೈಲಿ ದೂರದಿಂದ ಸಾಗಿಸಿ, ಶತಮಾನಗಳ ಹೊಡೆತಕ್ಕೆ ಕೊಂಚವೂ ಜಗ್ಗದೆ ತಲೆಯೆತ್ತಿ ನಿಲ್ಲುವಂತೆ ಸ್ಥಾಪಿಸಿ, ಆಗಿನ ಕಾಲದ ಶಿಲ್ಪಿಗಳು ನಮ್ಮನ್ನು ಅಚ್ಚರಿಗೊಳಿಸಿದಾರೆ. ಅಶೋಕನ ಕಾಲಾನಂತರ, ೧೫೮೦ ವರ್ಷಗಳು ಕಳೆದಮೇಲೆ, ದಿಲ್ಲಿಯ ಪಾದಷಹನಾಗಿದ್ದ ಫಿರೋಜ್‌ಷಹ ತೊಗ್ಲಕ್ ಎಂಬುವನು ಆ ಸ್ತಂಭಗಳಲ್ಲೊಂದನ್ನು 'ತೋಪ್ರ' ಎಂಬಲ್ಲಿಂದ ದಿಲ್ಲಿಗೆ ತಂದು ನಿಲ್ಲಿಸಿದ ಮಹಾ ಸಾಹಸವನ್ನು ಕುರಿತು ಆಸ್ಥಾನ ಚರಿತ್ರಕಾರರೊಬ್ಬರು ಬರೆದಿರುವುದನ್ನು ಓದಿದರೆ, ಮೊತ್ತಮೊದಲು ಅವುಗಳನ್ನು ನಿಲ್ಲಿಸಲು ಅಶೋಕನ ಅಧಿಕಾರಿಗಳು ಪಟ್ಟ ಕಷ್ಟವು ನಮಗೆ ಮನದಟ್ಟಾಗುವುದು.

"ದಿಲ್ಲಿಯಿಂದ ೧೨೦ ಮೈಲಿ ದೂರದಲ್ಲಿ ಬೆಟ್ಟಗುಡ್ಡಗಳ ನಡುವೆ ಖಿಜ್ರಾಬಾದ್ ಇದೆ ; ಆ ಪ್ರಾಂತಕ್ಕೆ ಸುಲ್‌ತಾನರು ಬಿಜಯಮಾಡಿದಾಗ, ತೋಪ್ರಾ ಗ್ರಾಮದಲ್ಲಿದ್ದ ಕಂಬವನ್ನು ಕಂಡು ಬೆರಗಾದರು. ಅದನ್ನು ದಿಲ್ಲಿಗೆ ಸಾಗಿಸಿ, ತಲೆತಲಾಂತರದವರೆಗೂ ಸ್ಮಾರಕವಾಗಿರುವಂತೆ ಅಲ್ಲಿ ನಿಲ್ಲಿಸಬೇಕೆಂದು ಅವರು ತೀರ್ಮಾನಿಸಿದರು. ಅದನ್ನು ಹೇಗೆ ಇಳಿಸುವುದೆಂದು ದೀರ್ಘವಾಗಿ ಆಲೋಚಿಸಿ, ಗಂಗಾ ಯಮುನಾ ನದಿಗಳ ನಡುವಣ ಪ್ರದೇಶದ ಜನರೆಲ್ಲರೂ ಬಂದು ಸೇರಬೇಕೆಂದು ಆಜ್ಞೆ ಹೊರಟಿತು. ಆ ಪ್ರಾಂತದಲ್ಲಿದ್ದ ಸವಾರರನ್ನೂ ಕಾಲಾಳು ಸೈನ್ಯವನ್ನೂ ಕರೆಸಲಾಯಿತು. ಸಂಗಡಲೇ ಕಂಬವನ್ನಿಳಿಸಲು ಬೇಕಾಗುವ ಮುಟ್ಟುಗಳನ್ನೂ ಉಪಕರಣಗಳನ್ನೂ ತರಬೇಕೆಂದೂ ಹೇಳಲಾಯಿತು. ಅಲ್ಲದೆ, ಬೂರುಗದ ಹತ್ತಿಯ ಮೂಟೆಗಳನ್ನೂ ತರಿಸಿದ್ದಾಯಿತು. ಕಂಬದ ಸುತ್ತ ರಾಶಿರಾಶಿಯಾಗಿ ಬೂರುಗವನ್ನು ಹರಡಿದ್ದರಿಂದ ಬುಡವನ್ನು ಅಗೆದಾಗ ಅದು ತನಗಾಗಿ ಸಿದ್ಧಮಾಡಿದ್ದ ಹಾಸಿಗೆಯಮೇಲೆ ನಿಧಾನವಾಗಿ ಒರಗಿಕೊಂಡಿತು. ಕಂಬದ ಅಸ್ತಿಭಾರವಾಗಿದ್ದ ಒಂದು ದೊಡ್ಡ ಚೌಕದ ಕಲ್ಲನ್ನೂ ಅಗೆದು ತೆಗೆಯಲಾಯಿತು.

"ಇದಾದ ಮೇಲೆ, ಕಂಬದ ಉದ್ದಕ್ಕೂ ಜೋಳದ ಕಡ್ಡಿ ಮುಂತಾದುವನ್ನು ಬಿಗಿದು ತೊಗಲಿನ ಹೊದಿಕೆಯಲ್ಲಿ ಸುತ್ತಿದರು. ೪೨ ಚಕ್ರದ ಒಂದು ಗಾಡಿಯನ್ನು ಸಿದ್ಧಪಡಿಸಿ, ಪ್ರತಿಯೊಂದು ಚಕ್ರಕ್ಕೂ ಬಲವಾದ ಹಗ್ಗಗಳನ್ನು ಕಟ್ಟಿ, ಹಗ್ಗವೊಂದಕ್ಕೆ ೨೦೦ ಜನರಂತೆ, ಒಟ್ಟು ೮೪೦೦ ಜನರು ಕಂಬವನ್ನು

ಎಳೆದು ಯಮುನಾ ನದಿಯ ದಡದವರೆಗೂ ತಂದರು. ಅಲ್ಲಿಗೆ ಸುಲ್ತಾನ್‌ರೂ ಕೂಡ ಬಂದು ಕಂಬವನ್ನು ಕಂಡು ಹಿಗ್ಗಿದರು. ೫೦೦೦, ೭೦೦೦ ಮಣ ಗಳಷ್ಟು ಧಾನ್ಯವನ್ನು ತುಂಬಬಲ್ಲ ಹಲವು ದೊಡ್ಡ ದೋಣಿಗಳನ್ನೂ ೨೦೦೦ ಮಣಗಳಷ್ಟು ಧಾನ್ಯ ತುಂಬಬಹುದಾದ ಅನೇಕ ದೋಣಿಗಳನ್ನೂ ಅಲ್ಲಿ ಆಗಲೇ ಶೇಖರಿಸಿದ್ದರು. ಅವುಗಳನ್ನು ಸಾಲಾಗಿ ಕಟ್ಟಿ ನಿಲ್ಲಿಸಿ, ಬಹು ಜಾಣತನ ದಿಂದ ಕಂಬವನ್ನು ದೋಣಿಗಳಿಗೆ ಬದಲಾಯಿಸಿ, ಫಿರೋಸ್‌ಬಾದ್‌ಗೆ ಸಾಗಿಸಿ, ಅತ್ಯಂತ ಕಷ್ಟದಿಂದ ಖುಷ್ಕ್ ಎಂಬಲ್ಲಿಗೆ ಕರೆದೊಯ್ಯಲಾಯಿತು.

"ಆಗ, ಈ ಗ್ರಂಥಕರ್ತನು ಪೂಜ್ಯ ಮೀರ್‌ಬಾಕ್‌ರವರ ಶಿಷ್ಯನಾಗಿದ್ದ. ಕೇವಲ ಹನ್ನೆರಡು ವರ್ಷ ವಯಸ್ಸಿನವನಾಗಿದ್ದ. ಬುದ್ಧಿವಂತರಾದ ಶಿಲ್ಪಿಗಳನ್ನೂ ಕೆಲಸಗಾರರನ್ನೂ ಕರೆಸಿ ಜುಮ್ಮಾಮಶೀದಿಯ ಹತ್ತಿರ ಕಂಬದ ಅಸ್ತಿಭಾರವನ್ನು ಕಟ್ಟಿದರು. ಕಲ್ಲು ಸುಣ್ಣ ಇವುಗಳಿಂದ ಕಟ್ಟಡ ಕಟ್ಟಿದರು. ಸುತ್ತಲೂ ಮೆಟ್ಟಲು ಗಳನ್ನು ಮಾಡಿದರು. ಒಂದು ಮೆಟ್ಟಲು ಮುಗಿಯುತ್ತಲೂ ಕಂಬವನ್ನು ಅದರಮೇಲಿರಿಸುವರು. ಹೀಗೆ, ಕ್ರಮಕ್ರಮವಾಗಿ ಕಂಬವನ್ನೆತ್ತರಿಸಿ ನಿರ್ಧರಿ ಸಿದ ಎತ್ತರಕ್ಕೆ ತಂದರು. ಆಮೇಲೆ ಅದನ್ನು ನೇರವಾಗಿ ನೆಟ್ಟಗೆ ನಿಲ್ಲಿಸುವುದೇ ದೊಡ್ಡ ಪ್ರಶ್ನೆಯಾಯಿತು. ದಪ್ಪದಪ್ಪವಾದ ಹಗ್ಗಗಳನ್ನು ಆರೇಳುಕಡೆ ಕಟ್ಟಿದರು. ಚಕ್ರಗಳನ್ನು ತಿರುಗಿಸಿದರೆ ಹಗ್ಗಗಳು ಬಿಗಿಯಾಗಿ ಕಂಬ ನೆಟ್ಟಗೆ ನಿಲ್ಲುವ ಹಾಗೆ ಏರ್ಪಾಟು ಮಾಡಿಕೊಂಡು ನಿಧಾನವಾಗಿ ಅವುಗಳನ್ನು ತಿರುಗಿ ಸಿದರು. ಕಂಬ ಮೇಲಕ್ಕೆದ್ದ ಹಾಗೆಲ್ಲಾ ಅದರ ಸುತ್ತ ಮರದ ಕೊರಡುಗಳನ್ನೂ ಬೂರುಗದ ಮೂಟೆಗಳನ್ನೂ ಇರಿಸಿದರು. ಹೀಗೆ ಅದು ಬಾಣದಂತೆ ನೆಟ್ಟಗೆ ನಿಲ್ಲುವ ತನಕ ಎಲ್ಲರೂ ಬಹು ಸಾಹಸದಿಂದ ಕೆಲಸಮಾಡಿದರು. ಹಿಂದೆ ಹೇಳಿದ ದೊಡ್ಡ ಚೌಕದ ಕಲ್ಲನ್ನೂ ಕಂಬದ ಕೆಳಗೆ ಅದರ ಅಸ್ತಿಭಾರಕ್ಕಾಗಿ ಹಾಕಿದರು."

ಇಂತಹ ಕಂಬಗಳು ಸುಮಾರು ಮೂವತ್ತನ್ನು ಅಶೋಕನು ನಿಲ್ಲಿಸಿದ್ದನು. ಇಪ್ಪತ್ತನೆಯ ಶತಮಾನದಲ್ಲಿ ಕೂಡ ಅಸಾಧ್ಯವೆನಿಸುವಷ್ಟು ನಯವಾಗಿ ನುಣುಪಾದ ೫೦ ಟನ್ನುಗಳಷ್ಟು ತೂಕದ ಈ ಕಂಬಗಳನ್ನು ಆಗಿನ ಶಿಲ್ಪಿಗಳು ಹೇಗೆತಾನೆ ಕಡೆದು ನಿಲ್ಲಿಸಿದರೋ, ತಿಳಿಯದು. ಸಾಮಾನ್ಯವಾಗಿ ಕಂಬಗಳೆಲ್ಲವೂ ೪೦ ರಿಂದ ೫೦ ಅಡಿ ವರೆಗೆ ಎತ್ತರವಾಗಿಯೂ ಮೂರು ನಾಲ್ಕು ಅಡಿಗಳ ಅಡ್ಡಳತೆಯುಳ್ಳವಾಗಿಯೂ ಇವೆ. ಮೇಲುಮೇಲಕ್ಕೆ ಹೋಗುತ್ತಾ ಸುತ್ತಳತೆ ಕಡಿಮೆಯಾಗುತ್ತಾ ಬಂದಿರುವುದರಿಂದ ಕಂಬಗಳಿಗೆ ಒಂದು ವಿಶೇಷ ಬಗೆಯ ಸೊಬಗನ್ನು ಕೊಟ್ಟಂತಾಗಿದೆ. ಎಲ್ಲಕ್ಕಿಂತ ಮೇಲಾಗಿ ಕಂಬಗಳ ಮೇಲೆ ಒಂದು ಶಿರಶಿಲೆಯನ್ನು ಸಿಂಹ ಕುದುರೆ ವೃಷಭ ಆನೆ ಮುಂತಾದ ಪ್ರಾಣಿಗಳ

ವಿಗ್ರಹ ರೂಪದಲ್ಲಿ ಮಾಡಿ ನಿಲ್ಲಿಸಿರುವರು. ಕಂಬದ ಮೇಲೆ ಸಾಮಾನ್ಯವಾಗಿ ಒಂದು ಚೌಕದ ಕಲ್ಲು, ಅದರ ಮೇಲೆ ಒಂದು ಪೀಠ, ಪೀಠದ ಮೇಲೆ ಚಕ್ರಾಕಾರದ ಒಂದು ಕಲ್ಲು, ಅದರ ಸುತ್ತ ಹಂಸಪಕ್ಷಿಗಳ ಸಾಲು ಅಥವಾ ವೃಷಭಗಳ ಸಾಲು, ಲತೆಗಳು, ಆ ಕಲ್ಲಿನ ಮೇಲೆ ವಿಗ್ರಹ, ಹೀಗೆ ಕ್ರಮವಾಗಿ ರುವುದೇ ವಾಡಿಕೆ. ಅಶೋಕನ ಕಾಲದ ಸ್ತಂಭಗಳು ತೊಪ್ರ, ಮೀರತ್, ಕೌಶಾಂಬಿ, ಲೌರಿಯ ಅರಾರಾಜ್, ಲೌರಿಯ ನಂದನಘಡ, ರಾಮಪೂರ್ವ, ಸಾರನಾಥ, ಲುಂಬಿನಿ ಗ್ರಾಮ, ವೈಶಾಲಿ, ರಾಮಪೂರ್ವ, ಸಂಕಿಸ, ನಿಗ್ಲೀವ, ಸಾಂಚಿ—ಎಂಬ ಈ ಹದಿಮೂರು ಸ್ಥಳಗಳಲ್ಲಿ ಸಿಕ್ಕಿವೆ. ತೊಪ್ರ ಹಾಗೂ ಮೀರತ್ ನಲ್ಲಿದ್ದ ಸ್ತಂಭಗಳನ್ನು ಫಿರೋಜ್‌ಷಹನು ದೇಹಲಿಗೂ, ಕೌಶಾಂಬಿಯಲ್ಲಿದ್ದು ದನ್ನು ಅಕ್ಬರ್ ಪಾದಷಹನು ಅಲಹಾಬಾದಿಗೂ ಸಾಗಿಸಿರುವರು. ಈ ಸ್ತಂಭ ಗಳಲ್ಲಿ ಸಾಂಚಿ ಹಾಗೂ ಸಾರನಾಥ ಸ್ತಂಭಗಳ ಶಿರೋವಿಗ್ರಹಗಳೆಂದರೆ ನಾಲ್ಕು ದಿಕ್ಕಿಗೂ ನಾಲ್ಕು ಮುಖಗಳನ್ನೂ ದೇಹಗಳನ್ನೂ ಕಾಣಿಸುತ್ತಿರುವ ಒಂದೇ ಶಿಲೆಯಲ್ಲಿ ಮಾಡಿರುವ ಸಿಂಹವಿಗ್ರಹ. ಅದರ ಮೇಲೆ ಚಕ್ರವೊಂದಿದ್ದಿರ ಬೇಕೆಂದು ಊಹಿಸಲಾಗಿದೆ. ಲೌರಿಯ ನಂದನಘಡದಲ್ಲೂ ವೈಶಾಲಿಯಲ್ಲೂ ಸಿಂಹವಿಗ್ರಹದ ಸ್ತಂಭಗಳು; ರಾಮಪೂರ್ವದಲ್ಲಿ ವೃಷಭ; ಸಂಕಿಸದಲ್ಲಿ ಆನೆ. ಇತರ ಕಡೆಗಳಲ್ಲಿನ ಸ್ತಂಭಗಳ ಶಿರಶಿಲೆಗಳು ಬಿದ್ದು ನಾಶವಾಗಿ ಹೋಗಿವೆ. ಲುಂಬಿನೀಗ್ರಾಮದ ಸ್ತಂಭದ ಮೇಲಿದ್ದದ್ದು ಕುದುರೆಯ ವಿಗ್ರಹವೆಂದೂ ನಿಗ್ಲೀವದ ಸ್ತಂಭದ ಮೇಲೆ ಇದ್ದದ್ದು ಸಿಂಹವೆಂದೂ ಚೀನಾ ಯಾತ್ರಿಕನಾದ ಹ್ಯುಯೆನ್‌ತ್ಸಾಂಗನು ಹೇಳಿದ್ದಾನೆ. ಹೀಗೆ ಆಧುನಿಕರ ಕಣ್ಣಿಗೆ ಗೋಚರ ವಾಗಿರುವ ಸ್ತಂಭಗಳಲ್ಲದೆ, ಚೀನಾ ಯಾತ್ರಿಕರಾದ ಫಾಹಿಯನ್ ಮತ್ತು ಹ್ಯುಯೆನ್‌ತ್ಸಾಂಗ್‌ರ ದೃಷ್ಟಿಗೆ ಬಿದ್ದು ನಮಗಿನ್ನೂ ಗೊತ್ತಾಗದ ಸ್ತಂಭ ಗಳೂ ಅನೇಕವಿವೆ. ಶ್ರಾವಸ್ತಿಯಲ್ಲಿದ್ದ ಜೇತವನ ವಿಹಾರದ ಬಾಗಿಲ ಎಡಬಲಗಳಲ್ಲಿ ಚಕ್ರ ಹಾಗೂ ವೃಷಭಗಳ ವಿಗ್ರಹವನ್ನು ಹೊತ್ತ ಎರಡು ಕಂಬಗಳಿದ್ದುವೆಂದೂ ಪಾಟಲೀಪುತ್ರದಲ್ಲಿ ಸಿಂಹವಿಗ್ರಹವನ್ನು ಹೊತ್ತ ಕಂಬ ವೊಂದಿತ್ತೆಂದೂ, ಅಲ್ಲದೆ ಪಾಟಲೀಪುತ್ರದಲ್ಲೊಂದು ಕಂಬ ಕುಶಿನಗರದ ದಾರಿಯಲ್ಲೊಂದು, ಹೀಗೆ ಎರಡು ಸ್ತಂಭಗಳನ್ನು ತಾನು ಕಂಡೆನೆಂದೂ ಫಾಹಿಯನ್ ಹೇಳುತ್ತಾನೆ. ಇವು ಇನ್ನೂ ಪತ್ತೆಯಾಗಿಲ್ಲ. ಈಗ ನಾವು ಕಾಣದ ಹತ್ತು ಸ್ತಂಭಗಳ ವಿಷಯವಾಗಿ ಫಾಹಿಯನ್ ಪ್ರಸ್ತಾಪಿಸುತ್ತಾನೆ. ಈಗ ನಮಗೆ ಸಿಕ್ಕಿರುವ ಸ್ತಂಭಗಳ ಪೈಕಿ ಮೂರನ್ನು ಮಾತ್ರ ಹ್ಯುಯೆನ್‌ತ್ಸಾಂಗನು ತನ್ನ ಪ್ರವಾಸ ಕಾಲದಲ್ಲಿ ಕಂಡು ವಿವರಿಸಿರುವನು.

ಲೌರಿಯ ನಂದನಘಡ ಎಂಬಲ್ಲಿ ಅಶೋಕನ ಶಿಲಾಸ್ತಂಭವೊಂದನ್ನು ಅಗೆದು ತೆಗೆದಾಗ, ನೆಲದ ಮೇಲೆ ೩೯ ಅಡಿ ೭½ ಅಂಗುಲ ಎತ್ತರವಿದ್ದ ಆ ಕಂಬವನ್ನು ನೆಲದೊಳಕ್ಕೆ ೧೦ ಅಡಿ ಹೂತಿದ್ದರೆಂದೂ, ನೆಲದಡಿಯಭಾಗಕ್ಕೆ ನುಣುಪು ಕೊಟ್ಟಿರಲಿಲ್ಲವೆಂದೂ, ನೆಲಮಟ್ಟದಿಂದ ಎರಡಡಿ ಕೆಳಗೆ ಕಂಬದ ಮೇಲೆ ಒಂದು ನವಿಲಿನ ಆಕಾರವನ್ನು ಕೆತ್ತಿದ್ದರೆಂದೂ ತಿಳಿದುಬರುತ್ತದೆ. 'ಮಯೂರ' ಮೌರ್ಯರ ಧ್ವಜವಾಗಿತ್ತೆಂಬ ವಾದಕ್ಕೆ ಇದು ಒಂದು ಆಧಾರ. ಕೆಲವುವೇಳೆ ನೆಲದಡಿಯಲ್ಲಿ ಕಲ್ಲು ಕಟ್ಟಡವನ್ನು ಕಟ್ಟಿ ಸ್ತಂಭಗಳನ್ನು ನಿಲ್ಲಿಸುತ್ತಿದ್ದರು. ಆದರೆ, ವೈಶಾಲಿಯ ಸ್ತಂಭವನ್ನು ಅಗೆದು ತೆಗೆಯಲು ಪ್ರಯತ್ನಿಸಿದಾಗ, ನೆಲದ ಕೆಳಗೆ ೧೪ ಅಡಿಗಳು ಆಳ ತೋಡಿದರೂ ಕಂಬ ನುಣುಪಾಗಿಯೇ ಇತ್ತಂತೆ! ಶಿರಶಿಲೆಯನ್ನು ಕಂಬದ ಮೇಲಿರಿಸಲು ಮೌರ್ಯಶಿಲ್ಪಿಗಳು ತಾಮ್ರದ ಸಲಾಕಿಗಳನ್ನು ಉಪಯೋಗಿಸುತ್ತಿದ್ದರು. ರಾಮಪೂರ್ವದ ಕಂಬದಲ್ಲಿ ೪½ ಅಂಗುಲ ಅಡ್ಡಳತೆ, ೧೩ ಅಂಗುಲ ಆಳದ ಒಂದು ತೂತನ್ನು ಕಂಬದಲ್ಲಿ ಕೊರೆದಿರುವರು. ಆ ಸ್ತಂಭದಲ್ಲಿ ಉಪಯೋಗಿಸಿದ ತಾಮ್ರದ ಸಲಾಕಿ ಈಗ ಕಲ್ಕತ್ತಾದ ಇಂಡಿಯನ್ ಮ್ಯೂಸಿಯಂನಲ್ಲಿದೆ. ಅದರ ಒಟ್ಟು ತೂಕ ೭೯½ ಪೌಂಡು. ಅದು ಕಬ್ಬಿಣದ ಸಲಾಕಿಯಾಗಿದ್ದಿದ್ದರೆ ಇಷ್ಟು ಶತಮಾನಗಳವರೆಗೂ ಶಿರಶಿಲೆ ಭದ್ರವಾಗಿ ನಿಲ್ಲುತ್ತಿರಲಿಲ್ಲವೆಂದು ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಆ ತಾಮ್ರದ ಸಲಾಕಿಯ ಮೇಲೆ ಎರಡು ವೃಷಭದ ಗುರುತುಗಳೂ ಚೈತ್ಯದ ಹಾಗಿನ ಮೂರು ಗುರುತುಗಳೂ ಕಂಡುಬರುತ್ತವೆ. ಕೆಲಸಗಾರರು ತಮ್ಮ ಅನುಕೂಲಕ್ಕಾಗಿಯೂ ತಿಳಿವಳಿಕೆಗಾಗಿಯೂ ಇಂತಹ ಗುರುತುಗಳನ್ನು ಹಾಕುವ ಸಂಪ್ರದಾಯ ನಮ್ಮಲ್ಲಿ ಹೊಸದಲ್ಲ.

ಮೌರ್ಯರ ಸ್ತಂಭಗಳ ಅಂದಚಂದಕ್ಕೆ ಅವುಗಳ ರಚನೆಯೇ ಮುಖ್ಯ ಕಾರಣ. ತುದಿಯಿಂದ ನೆಲದವರೆಗೂ ಒಂದೇ ಸುತ್ತಳತೆಯವಾಗಿರದೆ, ಅವು ಮೇಲುಮೇಲಕ್ಕೆ ಹೋದಾಗ ಕೊಂಚ ಸಣ್ಣದಾಗುತ್ತಾ ಬರುತ್ತವೆ. ಒಟ್ಟು ೧೪ ಅಥವಾ ೧೨ ಅಂಗುಲಗಳ ಸುತ್ತಳತೆ ಕಡಮೆಯಾಗುತ್ತವೆ. ಆಗಿನ ರಾಜಮಾರ್ಗಗಳ ಹತ್ತಿರವೂ ಪುಣ್ಯಕ್ಷೇತ್ರಗಳ ಹತ್ತಿರವೂ ನಿಂತಿದ್ದ ಈ ಸ್ತಂಭಗಳನ್ನು ಸಾವಿರಾರು ಜನರು ಕಲಾದೃಷ್ಟಿಯಿಂದಲೂ ಲಕ್ಷಾಂತರ ಜನರು ಧರ್ಮದೃಷ್ಟಿಯಿಂದಲೂ ಮೆಚ್ಚಿರಬೇಕು.

ಭಾರತವರ್ಷದ ನಾನಾ ನಗರಗಳಲ್ಲಿ ಅಶೋಕನು ಎಂಬತ್ತುನಾಲ್ಕು ಸಾವಿರ ಸ್ತೂಪಗಳನ್ನು ಕಟ್ಟಿದನೆಂದು ಬೌದ್ಧಗ್ರಂಥಗಳಲ್ಲಿ ಹೇಳಿದೆಯಾದರೂ, ಅವುಗಳಲ್ಲೊಂದು ಕೂಡ ಆಗಿನ ಸ್ಥಿತಿಯಲ್ಲೇ ಇತಿಹಾಸ ಸಂಶೋಧಕರ

ದೃಷ್ಟಿಗೆ ಬಿದ್ದಿಲ್ಲ. ಹಲಕೆಲವು ಸ್ತೂಪಗಳು ಅಲ್ಲಲ್ಲಿ ಕಾಣಬರುವೆವಾದರೂ ಅನಂತರದ ಬೌದ್ಧಭಕ್ತರು ಅವುಗಳನ್ನು ಜೀರ್ಣೋದ್ಧಾರಮಾಡುವ ನೆಪದಲ್ಲಿ ಪುನಃ ನಿರ್ಮಿಸಿ ಗುರುತೇ ಸಿಕ್ಕದಂತೆ ಆಕಾರ ಅಳತೆಗಳನ್ನು ಹೆಚ್ಚಿಸಿದ್ದಾರೆ. ಸಾಂಚಿಯಲ್ಲೂ ಸಾರನಾಥದಲ್ಲೂ ಈಗಿರುವ ಸ್ತೂಪಗಳನ್ನು ಮೊದಲು ಕಟ್ಟಿಸಿದವನು ಅಶೋಕನೆಂಬುದು ನಿರ್ವಿವಾದವಾದ ಸಂಗತಿ. ಸಾಂಚಿಯ ಈಗಿನ ಸ್ತೂಪದ ಅರ್ಧದಷ್ಟು ದೊಡ್ಡದಾದ ಮೊದಲ ಸ್ತೂಪವನ್ನೇ ಅಶೋಕನೇ ಕಟ್ಟಿಸಿದನು ಎಂದು ಸರ್ ಜಾರ್ನ್ ಮಾರ್ಷಲ್‌ರವರು ಹೇಳಿರುತ್ತಾರೆ. ಅದು ಬರಿಯ ಇಟ್ಟಿಗೆಯಿಂದ ಮಾಡಿದ್ದಾಗಿತ್ತು. ಹಾಗೆಯೇ, ಸಾರನಾಥ ಬಾರ್‌ಹುತ್ ಸ್ತೂಪಗಳ ಪ್ರದಕ್ಷಿಣೆ ಮಾರ್ಗದ ಸುತ್ತ ಇರುವ ಈಗಿನ ಕಲ್ಲು ಬೇಲಿಗಳನ್ನೂ ಅಶೋಕನ ಕಾಲದಲ್ಲೇ ಮಾಡಿರಬೇಕೆಂದು ಊಹಿಸುತ್ತಾರೆ. ಈ ಕಲ್ಲುಬೇಲಿಗಳಲ್ಲಿ ಒಂದು ವಿಶೇಷವೇನೆಂದರೆ, ಅಶೋಕನ ಶಿಲಾಸ್ತಂಭಗಳನ್ನೇ ಹೋಲುವ ಹಲವು ಚಿತ್ರಗಳನ್ನು ಅವುಗಳ ಶಿಲ್ಪಿಗಳು ಬಿಡಿಸಿರುವುದು. ಅಂದರೆ, ಅಂತಹ ಧರ್ಮಸ್ತಂಭಗಳನ್ನು ಜನಗಳು ಆಗಿನ ಕಾಲದಲ್ಲಿ ಬಹುವಾಗಿ ಮೆಚ್ಚಿರಬೇಕೆಂದು ತೋರುತ್ತದೆ. ಶಾಸನಸಿದ್ಧವಾದ ಅಶೋಕನ ಸ್ತೂಪವೆಂದರೆ, "ಕನಕಮುನಿ" ಸ್ತೂಪ; ಅದನ್ನು ಇಮ್ಮಡಿಸಿದವನು ಅಶೋಕನೇ. ಅಲ್ಲದೆ, ತಕ್ಷಶಿಲೆಯಲ್ಲಿ "ಧರ್ಮರಾಜಿಕಾ" ಸ್ತೂಪವೆಂದು ಶಾಸನಗಳು ಕೊಂಡಾಡುವ ಒಂದು ಸ್ತೂಪ ಬಹಳ ಕಾಲದವರೆಗೂ ಇತ್ತು. ಅದಕ್ಕೆ ಆ ಹೆಸರು ಬಂದದ್ದು ಧರ್ಮರಾಜನಾದ ಅಶೋಕನು ಅದನ್ನು ಕಟ್ಟಿಸಿದ್ದರಿಂದ, ಎಂದು ಹಲವರು ಅಭಿಪ್ರಾಯಪಡುತ್ತಾರೆ.

ಬೋಧಿವೃಕ್ಷದ ಸುತ್ತ ಅಶೋಕನು ಕಟ್ಟಿಸಿದ ಮಂಟಪವು ಕೂಡ ಜನಾದರಣೆಯನ್ನು ಅನೇಕ ಶತಮಾನಗಳ ವರೆಗೆ ಪಡೆದಿತ್ತು. ಬೋಧಿವೃಕ್ಷವನ್ನು ಚಿತ್ರಿಸಿರುವ ಅನೇಕ ಸ್ತೂಪಗಳಲ್ಲಿ ಆ ಮಂಟಪವನ್ನೂ ಅನಂತರದ ಶಿಲ್ಪಿಗಳು ಬಿಡಿಸಿದಾರೆ. ಇಂತಹ ಶಿಲ್ಪಚಿತ್ರಗಳು ಮಥುರಾ ಸಾಂಚಿ ಅಮರಾವತಿ ಬಾರ್‌ಹುತ್ ಎಂಬ ಸ್ಥಳಗಳಲ್ಲಿ ದೊರೆತಿವೆ.

ಅಶೋಕನ ಅರಮನೆಯನ್ನು ಸುಮಾರು ೬೦೦ ವರ್ಷಗಳ ಅನಂತರ ಫಾಹಿಯನ್ ಎಂಬ ಚೀಣೀ ಯಾತ್ರಿಕನು ಕಂಡು ಅಚ್ಚರಿಗೊಂಡಿದಾನೆ. "ಅಶೋಕನ ಅಪ್ಪಣೆಯಂತೆ ಭೂತಗಣಗಳೆಲ್ಲವೂ ಕಲ್ಲುಬಂಡೆಗಳನ್ನು ಕಿತ್ತು ಕೆತ್ತಿ ತಂದಿರಿಸಿದುವು; ನಿಮಿಷದಲ್ಲೇ ಬಹು ರಮ್ಯವಾದ ಸಭಾಮಂಟಪಗಳೂ ವಾಸದ ಕೋಣೆಗಳೂ ಸಿದ್ಧವಾದುವು. ಮನುಷ್ಯರಿಂದ ನಿರ್ವಹಿಸಲಸಾಧ್ಯವಾದದ್ದನ್ನೂ ಅವು ನೆರವೇರಿಸಿದುವು" ಎಂದು ಫಾಹಿಯನ್ ಬರೆಯುತ್ತಾನೆ.

ಅರಮನೆಯ ಬೃಹದಾಕಾರವೂ ಅದರ ಸೊಬಗೂ ಈ ರೀತಿಯ ಕಥೆಗಳಿಗೆ ಕಾರಣವಾಗಿರಬೇಕು.

ಆದರೆ ಇನ್ನೂರು ವರ್ಷಗಳ ಅನಂತರ ಹ್ಯುಯೆನ್‌ತ್ಸಾಂಗ್‌ನು ಪಾಟಲೀಪುತ್ರಕ್ಕೆ ಹೋದಾಗ ಅಶೋಕನ ಅರಮನೆ ಅವನ ದೃಷ್ಟಿಗೆ ಬೀಳಲೇ ಇಲ್ಲ. ಅಷ್ಟರೊಳಗೆ ಅದು ಸಂಪೂರ್ಣ ನಾಶಹೊಂದಿತ್ತು. ಈಗಿನ ಪಾಟ್ನಾ ನಗರದ ಸಮೀಪದಲ್ಲಿರುವ ಸುಮಾರು ೨೫೦-೩೦೦ ಅಡಿ ಎತ್ತರದ ಒಂದು ಮಣ್ಣು ಗುಡ್ಡವನ್ನೇ ಅಶೋಕನ ಅರಮನೆಯ ಅವಶೇಷವೆಂದು ಊಹಿಸಿ ೧೯೧೫ರಲ್ಲಿ ಇಂಡಿಯಾ ಸರ್ಕಾರದ ಪ್ರಾಚ್ಯಸಂಶೋಧನಾ ಇಲಾಖೆಯ ಡಾ|| ಸ್ಪೂನರ್‌ರವರು ಆ ನಿವೇಶನವನ್ನು ಅಗೆದು ನೋಡಲು ಉಪಕ್ರಮಿಸಿದರು. ಅಶೋಕನ ಕಾಲದಲ್ಲಿ ಮರದ ತುಂಡುಗಳನ್ನೇ ಹೂತು ರಚಿಸಿದ ಏಳು ಅಸ್ತಿಭಾರಗಳು ಸಿಕ್ಕಿದುವು. ಮೂವತ್ತಡಿ ಉದ್ದ, ಐದೂಕಾಲು ಅಡಿ ಅಗಲ, ನಾಲ್ಕೂವರೆ ಅಡಿ ಎತ್ತರದ ಆ ದಿಣ್ಣೆಗಳನ್ನು ಬಹು ವಿಚಕ್ಷಣತೆಯಿಂದ ಮಾಡಿರುವರು. ಸ್ವಲ್ಪವೂ ಸಂದುಬಿಡದೆ, ಬಿರುಕಿಗೆ ಅವಕಾಶಕೊಡದೆ, ದಿಮ್ಮಿಗಳನ್ನು ಬಿಗಿದು ಸೇರಿಸಿರುವರು. ಆಗಿನಕಾಲದ ಬಡಗಿಗಳ ಸಾಮರ್ಥ್ಯಕ್ಕೆ ಈ ದಿಣ್ಣೆಗಳೇ ಸಾಕ್ಷಿಯಾಗಿವೆ. ಇವಲ್ಲದೆ, ಅಶೋಕನ ಅರಮನೆಯಿದ್ದ ಸ್ಥಳದಲ್ಲಿ ಗಾರೆಯಿಂದ ಮಾಡಿದ ಹಲಕೆಲವು ಅಲಂಕಾರಗಳೂ ಕಲ್ಲುಕಂಭಗಳ ತುಂಡುಗಳೂ ಸಿಕ್ಕಿವೆ.

ಪಾಟಲೀಪುತ್ರದಿಂದ ತಕ್ಷಶಿಲಾನಗರದ ವರೆಗೂ ಆಗಿನ ಕಾಲದಲ್ಲಿದ್ದ ನಗರಗಳ ನಿವೇಶನವನ್ನು ಸಂಶೋಧಿಸಿದಾಗ ಆಗಿನ ನಾಗರಿಕತೆಗೆ ಸೇರಿದ ಹಲವು ವಸ್ತುಗಳು ದೊರೆತಿವೆ. ಇವುಗಳಲ್ಲಿ ಗಾರೆಯಿಂದ ಮಾಡಿದ ಪೂಜೆಯ, ಆಟದ, ಅಲಂಕಾರದ ವಿಗ್ರಹಗಳು ಹೇರಳವಾಗಿವೆ. ಕಮಲದ ಮೇಲೆ ನಿಂತಿರುವ ಒಂದು ಸ್ತ್ರೀದೇವತೆಯನ್ನು—ಆಕೆಗೆ ರೆಕ್ಕೆಗಳಿದ್ದ ಹಾಗೆ ಪ್ರತಿಮೆಗಳನ್ನು ರಚಿಸಿರುವರು—ಸಾಮಾನ್ಯ ಜನರು ಹೆಚ್ಚಾಗಿ ಆರಾಧಿಸುತ್ತಿದ್ದರೆಂದು ತೋರುತ್ತದೆ. ಇದು ಮಾಯಾದೇವಿ ಅಥವಾ ಮಹಾ ಲಕ್ಷ್ಮಿಯ ವಿಗ್ರಹವಾಗಿರಬಹುದು. ಭೂಗರ್ಭದಲ್ಲಿ ಅಡಗಿಹೋಗಿರುವ ದೇಶದ ಚರಿತ್ರೆಯನ್ನು ಹುಡುಕಿ ತೆಗೆಯಲು ನಮ್ಮ ದೇಶದಲ್ಲಿ ಕ್ರಮವಾಗಿ ಪ್ರಯತ್ನ ನಡೆದಿರುವುದು ಕೇವಲ ಕೆಲವು ನಿವೇಶನಗಳಲ್ಲಿ ಮಾತ್ರ. ತಕ್ಷಶಿಲಾನಗರದ ನಿವೇಶನದಲ್ಲಿ ಈ ಕೆಲಸವು ಬಹಳ ಯಶಸ್ವಿಯಾಗಿ ನಡೆದಿದೆ. ಸರ್ ಜಾನ್ ಮಾರ್ಷಲ್‌ರವರು ಇಪ್ಪತ್ತು ವರ್ಷಗಳಿಗಿಂತ ಹೆಚ್ಚುಕಾಲ ಅಲ್ಲಿ ಸಂಶೋಧನೆ ನಡೆಸಿದಾರೆ. ಅಲ್ಲಿ ಒಂದಾದಮೇಲೊಂದಾಗಿ ಐದು ನಗರಗಳು ಮೂಡಿ ಮುಳುಗಿದುವೆಂದೂ, ಮೂರನೆಯ ನಗರವೇ ಮೌರ್ಯರಕಾಲದ್ದೆಂದೂ

ಅವರು ಗೊತ್ತುಮಾಡಿದಾರೆ. ಈ ನಗರದಲ್ಲೂ ಅದೇ ಆರಾಧ್ಯ ದೇವತೆಯ ವಿಗ್ರಹಗಳು ಸಿಕ್ಕಿವೆ. ಅಲ್ಲದೆ, ಆಟಿಗೆಗಳೂ, ಗೋಡೆಗಳ ಅಲಂಕಾರಕ್ಕಾಗಿ ಗಾರೆಯಿಂದ ಮಾಡಿದ ಬಳ್ಳಿಗಳೂ ಚಕ್ರಗಳೂ ಆ ನಗರದಲ್ಲೂ ಸಿಕ್ಕಿವೆ. ಇದನ್ನು ಕುರಿತು, ಡಾ|| ವೋಗೆಲ್‌ರವರು "ಸಾಮ್ರಾಜ್ಯದ ನೈರುತ್ಯ ಮೂಲೆಯಲ್ಲಿದ್ದ ತಕ್ಷಶಿಲೆ ಅದರ ನಟ್ಟನಡುವಣ ನಗರದಂತೆಯೇ, ಅದೇ ರೀತಿಯ ನಾಗರಿಕತೆಯಿಂದ ತಳತಳಿಸುತ್ತಿದೆ" ಎಂದು ಬರೆದಿರುವರು. ಇದರಿಂದ, ಆಗಿನ ಕಾಲದ ಆಡಳಿತದ ದಕ್ಷತೆಯನ್ನೂ ಜನಜೀವನದ ಸಾಮ್ಯತೆಯನ್ನೂ ನಾವು ತಿಳಿದುಕೊಳ್ಳಬಹುದು.

ಹ್ಯುಯನ್‌ತ್ಸಾಂಗನು ತನ್ನ ಪ್ರವಾಸದಲ್ಲಿ, ಅಶೋಕನು ಕಟ್ಟಿಸಿದ್ದು, ಎಂದು ಪ್ರಖ್ಯಾತವಾದ ಒಟ್ಟು ಎಂಬತ್ತು ಸಂಘಾರಾಮಗಳನ್ನೂ ವಿಹಾರಗಳನ್ನೂ ಸಂದರ್ಶಿಸಿದನಂತೆ. ಪಾಟಲೀಪುತ್ರದ ಸಮೀಪದಲ್ಲಿದ್ದ ಕುಕ್ಕುಟಾರಾಮದಲ್ಲಿ ಸಾವಿರಾರು ಭಿಕ್ಷುಗಳಿದ್ದರೆಂದೂ, ಆದರೂ ಅದು ಖಿಲವಾಗುತ್ತಿತ್ತೆಂದೂ ಅವನು ಹೇಳುತ್ತಾನೆ. ನಾಲಂದದ ಹತ್ತಿರವೂ ಅವನು ಅನೇಕ ವಿಹಾರಗಳನ್ನು ಕಂಡನು. ಬೌದ್ಧ ಭಿಕ್ಷುಗಳ ವಾಸಕ್ಕಾಗಿ ಕಟ್ಟಿಸಿದ ಈ ವಿಹಾರಗಳಲ್ಲಿ ಸಭಾ ಮಂದಿರಗಳೂ, ವಾಸದ ಕೋಣೆಗಳೂ ಅನೇಕವಿದ್ದುವು. ಅಲ್ಲಿದ್ದ ಭಿಕ್ಷುಗಳ ಸುಖಜೀವನಕ್ಕಾಗಿ ಧರ್ಮರಕ್ಷಕರು ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು.

ಭಿಕ್ಷುಗಳ ವಾಸಕ್ಕಾಗಿ ಅಶೋಕನು ಗವಿಗಳನ್ನು ಕೊರೆಯಿಸಿ ದಾನ ಮಾಡಿದನು. ಗಯಾ ಡಿಸ್ಟ್ರಿಕ್ಟ್‌ನಲ್ಲಿರುವ ಬರಾಬರ್ ಬೆಟ್ಟದಲ್ಲಿ (ಅಶೋಕನ ಶಾಸನದಲ್ಲಿ ಅದಕ್ಕೆ ಖಲತಿಕ ಪರ್ವತ ಎಂಬ ಹೆಸರಿದೆ) ಮೂರು ಗವಿಗಳನ್ನು ಈ ರೀತಿ ಆಜೀವಿಕರಿಗಾಗಿ ಅಶೋಕನು ನಿರ್ಮಿಸಿರುವನು. ಅವುಗಳಲ್ಲಿ ಒಂದು ಗವಿ ಅಸಂಪೂರ್ಣವಾಗಿದ್ದರೂ ಉಳಿದ ಎರಡು ಇಂದಿಗೂ ನಯನ ಮನೋಹರವಾಗಿವೆ. ಗಡುಸಾದ ಕಗ್ಗಲ್ಲನ್ನು ನುಣ್ಣನೆಯ ದುಂಡಾದ ಸ್ತಂಭಗಳಾಗಿ ಮಾಡಬಲ್ಲ ಅಶೋಕನ ಶಿಲ್ಪಿಗಳಿಗೆ ಈ ಕೆಲಸ ಅಷ್ಟು ಕಷ್ಟವಾಗಿರಲಾರದು, ಅದೇ ನುಣಪು ಅದೇ ಕೈಚಳಕ ಇಲ್ಲೂ ಕಂಡುಬರುವುವು. ಒಳಗಣ ಶಿಲಾಭಿತ್ತಿಗಳೆಲ್ಲವೂ "ಕನ್ನಡಿಯಂತೆ ಹೊಳೆಯುತ್ತಿವೆ," ಎಂದು ಫಾಹಿಯನ್ ಅಚ್ಚರಿಗೊಂಡಿದ್ದಾನೆ! ೩೩ ಅಡಿ ಉದ್ದ ೧೪ ಅಡಿ ಅಗಲ ೬ ಅಡಿ ಎತ್ತರದ ಕೋಣೆಗಳನ್ನು ಅವರು ಕೊರೆದೇ ರಚಿಸಿದಾರೆ. ಹನ್ನೆರಡಡಿ ಎತ್ತರದ ಅರ್ಧ ಗೋಳಾಕಾರದ ಸೂರನ್ನು ಮತ್ತೊಂದು ಗವಿಯಲ್ಲಿ ಮಾಡಿರುವರು.

ಕಲ್ಲುಬಂಡೆಗಳ ಮೇಲೆ ಆಗಿನಕಾಲದ ಶಿಲ್ಪಿಗಳು ಅಶೋಕನ ಶಾಸನಗಳನ್ನು ಕೆತ್ತಿರುವುದೇ ಅವರ ಕಲಾನೈಪುಣ್ಯದ ಒಂದು ಹೆಗ್ಗುರುತಾಗಿದೆ. ಅದಕ್ಕಾಗಿ

ಶಿಲೆಯನ್ನು ಸಮಪಡಿಸಿ, ಇಂದಿನವರೆಗೂ ಸ್ಪಷ್ಟವಾಗಿ ಕಾಣಿಸುವಂತೆ ಒಂದಾದಮೇಲೊಂದಾಗಿ ಅವುಗಳನ್ನು ಆಳವಾಗಿ ಬಿಡಿಬಿಡಿಯಾಗಿ ಕೆತ್ತುವುದು ಕಲೆಗಾರರಿಗಲ್ಲದೆ ಸಾಧ್ಯವಿಲ್ಲ. ಧೌಳಿಶಾಸನವನ್ನು ಕೆತ್ತಿರುವ ಬಂಡೆಯ ಮೇಲುಭಾಗವನ್ನು ಸಮಪಡಿಸಿ, ಅಲ್ಲೇ ಒಂದು ಬಂಡೆಯಿಂದ ಆನೆಯ ಅರ್ಧ ಶರೀರವನ್ನು ಕೊರೆದು ನಿಲ್ಲಿಸಿರುವುದೂ ಕೂಡ ಸಹಜಸುಂದರವಾಗಿದೆ.

ಅಶೋಕನ ಕಾಲಕ್ಕೆ ಭಾರತೀಯ ಶಿಲ್ಪಕಲೆ ಅನೇಕ ಶತಮಾನಗಳ ಬೆಳವಣಿಗೆಯಿಂದ ಪಕ್ವವಾಗಿತ್ತೆಂದು ಪರ್ಸಿಗಾರ್ಡ್ನರ್ ಅವರು ಅಭಿಪ್ರಾಯ ಪಡುತ್ತಾರೆ. ಅಲ್ಲದೆ, ದಂತದಲ್ಲೂ ಚಿನ್ನ ಬೆಳ್ಳಿಗಳಲ್ಲೂ ಮರದಲ್ಲೂ ಗಾರೆಯಲ್ಲೂ ಅನೇಕ ರೀತಿಯ ವಿಗ್ರಹಗಳನ್ನೂ ಆಟಿಗೆಗಳನ್ನೂ ಗೃಹಾಲಂಕಾರಗಳನ್ನೂ ರಚಿಸಿದ ಅನುಭವಗಳೆಲ್ಲವನ್ನೂ ಅಶೋಕನ ಶಿಲ್ಪಿಗಳು ಅಳವಡಿಸಿಕೊಂಡಿದ್ದರು. ಆಗಿನ ಕಾಲದಲ್ಲೂ ಜನಸಾಮಾನ್ಯರಿಂದ ಪೋಷಿತವಾದ ಕಲೆಗೂ ಆಸ್ಥಾನದಿಂದ ಪೋಷಿತವಾದ ಕಲೆಗೂ ದೊಡ್ಡ ಅಂತರವಿತ್ತೆಂದು ಆನಂದಕುಮಾರಸ್ವಾಮಿ ಅವರು ಹೇಳುತ್ತಾರೆ. ಜನಸಾಮಾನ್ಯರಿಗೆ ಪ್ರಿಯವಾದ ಶಿಲ್ಪದ ಉದಾಹರಣೆಗಳಾಗಿ ಅವರು ಬೆಸ್‌ನಗರ, ಪಾರ್ಖಂ, ಮಥುರಾ ಮುಂತಾದ ಕಡೆಗಳಲ್ಲಿ ಸಿಕ್ಕಿರುವ ಹಲವು ಯಕ್ಷಯಕ್ಷಿಣಿಯರ ವಿಗ್ರಹಗಳನ್ನು ಉದಹರಿಸುತ್ತಾರೆ. ಸಾಂಚಿ ಮುಂತಾದ ಸ್ಥಳಗಳಲ್ಲಿ ಸ್ತೂಪಗಳ ದ್ವಾರಪಾಲಕರಾಗಿಯೂ ಇಂತಹ ಯಕ್ಷರ ವಿಗ್ರಹಗಳನ್ನು ಕೆತ್ತಿರುತ್ತಾರೆ. ಸ್ತಂಭಗಳ ಶಿರೋವಿಗ್ರಹಗಳಲ್ಲಿ ಕಂಡುಬರುವ ಸಹಜತೆಯನ್ನು ಈ ಯಕ್ಷರಲ್ಲೂ ಸ್ಥೂಲವಾಗಿ ನಾವು ಕಾಣಬಹುದು. ಇರುವುದನ್ನು ಇರುವಂತೆಯೇ ಚಿತ್ರಿಸುವ ಶಿಲ್ಪಕಲೆ ಭಾರತ ವರ್ಷಕ್ಕೆ ತೀರ ಹೊಸದೆಂದೂ ಅದನ್ನು ಯವನರಿಂದಲೇ ನಾವು ಆಗ ಕಲಿತಿರಬೇಕೆಂದೂ ವಾದಿಸುವವರಿಗೆ ಈ ಯಕ್ಷವಿಗ್ರಹಗಳು ಸವಾಲು ಹಾಕುತ್ತವೆ. ಅವುಗಳ ಅದ್ಭುತವಾದ ಕಾಯಶಕ್ತಿ, ಅಂಗರಚನೆ, ಸ್ವಾಭಾವಿಕತೆ ಎಲ್ಲವೂ ಆಗಿನ ಜನಸಾಮಾನ್ಯರ ಕಲೆಯನ್ನು ನಮಗೆ ತೋರಿಸುತ್ತವೆ.

ಆಸ್ಥಾನದಿಂದ ಪೋಷಿತವಾದ ಕಲೆಗೆ ಅತ್ಯುತ್ತಮ ನಿದರ್ಶನವೆಂದರೆ, ಸಾರನಾಥಸ್ತಂಭದ ಶಿರೋವಿಗ್ರಹವಾದ ನಾಲ್ಕು ಸಿಂಹಗಳು: ಸ್ವತಂತ್ರಭಾರತ ರಾಜಚಿಹ್ನೆ. ಮೌರ್ಯರ ಕಾಲದ ಶಿಲ್ಪಕಲೆಯಲ್ಲಿ ಕಂಡುಬರುವ ಅನಿತರ ಸಾಧಾರಣವಾದ ತಥ್ಯದಿಂದ, ಸಹಜತೆಯಿಂದ, ಇದನ್ನು ಕೆತ್ತಿದಾರೆ. "ಯವನ ಸಂಸ್ಕೃತಿಯ ಕಲಾಕೇಂದ್ರವಾದ ಅಥೆನ್ಸ್ ನಗರದಲ್ಲಿ ಕೂಡ ಇದನ್ನು ಮೀರಿದ ಕಲೆ ಇಲ್ಲ" ಎಂದು ಸರ್ ಜಾರ್ಜ್ ಮಾರ್ಷಲ್ ಅವರು ಅಭಿಪ್ರಾಯ ಪಟ್ಟಿದಾರೆ.

## ೭. ಕೊನೆಯ ಮಾತು

ಧರ್ಮಚಕ್ರವರ್ತಿ ಎನ್ನಿಸಿದ ಅಶೋಕನ ಕಥೆ ಕಾಲದ ಕಗ್ಗತ್ತಲೆಯಲ್ಲಿ ಅಡಗಿ ಇಂದಿಗೆ ಎರಡುಸಾವಿರ ವರ್ಷಗಳ ಮೇಲಾದುವು. ಧರ್ಮದ ಮೇಲಿನ ತೀವ್ರವಾದ ಅಭಿಮಾನವೇ ಅವನ ಸಾಮ್ರಾಜ್ಯದ ಅಧಃಪತನಕ್ಕೆ ಕಾರಣವೆಂದು ವಾದಿಸುವವರೂ ಇಲ್ಲವೆಂದಿಲ್ಲ. ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿ ಅವರು, ಅಶೋಕನ ಅಹಿಂಸಾ ಪಕ್ಷಪಾತದಿಂದಲೂ, ವ್ಯವಹಾರ ಸಮತೆ ದಂಡಸಮತೆಗಳನ್ನು ಅವನು ದೇಶದಾದ್ಯಂತವೂ ಸಾಧಿಸಲು ಹೊರಟಿದ್ದ ರಿಂದಲೂ, ವೈದಿಕಧರ್ಮದ ಅನುಯಾಯಿಗಳು ಅವನ ಮೇಲೆ ಕೋಪ ಗೊಂಡರು ಎಂದು ಹೇಳಿರುವರು. ಆದರೆ, ಅಶೋಕನ ಮೊಮ್ಮಗನಾದ ಸಂಪ್ರತಿ ಜೈನಧರ್ಮವನ್ನವಲಂಬಿಸಿ ಅಶೋಕನಷ್ಟೇ ಆ ಧರ್ಮದ ಉದ್ಧಾರಕ್ಕಾಗಿಯೂ ಪ್ರಚಾರಕ್ಕಾಗಿಯೂ ಉತ್ಸಾಹದಿಂದ ದುಡಿದನೆಂದು ಜೈನರು ಹೇಳುತ್ತಾರೆ. ಆದ್ದರಿಂದ, ಸಾಮ್ರಾಜ್ಯದ ಅವನತಿಗೆ ಕೇವಲ ಧರ್ಮಕಾಮತೆ ಕಾರಣವಾಗಿರ ಲಾರದು. ಅಲ್ಲದೆ, ಯಜ್ಞಯಾಗಾದಿಗಳಿಗಿಂತ ಉತ್ತಮವಾದ ಆಧ್ಯಾತ್ಮ ಸಾಧನಗಳಿವೆ, ಎಂಬುದನ್ನು ಉಪನಿಷತ್ತುಗಳ ಕಾಲದಿಂದಲೂ ನಮ್ಮ ದೇಶದಲ್ಲಿ ಸಾರುತ್ತಿದ್ದ ಅನೇಕ ಮತಗಳೂ ಸಂಸ್ಥೆಗಳೂ ಇದ್ದುವು. ವ್ಯವಹಾರಸಮತೆ ದಂಡಸಮತೆ ಎಂಬ ಆದರ್ಶಗಳನ್ನು ಕಾರ್ಯರೂಪಕ್ಕೆ ತಂದಾಗ, ಕ್ರಾಂತಿ ಕಾರಕವಾದ ಯಾವ ಬದಲಾವಣೆಯನ್ನೂ ಅಶೋಕ ಮಾಡಿರಲಾರನೆಂದೇ ತೋರುತ್ತದೆ. ರಾಜಾಜ್ಞೆಯೊಂದರಿಂದಲೇ ಧಾರ್ಮಿಕ ಪುನರುಜ್ಜೀವನ ಮಾಡಬಹುದೆಂಬ ನಂಬಿಕೆ ಅವನಿಗಿದ್ದಂತೆ ತೋರುವುದಿಲ್ಲ. ಜನಸಾಮಾನ್ಯದ ಜೀವನದ ಮಟ್ಟವನ್ನೂ ವಿಚಾರದ ವಿಕಾಸವನ್ನೂ ನಡತೆಯ ನೋಟವನ್ನೂ ಉತ್ತಮಪಡಿಸುವುದಕ್ಕಾಗಿಯೇ ಅವನ ಶಿಲಾಶಾಸನಗಳು ಹುಟ್ಟಿಕೊಂಡದ್ದು. ಆದ್ದರಿಂದ, ಜನರ ಬಾಳಿನ ಮಟ್ಟಕ್ಕಿಂತ ಬಹಳ ಎತ್ತರದ ಯಾವ ಸುಧಾರಣೆ ಗಳನ್ನೂ ಅಶೋಕ ನಡೆಸಿರಲಾರನೆಂದೂ ತೋರುತ್ತದೆ. ಅಂದಮೇಲೆ, ಅವನ ಆಳಿಕೆಯಿಂದ ಆಕ್ರೋಶಗೊಂಡು ಜನರು ಧರ್ಮರಕ್ಷಣೆಗಾಗಿ ಹೋರಾಡ ಬೇಕಾದ ಪ್ರಮೇಯ ಯಾವುದೂ ಬಂದಿರಲಾರದು.

ಅಶೋಕನು ಮತ್ತೆ ಮತ್ತೆ ಒತ್ತಿ ಹೇಳಿದ ಪರಮತಪೂಜೆ ಎಂಬ ದೊಡ್ಡ ಆದರ್ಶವೇ ಹರಪ್ರಸಾದಶಾಸ್ತ್ರಿ ಅವರ ಅಭಿಪ್ರಾಯವನ್ನು ಅಸಮಂಜಸ ವೆನಿಸುತ್ತದೆ. ಭಾರತವರ್ಷದ ರಾಜಧರ್ಮದಲ್ಲಿ ಸರ್ವಮತಗಳನ್ನೂ ರಾಜನು

ಪುರಸ್ಕರಿಸಬೇಕೆಂಬುದೂ ಒಂದು ಭಾಗ. ಇದನ್ನು ಅಶೋಕನು ತತ್ತ್ವದೃಷ್ಟಿಯಿಂದಲೂ ತಂತ್ರದೃಷ್ಟಿಯಿಂದಲೂ ಕಂಡುಕೊಂಡಿದ್ದನು. ಧರ್ಮದ ಅತಿ ವಿಶಾಲವಾದ ಸರ್ವಸಮನ್ವಯವಾದ ತಿರುಳನ್ನು ಅವನು ಬಲ್ಲನು. ಅದಕ್ಕೆ ಈ ನಮ್ಮ ದೇಶ ಎಂದೂ ತಲೆಬಾಗಿ ನಿಂತಿದೆ. ಇಂದಿಗೂ ಭಾರತವರ್ಷ ಅಂದಿನಂತೆಯೇ ಧರ್ಮ ಎಂಬ ಉಸಿರಿನ ಆಧಾರದ ಮೇಲೆಯೇ ಬದುಕಿ ಬಾಳುತ್ತಿದೆ. "ಧರ್ಮವೆಂದರೆ ಯಾವುದು?" ಎಂಬ ಪ್ರಶ್ನೆಗೆ, ಅಶೋಕನಂತೆಯೇ ಈ ದೇಶದ ಜನರೆಲ್ಲರೂ ಇಂದು, "ಅಲ್ಪವಾದ ಆಸ್ರವ, ಬಹುವಾದ ಕಲ್ಯಾಣ, ದಯೆ, ದಾನ, ಸತ್ಯ, ಶುಚಿ" ಎಂದು ಉತ್ತರ ಹೇಳುವರು. ಅಶೋಕನ ಅನಂತರ, ಸುಮಾರು ಒಂದು ಶತಮಾನವಾದ ಮೇಲೆ, ಮೌರ್ಯಸಾಮ್ರಾಜ್ಯದಿಂದ ತಪ್ಪಿಸಿಕೊಂಡ ಸ್ವತಂತ್ರಕಲಿಂಗದ ರಾಜನಾದ .ಖಾರವೇಲನು, "ಸರ್ವ ಪಾಷಂಡ ಪೂಜಕ" "ಧರ್ಮರಾಜಾ" ಎಂಬ ಬಿರುದುಗಳಿಂದ ಮೆರೆದನು. ಗುಪ್ತವಂಶದ ಸ್ಥಾಪಕನಾದ ಶ್ರೀಗುಪ್ತನು "ಕೃಪಣ ದೀನಾನಾಥಾತುರ ಜನೋದ್ಧರಣ"ನೆಂದು ಹೊಗಳಿಸಿಕೊಂಡನು. ಈ ಧರ್ಮದೃಷ್ಟಿಯೇ ನಮ್ಮ ಇತಿಹಾಸದ ಜೀವನಾಡಿ. ಕರ್ಣಾಟಕ ರತ್ನ ಸಿಂಹಾಸನಾಧೀಶ್ವರರ ಕಣ್ಣು ಮುಂದಿನ ಆದರ್ಶವು ಕೂಡ "ಸತ್ಯಮೇವೋದ್ಧರಾಮ್ಯಹಂ" ಎಂಬುದೇ. "ದೇವಾನಾಂಪ್ರಿಯ ಪ್ರಿಯದರ್ಶಿ ರಾಜನ ಪುತ್ರರೂ ಪೌತ್ರರೂ ಪ್ರಪೌತ್ರರೂ ಕಲ್ಪಾಂತದ ವರೆಗೂ ಈ ಧರ್ಮಾಚರಣೆಯನ್ನು ಅಭಿವೃದ್ಧಿ ಪಡಿಸುತ್ತಾರೆ. ಧರ್ಮದಲ್ಲೂ ಶೀಲದಲ್ಲೂ ಪ್ರತಿಷ್ಠಿತರಾಗಿ ಅವರು ಧರ್ಮವನ್ನೇ ಅನುಶಾಸನ ಮಾಡುತ್ತಾರೆ. ಧರ್ಮಾನುಶಾಸನವೇ ಶ್ರೇಷ್ಠವಾದ ಮಾರ್ಗ. ಧರ್ಮಾಚರಣೆ ಅಶೀಲವಂತರಿಂದ ಆಗದ ಕೆಲಸ. ಅದರಲ್ಲಿ ಅಭಿವೃದ್ಧಿ ಹೊಂದಿದರೆ ಒಳ್ಳೆಯದು. ಆದರೆ, ಕ್ಷಯಹೊಂದದಿರುವುದೂ ಕೂಡ ಸಾಧುವಾದದ್ದೇ. ಇದಕ್ಕಾಗಿಯೇ ಈ ಧರ್ಮಲಿಪಿಯನ್ನು ಬರೆಸಲಾಗಿದೆ. ಅಭಿವೃದ್ಧಿಯಾಗುವಂತೆ ಅವರು ಯೋಚಿಸಲಿ" ಎಂದು ಅಶೋಕನು ತನ್ನ ಅಂತರಂಗದ ಆಸೆಯನ್ನು ಬಿಚ್ಚಿ ಹೇಳಿದ್ದಾನೆ. ಅವನ ಪ್ರಪೌತ್ರರಾದ ನಾವು ಅದೇ ದಾರಿಯಲ್ಲೇ ಇನ್ನೂ ಅಡಿಯಿಡುತ್ತಿರುವುದು ಅವನ ಆತ್ಮಕ್ಕೆ ತೃಪ್ತಿಯನ್ನೀಯದೆ ಇರಲಾರದು.

ಅಹಿಂಸೆ ಎಂಬ ತತ್ತ್ವಕ್ಕೆ ಅಶೋಕನು ಬಹು ವಿಶಾಲವಾದ ಅರ್ಥವನ್ನು ಕೊಟ್ಟನು. ಪ್ರಾಣಿಗಳನ್ನು ಕೊಲ್ಲದಿರುವುದು ಮಾತ್ರವೇ ಅಲ್ಲ, ಅವುಗಳಿಗೆ ಬರೆ ಹಾಕುವುದು ಮುಂತಾದ ಕ್ರೂರ ಸಂಪ್ರದಾಯಗಳನ್ನೂ ಅವನು ಖಂಡಿಸಿದನು. "ಜೀವಿಗಳಿಂದ ಜೀವವನ್ನು ಪೋಷಿಸಲಾಗದು" ಎಂದು ಅಶೋಕನು

ಹೇಳುವಾಗ, ಅವುಗಳನ್ನು ಕೊಂದು ತಿನ್ನಬಾರದು ಎಂಬ ಕೇವಲ ಸಂಕುಚಿತ ವಾದ ಅರ್ಥವನ್ನು ಮಾತ್ರ ಅವನು ಸೂಚಿಸುತ್ತಿಲ್ಲ. ಪಶುಗಳ ಮತ್ತು ಮನುಷ್ಯರ ಚಿಕಿತ್ಸೆ, ದಾಸರು ಭೃತ್ಯರು ಇವರ ಮೇಲೆ ಪ್ರೀತಿ, ನಂಟರಿಷ್ಟರ ಕಷ್ಟಪರಿಹಾರ, ಮಾತಾಪಿತೃಗಳ ಶುಶ್ರೂಷೆ, ಹಿರಿಯರ ಶುಶ್ರೂಷೆ, ಬ್ರಾಹ್ಮಣ ಶ್ರಮಣರ ಶುಶ್ರೂಷೆ, ಪರಮತ ಪೂಜೆ, ರಾಜ್ಯಾಭಿಲಾಷೆಯನ್ನು ತೊರೆದು ಸಂತೃಪ್ತಿಯಿಂದ ಜೀವಿಸುವುದು, ಇವೆಲ್ಲವೂ "ಅಹಿಂಸೆ"ಯ ಆದರಣೆಗಳು, ಎಂಬುದು ಅಶೋಕನ ಅಭಿಮತ! ಇಂತಹ ಅಹಿಂಸೆ ಮಾನವ ನಾಗರಿಕತೆಯ ಮುನ್ನಡೆಗೆ ಇಂದಿಗೆ ಅತ್ಯಗತ್ಯವಾಗಿದೆ.

೧೯೧೪ ರಿಂದ ೧೯೧೮ ರ ವರೆಗೆ ನಡೆದ ಮಹಾಸಮರದನಂತರ ಧರ್ಮ ಘೋಷವನ್ನೇ ನೆಲೆಗೊಳಿಸಬೇಕೆಂದಿದ್ದ ಹೆಚ್. ಜಿ. ವೆಲ್ಸ್ ಮುಂತಾದವರು ಅಶೋಕನ ಧರ್ಮಾಸಕ್ತಿಯನ್ನು ಸಾರಿ ಜನರನ್ನು ಎಚ್ಚರಗೊಳಿಸಿದರು.

ಮತ್ತೆ, ೧೯೩೯ ರಿಂದ ೧೯೪೫ರ ವರೆಗೆ ಜಗತ್ತು "ಮಾರಿಗೌತಣ" ವಾಯಿತು. ಆ ಭೇರೀ ಘೋಷ ನಿಂತು, ಆ ರಕ್ತಪಾತದ ಮೂಲಕ ವೈರಾಗ್ಯ ಪಡೆದ ಜಗತ್ತಿಗೆ, ಮತ್ತೆ ಅಶೋಕನ ಉಪದೇಶವನ್ನೇ ನಾವು ಸಾರಬೇಕಾಗಿದೆ. ಭಾರತವರ್ಷದ ಸನಾತನ ಧರ್ಮದ ಕೀರ್ತಿಯ ಮೂರ್ತಿಯೇ ಅವನು.

## ೮. ಅಶೋಕನ ಶಿಲಾಶಾಸನಗಳು

### ೧. ಹದಿನಾಲ್ಕು ಶಾಸನಗಳು

(೧) ಷಾಬಾಸ್‌ಗಡಿ : (ವಾಯುವ್ಯಪ್ರಾಂತದ ಪೆಷಾವರ್ ಜಿಲ್ಲೆ) ಖರೋಷ್ಠೀ ಲಿಪಿಯಲ್ಲಿ ಬರೆದಿದೆ. ಹನ್ನೆರಡನೆಯ ಶಾಸನವನ್ನು ಪ್ರತ್ಯೇಕವಾಗಿ ಸಮೀಪದ ಬೇರೊಂದು ಬಂಡೆಯಮೇಲೆ ಕೆತ್ತಿದೆ. ಪರಮತಪೂಜೆಯನ್ನು ಬೋಧಿಸುವ ಆ ಶಾಸನವನ್ನು ಭರತವರ್ಷದೊಳಕ್ಕೆ ಬರುವ ಹೊರಗಿನವರೆಲ್ಲರೂ ಓದಿ ತಿಳಿಯಬೇಕೆಂಬ ಉದ್ದೇಶದಿಂದಲೋ, ಏನೋ !

(೨) ಮನ್‌ಸೇರಾ : (ವಾಯುವ್ಯಪ್ರಾಂತದ ಮನ್‌ಸೇರಾ ಜಿಲ್ಲೆ) ಖರೋಷ್ಠೀ ಲಿಪಿಯಲ್ಲಿ ಬರೆದಿದೆ. ಮೂರು ಬಂಡೆಗಳ ಮೇಲೆ ಬರೆಯಲಾಗಿದೆ.

(೩) ಗಿರ್ನಾರ್ : ಗಿರಿನಗರ (ಕಾಥೇವಾಡದ ಜುನಗಡ್ ಸಂಸ್ಥಾನ) ಜುನಗಡ್‌ನಿಂದ ಒಂದು ಮೈಲಿ ದೂರದಲ್ಲಿದೆ. ಕ್ರಿ. ಶ. ೧೫೦ ರ ಮಹಾಕ್ಷಾತ್ರಪ ರುದ್ರದಾಮನ ಶಾಸನವೂ ಇದೇ ಬಂಡೆಯ ಮೇಲಿದೆ. ಅದರಲ್ಲಿ, "ಮೌರ್ಯಸ್ಯರಾಜ್ಞಃ ಚಂದ್ರಗುಪ್ತಸ್ಯ ರಾಷ್ಟ್ರಿಯೇಣ ವೈಶ್ಯೇನ ಪುಷ್ಯಗುಪ್ತೇನಕಾರಿತಂ, ಅಶೋಕಸ್ಯ ಮೌರ್ಯಸ್ಯ ಕೃತೆ ಯವನರಾಜೇನ ತುಷಾಸ್ಫೇನಾಧಿಷ್ಠಾಯ ಪ್ರಣಾಳೀಭಿರಲಂಕೃತಂ" ಎಂದು ಅಲ್ಲಿಯ ಸುದರ್ಶನ ತಟಾಕವನ್ನು ಕುರಿತು ಹೇಳಿದೆ. ಗಿರಿನಗರದ ಶಾಸನಗಳ ಅನಂತರ, 'ಸರ್ವಸ್ವೆತೊ ಹಸ್ತಿ ಸರ್ವಲೋಕ ಸುಖಾಹರೋನಾಮ' ಎಂದು ಬರೆದಿದೆ.

(೪) ಸೊಪಾರ : (ಬೊಂಬಾಯಿ ಆಧಿಪತ್ಯದ ಠಾಣಾ ಜಿಲ್ಲೆ) ಬ್ರಾಹ್ಮೀಲಿಪಿ. ಪ್ರಾಚೀನ ನಗರವೊಂದರ ಅವಶೇಷವೇ ಈಗಿನ ಸೊಪಾರ. ಅಲ್ಲಿದ್ದ ಶಾಸನಬಂಡೆ ಈಗ ಛಿದ್ರವಾಗಿಬಿಟ್ಟಿದೆ. ಎಂಟನೆಯ ಶಾಸನದ ಕೆಲ ಪಂಕ್ತಿಗಳು ಮಾತ್ರ ದೊರೆತಿವೆ.

(೫) ಎರ್ರಗುಡಿ : (ಕರ್ನೂಲ್ ಜಿಲ್ಲೆ, ಮದ್ರಾಸ್ ಆಧಿಪತ್ಯ, ಗುತ್ತಿಯಿಂದ ಎಂಟು ಮೈಲಿ) ಬ್ರಾಹ್ಮೀ. ಅದೇ ಬಂಡೆಯಲ್ಲಿ ಬಿಡಿಶಾಸನ ೧ ನ್ನೂ ಬರೆದಿದೆ. ಅಕ್ಷರಗಳು ಬಹಳ ಖಿಲವಾಗಿವೆ. ಎರ್ರಗುಡಿಗೆ ಜೊನ್ನಗಿರಿ ಎಂಬ ಹೆಸರೂ ಇತ್ತು.

(೬) ಜೌಗಡ: (ಗಂಜಾಂ ಜಿಲ್ಲೆ, ಮದ್ರಾಸ್ ಆಧಿಪತ್ಯ) ಗಂಜಾಂ ಪಟ್ಟಣಕ್ಕೆ ೧೮ ಮೈಲಿ ವಾಯುವ್ಯದಲ್ಲಿದೆ. ಬ್ರಾಹ್ಮೀಲಿಪಿ. ಋಷಿಕುಲ್ಯ ಎಂಬ ನದೀತೀರದಲ್ಲಿದೆ. ಆಗಿನ ಕಾಲದಲ್ಲಿ ಒಂದು ದೊಡ್ಡ ನಗರವಿದ್ದಂತೆ ತೋರುವುದು. ಅದೇ ಸಮಾಪಾ ಇರಬಹುದು. ಮೂರು ಬಂಡೆಗಳ ಮೇಲೆ ಬರೆದಿದೆ. ಕಳಿಂಗ ಶಾಸನಗಳನ್ನು ಪ್ರತ್ಯೇಕವಾಗಿ ಒಂದು ಚೌಕಟ್ಟಿನೊಳಗೆ ಕೆತ್ತಿದೆ. ೧೧, ೧೨, ೧೩ ನೆಯ ಶಾಸನಗಳನ್ನು ಇಲ್ಲಿ ಬರೆದಿಲ್ಲ.

(೭) ಧೌಳಿ: (ಒರಿಸ್ಸಾಪ್ರಾಂತದ ಪುರಿ ಜಿಲ್ಲೆ) ಭುವನೇಶ್ವರ ಎಂಬ ಊರಿಂದ ೭ ಮೈಲಿ ದಕ್ಷಿಣದಲ್ಲಿದೆ. ಎಂಟು ಹತ್ತು ಮೈಲಿ ವಿಶಾಲವಾದ ಮೈದಾನದ ನಡುವೆ ಒಂಟಿಯಾಗಿ ನಿಂತಿರುವ ಒಂದು ಗುಡ್ಡದ ಮೇಲೆ ಬಂಡೆಯನ್ನು ಕೆತ್ತಿ ಸಮಪಡಿಸಿ ಬರೆದಿದೆ. ಕಳಿಂಗ ಶಾಸನಗಳೆರಡನ್ನು ಇಲ್ಲೂ ಬರೆದಿದೆ. ೧೧, ೧೨, ೧೩ ನೆಯ ಶಾಸನಗಳು ಇಲ್ಲೂ ಇಲ್ಲ. ಶಾಸನದ ಮೇಲುಭಾಗದಲ್ಲಿ ಆನೆಯ ಮುಂಭಾಗವನ್ನು ಕಲ್ಲುಬಂಡೆಯಿಂದ ಶಿಲ್ಪಿ ಬಿಡಿಸಿರುವನು.

(೮) ಕಾಲ್ಸಿ: (ಸಂಯುಕ್ತಪ್ರಾಂತದ ಡೆಹ್ರಾಡೂನ್ ಜಿಲ್ಲೆ) ಯಮುನಾ ನದಿಯ ಪಶ್ಚಿಮ ದಡದಲ್ಲಿದೆ. ಹತ್ತಡಿ ಎತ್ತರದ ಬಿಳಿಕಲ್ಲಿನ ಬಂಡೆಯ ಮೇಲೆ ಕೆತ್ತಿದೆ. ಶಾಸನಗಳ ಮೇಲುಗಡೆ—ಗಜತಮೆ— ಎಂದು ಬರೆದಿದೆ.

## ೨. ಸ್ತಂಭ ಶಾಸನಗಳು

(೧) ಡಿಲ್ಲಿ.—ಟೋಪ್ರ: (ಡಿಲ್ಲಿ) ಟೋಪ್ರದಿಂದ ಫಿರೋಸ್‌ಷಾ ಸುಲ್ತಾನ ತಂದು ಡಿಲ್ಲಿಯಲ್ಲಿ ನಿಲ್ಲಿಸಿದ್ದು. ಇದನ್ನೇ ಇತರ ಎಲ್ಲ ಅಶೋಕ ಶಾಸನಗಳಿಗಿಂತ ಮೊದಲು ವಿಮರ್ಶಿಸಿದ್ದು. ಪ್ರಿನ್‌ಸೆಪ್ ಅವರು ೧೮೩೭ ರಲ್ಲಿ ಈ ಸ್ತಂಭಶಾಸನವನ್ನು ಓದಿದರು. ಇದೊಂದರಲ್ಲೇ ಏಳನೆಯ ಶಾಸನ ಇರುವುದು. ೪೨ ಅಡಿ ೭ ಅಂಗುಲ ಎತ್ತರದ ಸ್ತಂಭ.

(೨) ಡಿಲ್ಲಿ-ಮೀರತ್: (ಡಿಲ್ಲಿ) ಮೀರತ್ತಿಂದ ಇದನ್ನೂ ಫಿರೋಸ್‌ಷಾ ಸುಲ್ತಾನ ದಿಲ್ಲಿಗೆ ತಂದನು. ಮೊದಲನೆಯ ಐದು ಶಾಸನಗಳು ಮಾತ್ರ ಈ ಸ್ತಂಭದಲ್ಲಿ ಕಂಡುಬಂದಿವೆ. ಇದರ ಹತ್ತಿರವಿದ್ದ

ಯಾವುದೋ ಮದ್ದಿನ ಗಡಂಗು ಸಿಡಿದು ಈ ಸ್ತಂಭ ಈಗ ಐದು ತುಂಡುಗಳಾಗಿ ಮುರಿದು ಬಿದ್ದಿದೆ.

(೩) ಅಲಹಾಬಾದ್-ಕೋಸಂ : (ಕಾಶಾಂಬಿಯಿಂದ ಅಕ್ಬರ್ ಚಕ್ರವರ್ತಿ ಇದನ್ನ ಅಲಹಾಬಾದ್ ಕೋಟೆಯೊಳಕ್ಕೆ ತಂದು ನಿಲ್ಲಿಸಿದನು) ರಾಣಿಶಾಸನವೂ ಕೌಶಾಂಬಿ ಶಾಸನವೂ ಇದೇ ಸ್ತಂಭದಲ್ಲೇ ಇವೆ.

(೪) ಲೌರಿಯಾ ಅರಾರಜ್ : (ಉತ್ತರಬಿಹಾರಿನ ಚಂಪರನ್ ಜಿಲ್ಲೆ) ೩೬ ಅಡಿ ೬ ಅಂಗುಲದ ಶಿಲಾಸ್ತಂಭ.

(೫) ಲೌರಿಯ ನಂದನಗಡ (ಚಂಪರನ್ ಜಿಲ್ಲೆ) ೩೨ ಅಡಿ ೯ ಅಂಗುಲದ ಸ್ತಂಭದ ಮೇಲೆ ಸಿಂಹವಿಗ್ರಹ.

(೬) ರಾಮಪೂರ್ವ (ಲೌರಿಯ ನಂದನಗಡಕ್ಕೆ ೨೦ ಮೈಲಿ ಸಮೀಪದಲ್ಲಿ) ಸಿಂಹಶಿರೋವಿಗ್ರಹ. ಸುಮಾರು ೪೫ ಅಡಿ ಎತ್ತರದ ಸ್ತಂಭ.

## ೩. ಬಿಡಿಶಾಸನಗಳು

### ೧. ಶಿಲಾಶಾಸನಗಳು

(೧) ಸಹಸ್ರಾಂ : (ಷಹಬಾದ್ ಜಿಲ್ಲೆ, ಬಿಹಾರ್) ಬಂಡೆಯಲ್ಲಿ ಕೊರೆದ ಒಂದು ಗವಿಯೊಳಗೆ ಬರೆದಿದೆ.

(೨) ರೂಪನಾಥ (ಮಧ್ಯಪ್ರಾಂತದ ಜಬ್ಬಲ್‌ಪುರ ಜಿಲ್ಲೆ) ಬೆಟ್ಟ ಗುಡ್ಡಗಳ ನಡುವೆ ಮನೋಹರವಾದ ಮೂರು ಪುಟ್ಟ ಜಲಪಾತಗಳಿವೆ. ರಾಮ, ಲಕ್ಷ್ಮಣ, ಸೀತೆ, ಎಂದು ಅವುಗಳಿಗೆ ಹೆಸರಿಟ್ಟಿದಾರೆ. ಪ್ರಾಚೀನ ಕಾಲದಿಂದಲೂ ಪುಣ್ಯತೀರ್ಥವೆನಿಸಿವೆ. ಆ ಜಲಪಾತ ಗಳ ಹತ್ತಿರದ ಒಂದು ಬಂಡೆಯಲ್ಲಿ ಶಾಸನವನ್ನು ಬರೆದಿದೆ.

(೩) ಬೈರಾಟ್ (ಜೈಪುರ ಸಂಸ್ಥಾನ) ಜೈಪುರದಿಂದ ೪೨ ಮೈಲಿ ದೂರ ದಲ್ಲಿದೆ.

(೪) ಮಸ್ಕಿ : (ನಿಜಾಂ ಸಂಸ್ಥಾನದ ರಾಯಚೂರು ಜಿಲ್ಲೆ) ಚಿನ್ನದ ಗಣಿಗಳ ಅವಶೇಷಗಳಿವೆ. ಸುವರ್ಣಗಿರಿ ಎಂದು ಶಾಸನದಲ್ಲಿ ಹೇಳಿರುವ ಸ್ಥಳ ಇದಿರಬಹುದು. ಚಾಲುಕ್ಯ ಜಗದೇಕಮಲ್ಲನ ಕಾಲ ದಲ್ಲಿ ಇದಕ್ಕೆ ರಾಜಧಾನಿಪಿರಿಯಮೊಸಂಗಿ ಎಂಬ ಹೆಸರಿತ್ತು.

(೫) ಪಾಲ್ಕಿಗುಂಡು (ನಿಜಾಂ ಸರ್ಕಾರದ ಕೊಪ್ಪಳದ ಹತ್ತಿರ) ತುಂಗ ಭದ್ರಾ ನದಿಯ ಉಪನದಿಯಾದ ಹಿರೇಹಳ್ಳದ ದಡದಲ್ಲಿನ ಪ್ರಾಚೀನ

ಜಿಸಕ್ಷೆತ್ರವಾದ ಕೊಪಣ ನಗರ ಎಂಬಲ್ಲಿ ನೂರು ಅಡಿ ಎತ್ತರದ ಒಂದು ಗುಡ್ಡದ ಮೇಲೆ ಬರೆದಿದೆ.

(೬) ಗವಿಮಠ (ಪಾಲ್ಕಿಗುಂಡಿನ ಹತ್ತಿರ) ಶಾಸನದ ಬಾಡೆಯ ಹಿಂದೆ ಒಂದು ದೊಡ್ಡ ಗವಿಯಿದೆ.

(೭) ಬ್ರಹ್ಮಗಿರಿ: (ಚಿತ್ರದುರ್ಗ ಜಿಲ್ಲೆ, ಮೈಸೂರು) ಅಕ್ಷರಗುಂಡು ಎಂಬ ಬಂಡೆಯ ಮೇಲೆ ಎರಡು ಬಿಡಿಶಾಸನಗಳಿವೆ.

(೮) ಸಿದ್ದಾಪುರ (ಬ್ರಹ್ಮಗಿರಿಯ ಪಶ್ಚಿಮದಲ್ಲಿ ಒಂದು ಮೈಲಿ ಹತ್ತಿರ) ಎರಡು ಶಾಸನಗಳಿವೆ.

(೯) ಜಟಿಂಗರಾಮೇಶ್ವರ: (ಬ್ರಹ್ಮಗಿರಿಯಿಂದ ೧೩ ಮೈಲಿ ದೂರದಲ್ಲಿದೆ) ದೇವಸ್ಥಾನಕ್ಕೆ ಹೋಗುವ ಮೆಟ್ಟಲುಗಳ ಮುಂದುಗಡೆಯ ಬಂಡೆಯಲ್ಲಿ ಕೆತ್ತಿದೆ.

(೧೦) ಭಾಬ್ರು: (ಜೈರಾಟ್‌ನ ಹತ್ತಿರ ಭಾಬ್ರು ಎಂಬಲ್ಲಿ ಸಿಕ್ಕಿದ್ದು) ಈ ಶಾಸನವನ್ನು ಕೆತ್ತಿದ್ದ ಕಲ್ಲನ್ನು ಈಗ ಕಲ್ಕತ್ತಾದಲ್ಲಿ ಬಂಗಾಲದ ಏಷ್ಯಾ ಸಂಘದಲ್ಲಿ ಇರಿಸಲಾಗಿದೆ.

೨. ಸ್ತಂಭಗಳು:

(೧) ಸಾಂಚಿಸ್ತಂಭ—ಭೋಪಾಲ್ ಸಂಸ್ಥಾನದಲ್ಲಿ
(೨) ಸಾರನಾಥಸ್ತಂಭ—ಕಾಶಿಗೆ ೩ತ್ತಿ ಮೈಲಿ ದೂರದಲ್ಲಿ
(೩) ಲುಂಬಿನೀಸ್ತಂಭ—ನೇಪಾಳದ ಭಗವಾನಪುರದಿಂದ ೩ ಮೈಲಿ ದೂರದಲ್ಲಿ
(೪) ನಿಗಾಲಿ ಸಾಗರಸ್ತಂಭ—ಲುಂಬಿನಿಯಿಂದ ೧೩ ಮೈಲಿ ದೂರದಲ್ಲಿ—

೩. ಗುಹಾಶಾಸನಗಳು:

ಬರಾಬರ್ ಬೆಟ್ಟ: (ಬಿಹಾರದ ಗಯಾ ಡಿಸ್ಟ್ರಿಕ್ಟ್) ಗಯಾ ಪಟ್ಟಣದ ಉತ್ತರದಲ್ಲಿ ಹದಿನೈದು ಮೈಲಿ ದೂರದಲ್ಲಿದೆ. ಒಟ್ಟು ೩ ಶಾಸನಗಳಿವೆ.

# ೯. ಶಿಲಾಶಾಸನಗಳು

## ೧

ಈ ಧರ್ಮಲಿಪಿಯು ದೇವಾನಾಂಪ್ರಿಯ ಪ್ರಿಯದರ್ಶಿರಾಜನಿಂದ ಬರಸಲಾಗಿದೆ. ಇಲ್ಲಿ[1] ಯಾವ ಜೀವವನ್ನೂ ಕೊಲ್ಲಕೂಡದು; ಯಜ್ಞ ಮಾಡಕೂಡದು. ಸಮಾಜ[2]ವನ್ನೂ ಮಾಡಲಾಗದು. ಏಕೆಂದರೆ ದೇವಾನಾಂ ಪ್ರಿಯ ಪ್ರಿಯದರ್ಶಿ ರಾಜನು ಸಮಾಜಗಳಲ್ಲಿ ಬಹಳ ದೋಷಗಳನ್ನು ಕಾಣುತ್ತಾನೆ. ಆದರೂ, ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಸಾಧುವೆಂದೆಣಿಸುವ ಒಂದು ತರಹದ ಸಮಾಜವೂ ಇದೆ.

ಹಿಂದೆ, ದೇವಾನಾಂಪ್ರಿಯ ಪ್ರಿಯದರ್ಶಿ ರಾಜನ ಅಡುಗೆಮನೆಯಲ್ಲಿ ಪ್ರತಿದಿನವೂ ಅನೇಕ ಶತಸಹಸ್ರಪ್ರಾಣಿಗಳನ್ನು ಸೂಪಕ್ಕಾಗಿ ಕೊಲ್ಲುತ್ತಿದ್ದರು. ಈಗ ಈ ಧರ್ಮಲಿಪಿಯನ್ನು ಬರಸುವಾಗ ಮೂರು ಪ್ರಾಣಿಗಳನ್ನು ಮಾತ್ರ ಸೂಪಕ್ಕಾಗಿ ಕೊಲ್ಲಲಾಗುತ್ತಿದೆ: ಎರಡು ನವಿಲುಗಳು, ಒಂದು ಜಿಂಕೆ; ಜಿಂಕೆಯನ್ನು ತಪ್ಪದೆ ಕೊಲ್ಲುತ್ತಿಲ್ಲ. ಈ ಮೂರು ಪ್ರಾಣಿಗಳನ್ನೂ ಇನ್ನು ಮುಂದೆ ಕೊಲ್ಲಲಾಗದು.

---

[1] ಇಲ್ಲಿ—"ಅಭಿಷಿಕ್ತನಾಗಿ ಇಪ್ಪತ್ತಾರುವರ್ಷಗಳಾದನಂತರ ಈ ಪ್ರಾಣಿಗಳನ್ನು ಅವಧ್ಯವೆಂದು ನಿರೂಪಿಸಲಾಯಿತು" ಎಂದು ಸ್ತಂಭಶಾಸನ ೫ ರಲ್ಲಿ ಹೇಳಿರುವುದರಿಂದ, ಈ ಶಾಸನದ "ಇಲ್ಲಿ" ಎಂಬುದಕ್ಕೆ ಪಾಟಲೀಪುತ್ರದಲ್ಲಿ, ರಾಜಧಾನಿಯಲ್ಲಿ, ಎಂದು ಅರ್ಥ ಎಂದು ಕೆಲವರು ವಾದಿಸುತ್ತಾರೆ.

[2] ಸಮಾಜ—ಸಮಾಜಗಳೆಂದರೆ ಆಗಿನಕಾಲದಲ್ಲಿ ಸುರಾಪಾನ ನೃತ್ಯ ನಾಟಕ ಗಾಯನ ಜೂಜು ಮುಂತಾದವು ನಡೆಯುತ್ತಿದ್ದ ಉತ್ಸವಗಳಾಗಿದ್ದಿರಬೇಕು. "ಉತ್ಸವ ಸಮಾಜ ಯಾತ್ರಾಸು ಚತುರಹಃ ಸೌರಿಕೋದೇಯಃ" (II, ೨೫) ಉತ್ಸವ ಸಮಾಜ ಯಾತ್ರಾ ಕಾಲಗಳಲ್ಲಿ ನಾಲ್ಕು ದಿನಗಳು ಸುರೆಯನ್ನು ವಿಶೇಷವಾಗಿ ತಯಾರಿಸಲು ಆಜ್ಞಾಪಿಸತಕ್ಕದ್ದು, ಎಂದು ಕೌಟಿಲ್ಯನು ಹೇಳುತ್ತಾನೆ. ಹೊಸದಾಗಿ ಒಂದು ದೇಶವನ್ನು ರಾಜನು ಆಕ್ರಮಿಸಿಕೊಂಡರೆ, ಅಲ್ಲಿ ಅದುವರೆಗೂ ನಡೆಯುತ್ತಿದ್ದ ಸಮಾಜ ಉತ್ಸವ ವಿಹಾರಗಳನ್ನು ಮುಂದಕ್ಕೂ ಪರಿಪಾಲಿಸಿಕೊಂಡು ಬರಬೇಕೆಂದೂ ಇಲ್ಲದಿದ್ದರೆ ಜನರು ಆಕ್ರೋಶಗೊಳ್ಳುವರೆಂದೂ ಕೌಟಿಲ್ಯನು ಉಪದೇಶಿಸುತ್ತಾನೆ (XIII, ೨೫) ಚಂದ್ರಗುಪ್ತನ ಕಾಲದಲ್ಲಿ ಟಗರಿನ ಕಾಳಗ, ಕೋಳಿ ಕಾಳಗ, ಆನೆಗಳು ಘೇಂಡಾ ಮೃಗಗಳು ಇವುಗಳ ಕದನ, ಎರಡು ಎತ್ತುಗಳನ್ನೂ ನಡುವೆ ಒಂದು ಕುದುರೆಯನ್ನೂ ಕಟ್ಟಿದ ರಥಗಳ ಪಂದ್ಯ, ಇವು ನಡೆಯುತ್ತಿದ್ದುವೆಂದು ಈಲಿಯನ್ ಎಂಬ ಯವನ ಗ್ರಂಥಕರ್ತ ಹೇಳುತ್ತಾನೆ. ಇಂತಹ ಉತ್ಸವಗಳನ್ನೇ ಸಮಾಜಗಳೆಂದು ಸೂಚಿಸಿ ಅಶೋಕನು ನಿಷೇಧಿಸುತ್ತಿರಬೇಕೆಂದು ತೋರುತ್ತದೆ.

೨

ದೇವಾನಾಂಪ್ರಿಯ ಪ್ರಿಯದರ್ಶಿರಾಜನ ವಿಜಿತ[1]ದಲ್ಲಿ ಎಲ್ಲೆಲ್ಲೂ, ಹಾಗೆಯೇ ಅವನ ಪ್ರಾತ್ಯಂತದವರಲ್ಲೂ—ಅಂದರೆ ಚೋಳ ಪಾಂಡ್ಯ ಸತ್ಯಪುತ್ರ[2] ಕೇರಳ ಪುತ್ರ ತಾಮ್ರಪರ್ಣಿ[3] ತನಕ—ಯೋನರಾಜನಾದ ಅಂತಿಯೋಕ,[4] ಅಂತಿಯೋಕನ ಸಮೀಪದ ರಾಜರು—ಎಲ್ಲೆಲ್ಲೂ ದೇವಾನಾಂಪ್ರಿಯ ಪ್ರಿಯದರ್ಶಿ

---

[1] ವಿಜಿತ—ವಿಜಿತವೆಂದರೆ ಅಶೋಕನು ನೇರವಾಗಿ ಗೆದ್ದು ಆಳುತ್ತಿದ್ದ ದೇಶಗಳೆಂದು ಅರ್ಥ. ರಾಜವಿಷಯ ಎಂಬುದಾಗಿಯೂ ಇದನ್ನು ಸೂಚಿಸುತ್ತಾನೆ. ವಿಜಿತದ ಹತ್ತಿರದ ದೇಶಗಳನ್ನು ಪ್ರಾತ್ಯಂತ ಅಥವಾ ಅಂತ ಎಂಬ ಮಾತುಗಳಿಂದ ಸೂಚಿಸುತ್ತಾನೆ. ಅರ್ಥಶಾಸ್ತ್ರದಲ್ಲಿ ಕೂಡ ರಾಜಕುಮಾರರನ್ನು ವಿದ್ಯಾಭ್ಯಾಸಕ್ಕಾಗಿ ನೆರೆಯ ರಾಷ್ಟ್ರಗಳಿಗೆ ಕಳುಹಿಸಬೇಕೆಂದು ಹೇಳುವಾಗ ಪ್ರಾತ್ಯಂತ ಎಂಬ ಮಾತನ್ನೇ ಕೌಟಿಲ್ಯನು ಉಪಯೋಗಿಸುತ್ತಾನೆ. (I, ೧೬)

[2] ಸತ್ಯಪುತ್ರ—ಸತ್ಯಪುತ್ರರು ಅಂದರೆ ಯಾರು ಎಂಬುದು ಇನ್ನೂ ನಿರ್ಧರವಾಗಿಲ್ಲ. ಕೋಯಮುತ್ತೂರು ಜಿಲ್ಲೆಯ ಸತ್ಯಮಂಗಲ ಪ್ರಾಂತದವರು ಎಂದು ವಿನ್‌ಸೆಂಟ್‌ಸ್ಮಿತ್‌ರವರೂ, ತಮಿಳು ಗ್ರಂಥಗಳಲ್ಲಿ ಸತ್ಯಭೂಮಿ ಎಂದು ಉಕ್ತವಾಗಿರುವ ತುಳುವ ದೇಶವೇ ಸತ್ಯಪುತ್ರರ ದೇಶವೆಂದು ಹುಲ್‌ಷ್‌ರೂ, ಕೊಂಕಣದೇಶದವರೆಂದು ಭಂಡಾರಕರರೂ ಅಭಿಪ್ರಾಯಪಡುತ್ತಾರೆ. ಚೋಳ ಪಾಂಡ್ಯ ಕೇರಳ ಎಂಬ ಮೂರು ಮುಖ್ಯ ಜನಾಂಗಗಳನ್ನು ಸೇರಿಸಿದರೆ, ದಕ್ಷಿಣ ಇಂಡಿಯಾದಲ್ಲಿ ಅಶೋಕನ ಪ್ರಾತ್ಯಂತದವರಾಗಿ ಉಳಿಯುವುದು ತುಳುವ ದೇಶವೇ ಎಂದು ತೋರುತ್ತದೆ. ಆದ್ದರಿಂದ, ಸತ್ಯಪುತ್ರರು ತುಳುವರೆಂಬ ವಾದವೇ ಸಮಂಜಸವಾಗಿ ಕಾಣುತ್ತದೆ. (ಗೋವಿಂದ ಪೈ: ಕೆ. ವಿ. ರಂಗಸ್ವಾಮಯ್ಯಂಗಾರ್ ಸ್ಮಾರಕ ಗ್ರಂಥ ೪೫-೪೬)

[3] ತಾಮ್ರಪರ್ಣಿ—ತಿರುನಲ್‌ವೇಲಿ ಜಿಲ್ಲೆಯಲ್ಲಿ ತಾಮ್ರಪರ್ಣಿ ಎಂಬ ಒಂದು ನದಿಯಿದೆ. ಪ್ರಾಚೀನ ಬೌದ್ಧ ಗ್ರಂಥಗಳಲ್ಲಿ ಸಿಂಹಳದ್ವೀಪಕ್ಕೆ ತಾಮ್ರಪರ್ಣಿ ಎಂದು ಹೇಳಿದೆ. ಈ ಶಾಸನದಲ್ಲಿ "ತಾಮ್ರಪರ್ಣಿತನಕ" ಎಂದು ಹೇಳಿರುವುದರಿಂದ ಸಮುದ್ರದಾಚೆ ಇರುವ ಆ ದೇಶದಲ್ಲೂ ಎಂಬ ಅರ್ಥವೇ ಸ್ಫುರಿಸುತ್ತದೆ. ೧೩ನೆಯ ಶಾಸನದಲ್ಲೂ 'ತಾಮ್ರಪರ್ಣಿಯವರೆಗೆ' ಎಂದು ಹೇಳಿದೆ. ಅಶೋಕನ ಮಗನಾದ ಮಹೇಂದ್ರನು ಧರ್ಮಪ್ರಚಾರಕ್ಕಾಗಿ ಭಿಕ್ಷು ಭಿಕ್ಷುಣಿಯರೊಂದಿಗೆ ಹೋಗಿದ್ದ ಸಿಂಹಳವನ್ನು ಸೂಚಿಸದೆ, ಯಾವುದೋ ಒಂದು ಸಣ್ಣ ನದಿಯನ್ನು ಇಲ್ಲಿ ಸೂಚಿಸಿದೆ, ಅಂದರೆ ಅಷ್ಟು ಸಮರ್ಪಕವಾಗಿ ಕಾಣುವುದಿಲ್ಲ.

[4] ಅಂತಿಯೋಕ—ಸಿರಿಯ ದೇಶದ ಎರಡನೆಯ ಅಂತಿಯೋಕ ಎಂಬ ರಾಜನು. ಸೆಲ್ಯೂಕಸ್‌ನ ಅನಂತರ ಪಟ್ಟಕ್ಕೆ ಬಂದ ಅಂತಿಯೋಕಸ್ ಸೋಟರ್ ಎಂಬವನು ಅಶೋಕನು ಅಭಿಷಿಕ್ತನಾಗಿ ಸುಮಾರು ಒಂಬತ್ತು ವರ್ಷಗಳಾದಾಗ ತೀರಿಕೊಂಡುಬಿಟ್ಟಿದ್ದನು. ಸಿರಿಯ ಸಾಮ್ರಾಜ್ಯವು ಹಿಂದೂಸ್ತಾನದ ಗಡಿಯವರೆಗೂ ಆಗ ಹಬ್ಬಿತ್ತೆಂದು ಈ ಶಾಸನದಿಂದ ಗೊತ್ತಾಗುತ್ತದೆ. ಈತನು ಕ್ರಿ.ಪೂ. ೨೬೧ ರಿಂದ ೨೪೬ ವರೆಗೆ ಆಳಿದನು. "ದೇವ" ಎಂಬ ಬಿರುದನ್ನೂ ಇವನು ಪಡೆದಿದ್ದನು.

ರಾಜನು ಎರಡು ವಿಧದ ಚಿಕಿತ್ಸೆಯನ್ನು ಏರ್ಪಡಿಸಿರುವನು—ಮನುಷ್ಯ ಚಿಕಿತ್ಸೆ ಮತ್ತು ಪಶುಚಿಕಿತ್ಸೆ. ಮನುಷ್ಯರಿಗೆ ಒಳ್ಳೆಯದನ್ನು ಮಾಡುವ ಹಾಗೂ ಪಶುಗಳಿಗೆ ಒಳ್ಳೆಯದನ್ನು ಮಾಡುವ ಔಷಧಗಳು ಎಲ್ಲೆಲ್ಲಿ ಇಲ್ಲವೋ ಅಲ್ಲೆಲ್ಲ ಅವುಗಳನ್ನು ತರಿಸಿ ನೆಡಿಸಲಾಗಿದೆ. ಮೂಲಗಳಾಗಗಿ ಫಲಗಳಾಗಲಿ ಎಲ್ಲೆಲ್ಲಿ ಇಲ್ಲವೋ ಅಲ್ಲೆಲ್ಲ ಅವುಗಳನ್ನು ತರಿಸಿ ನೆಡಿಸಲಾಗಿದೆ. ಮಾರ್ಗಗಳಲ್ಲಿ ಬಾವಿಗಳನ್ನು ತೋಡಿಸಲಾಗಿದೆ. ಪಶುಗಳ ಹಾಗೂ ಮನುಷ್ಯರ ಉಪಯೋಗಕ್ಕಾಗಿ ಮರಗಳನ್ನು ನೆಡಿಸಲಾಗಿದೆ.

## ೩

ದೇವನಾಂಪ್ರಿಯ ಪ್ರಿಯದರ್ಶಿರಾಜನು ಹೀಗೆ ಹೇಳುವನು:

ಅಭಿಷಿಕ್ತನಾಗಿ ಹನ್ನೆರಡು ವರ್ಷಗಳಾದಾಗ ನನ್ನಿಂದ ಹೀಗೆ ಆಜ್ಞಾಪಿಸಲಾಯಿತು: ನನ್ನ ವಿಜಿತದಲ್ಲೆಲ್ಲ ಯುಕ್ತರೂ[1] ರಾಜುಕರೂ[2] ಪ್ರಾದೇಶಿಕರೂ ಐದುವರ್ಷಕ್ಕೊಮ್ಮೆ ಈ ಧರ್ಮಾನುಶಾಸ್ತಿಗಾಗಿಯೂ ಇತರ ಕಾರ್ಯಗಳಿಗಾಗಿಯೂ ಅನುಸಂಯಾನ[3] ಮಾಡತಕ್ಕದ್ದು: ಮಾತೃ ಶುಶ್ರೂಷೆಯೂ

---

[1] ಯುಕ್ತರು: ಯುಕ್ತ ಉಪಯುಕ್ತ ಪುರುಷ ಎಂಬ ಅಧಿಕಾರಿಗಳನ್ನು ಕುರಿತು ಕೌಟಿಲ್ಯನು ಪ್ರತಿಪಾದಿಸುತ್ತಾನೆ. (II ೨೫) ಯುಕ್ತೋಪಯುಕ್ತ ತತ್ಪುರುಷಾಣಾಂ... ಇತ್ಯಾದಿ. ಯುಕ್ತರೆಂದರೆ, ಅಧಿಕಾರಿಗಳಿಗಿದ್ದ ಒಂದು ಸಾಮಾನ್ಯ ಹೆಸರೆಂದು ತೋರುತ್ತದೆ. 'ಪುರುಷ' ಎಂಬ ಪದ ಕೂಡ ಯುಕ್ತರಂತೆಯೇ ಎಲ್ಲ ಅಧಿಕಾರಿಗಳನ್ನೂ ಸೂಚಿಸುತ್ತದೆ ಎಂಬುದು ಕೆಲವರ ಮತ.

[2] ರಾಜುಕರು: ಸ್ತಂಭಶಾಸನ ೪ ರಿಂದ, ಇವರು ಪುರುಷರಿಗೆ ಅಧೀನರೆಂದೂ ಪ್ರಾದೇಶಿಕರಿಗಿಂತ ಮೇಲಿನವರೆಂದೂ ಗೊತ್ತಾಗುತ್ತದೆ. ರಾಜುಕ ಎಂಬ ಪದ ರಜ್ಜುಗ್ರಾಹಕ, ರಜ್ಜುಕ, ಎಂಬ ಮಾತುಗಳ ತದ್ಭವ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಹೊಲಗದ್ದೆಗಳ ಅಳತೆಗೆ ಆಗಿನ ಕಾಲದಲ್ಲಿ ಹಗ್ಗವನ್ನೇ ಉಪಯೋಗಿಸುತ್ತಿದ್ದರಾದ್ದರಿಂದ ಅವುಗಳನ್ನಳೆದು ಕಂದಾಯವನ್ನು ಗೊತ್ತುಮಾಡಿ ಅದನ್ನು ಶೇಖರಿಸುವ ಇಲಾಖೆಯ ಅಧಿಕಾರಿಗಳಿಗೆ ರಜ್ಜುಕ ಎಂಬ ಹೆಸರು ಬಂದಿದ್ದರೂ ಇರಬಹುದು. ಮೌರ್ಯಸಾಮ್ರಾಜ್ಯದಲ್ಲಿ "ನೀರಾವರಿ, ಭೂಮಿಯ ಅಳತೆ, ಕಂದಾಯದ ವಸೂಲಿ, ವ್ಯವಸಾಯದ ಮೇಲ್ವಿಚಾರಣೆ, ಬೇಡರ ಹತೋಟಿ—ಮುಂತಾದ ಮುಖ್ಯ ಕಾರ್ಯಗಳಿಗಾಗಿ ಕೆಲವು ಉನ್ನತಾಧಿಕಾರಿಗಳಿರುವರು" ಎಂದು ಮೆಗಾಸ್ತನೀಸ್ ಹೇಳಿರುತ್ತಾನೆ. ಬಹುಶಃ ಅವನು ಈ ವಿವರಣೆಯಿಂದ ರಾಜುಕರನ್ನೇ ಸೂಚಿಸುತ್ತಿರಬಹುದು.

[3] ಅನುಸಂಯಾನ: ಈ ಮಾತಿಗೆ ಜಯಸ್ವಾಲರು 'ವರ್ಗಾಯಿಸುವುದು' ಎಂಬ ಅರ್ಥವನ್ನು ಹೇಳುತ್ತಾರೆ. ಅಧಿಕಾರಿಗಳು ಒಂದೇಕಡೆ ಬಹುಕಾಲವಿದ್ದರೆ ಧರ್ಮಾನುಶಾಸ್ತಿಗೂ ಇತರ ಕಾರ್ಯಗಳಿಗೂ ತೊಂದರೆಯಾಗುವುದೆಂಬ ಭಯದಿಂದ ಅಶೋಕನು

ಪಿತೃ ಶುಶ್ರೂಷೆಯೂ ಸಾಧುವಾದದ್ದು ; ಮಿತ್ರರಿಗೂ ಪರಿಚಿತರಿಗೂ ಬ್ರಾಹ್ಮಣ ಶ್ರಮಣರಿಗೂ ಮಾಡುವ ದಾನ ಸಾಧುವಾದದ್ದು ; ಪ್ರಾಣಿಗಳನ್ನು ಕೊಲ್ಲದಿರುವುದು ಸಾಧುವಾದದ್ದು ; ಅಲ್ಪವಾಗಿ ವ್ಯಯಮಾಡುವುದೂ, ಅಲ್ಪವಾಗಿ ಕೂಡಿಡುವುದೂ ಸಾಧುವಾದದ್ದು.

ಈ ಆಜ್ಞೆಯ ಕಾರಣವನ್ನೂ ಅರ್ಥವನ್ನೂ ತಿಳಿದು ಗಣನೆಮಾಡುವಂತೆ ಪರಿಷತ್ತು[1] ಯುಕ್ತರಿಗೆ ಆಜ್ಞಾಪಿಸತಕ್ಕದ್ದು.

೪

ಬಹುಕಾಲದ ವರೆಗೆ, ಅನೇಕ ಶತಮಾನಗಳ ತನಕ, ಪ್ರಾಣಿವಧೆಯೂ ಹಿಂಸೆಯೂ ಜ್ಞಾತಿಗಳಲ್ಲಿ ಅಸಂಪ್ರತಿಪತ್ತಿಯೂ ಬ್ರಾಹ್ಮಣ ಶ್ರಮಣರಲ್ಲಿ ಅಸಂಪ್ರತಿಪತ್ತಿಯೂ ವರ್ಧಿಸಿದೆ. ಆದರೆ ಈಗ ದೇವನಾಂಪ್ರಿಯ ಪ್ರಿಯದರ್ಶಿ ರಾಜನ ಧರ್ಮಾಚರಣೆಯ ಫಲವಾಗಿ ಭೇರೀಘೋಷ ಧರ್ಮಘೋಷವಾಯಿತು. ವಿಮಾನದರ್ಶನ[2] ಹಸ್ತಿದರ್ಶನ ಅಗ್ನಿಸ್ಕಂಧ ಮೊದಲಾದ ದಿವ್ಯ

---

ಅವರನ್ನು ಐದುವರ್ಷಕ್ಕೊಮ್ಮೆ ವರ್ಗಾಯಿಸಿದನೆಂದು ಹೇಳುತ್ತಾರೆ. ಆದರೆ, ಇಂತಹ ಕೆಲಸಕಾರ್ಯಗಳು ಸಾಂಗವಾಗಿ ನೆರವೇರುತ್ತವೆಯೋ ಎಂದರಿಯಲು ಉನ್ನತಾಧಿಕಾರಿಗಳು ತಮ್ಮ ಅಧಿಕಾರಕ್ಷೇತ್ರದಲ್ಲಿ ಸಂಚಾರಮಾಡುವುದು ಎಂಬರ್ಥದಲ್ಲಿ ಅನುಸಂಯಾನ ಎಂಬ ಪದವನ್ನು ಇಲ್ಲಿ ಉಪಯೋಗಿಸಲಾಗಿದೆ ಎಂದು ವೂಲ್‌ನರ್‌ರವರು ಅಭಿಪ್ರಾಯಪಡುತ್ತಾರೆ. ಒಂದನೆಯ ಕಳಿಂಗ ಶಾಸನದಲ್ಲೂ ಅಶೋಕನು ಅನುಸಂಯಾನದ ಏರ್ಪಾಟನ್ನು ಪ್ರಸ್ತಾಪಿಸುತ್ತಾನೆ. ಅಲ್ಲಿಯ ಅಭಿಪ್ರಾಯಕ್ಕೆ 'ವರ್ಗಾಯಿಸುವುದು' ಎಂಬ ಅರ್ಥ ಸಮಂಜಸವಾಗಿಲ್ಲ. ಸಂಚಾರ ಮಾಡಿಸುವುದು, ಎಂಬುದೇ ಸರಿ ಎನಿಸುತ್ತದೆ.

[1] ಪರಿಷತ್ತು : ಮಂತ್ರಿಸಭೆ.

[2] ವಿಮಾನದರ್ಶನ—ವಿಮಾನವಸ್ತು ಎಂಬ ಬೌದ್ಧ ಗ್ರಂಥದಲ್ಲಿ ದೇವತೆಗಳು ವಾಸಿಸುವ ವಿಮಾನಗಳ ವಿವರಣೆ ಇದೆ. ಸತ್ಕರ್ಮದಿಂದ ಲಭಿಸುವ ದೇವಲೋಕದ ಸುಖ ಶಾಂತಿಗಳನ್ನು ಜನಮನಕ್ಕೆ ತರುವ ಸಲುವಾಗಿ ಅಂತಹ ವಿಮಾನಗಳನ್ನು ಮಾಡಿಸಿ ಮೆರವಣಿಗೆ ಹೊರಡಿಸಿ ಅಶೋಕನು ಜನರನ್ನು ತಿದ್ದಲು ಪ್ರಯತ್ನಿಸಿದಂತೆ ಕಾಣುತ್ತದೆ. ಬುದ್ಧದೇವನು ಶ್ವೇತಗಜವಾಗಿ ಭೂಲೋಕಕ್ಕೆ ಇಳಿದು ಬಂದನಾದ್ದರಿಂದ ಹಸ್ತಿದರ್ಶನವು ಕೂಡ ವಾಡಿಕೆಗೆ ಬಂದಿರಬಹುದು. ಅಶೋಕನ ಶಾಸನಗಳನ್ನು ಬರೆದಿರುವ ಗಿರಿನಗರದ ಬಂಡೆಯಲ್ಲಿ ಒಂದು ಆನೆಯ ರೂಪರೇಖೆಯೂ ಸರ್ವಶ್ವೇತೋಹಸ್ತಿ ಸರ್ವಲೋಕ ಸುಖಾಹರೊ ನಾಮ ಎಂಬ ವಿವರಣೆಯೂ ಇವೆ. ಕಾಲ್‌ಸಿಯಲ್ಲಿ 'ಗಜೋತ್ತಮ' ಎಂದು ಮಾತ್ರ ಬರೆದಿದೆ. ಧೌಳಿಯಲ್ಲಿ ಶಾಸನಗಳನ್ನು ಬರೆದಿರುವ ಬಂಡೆಯ ಮೇಲುಭಾಗವನ್ನು ಶಿಲ್ಪಿಗಳು ಕೊರೆದು ಆನೆಯ ಮುಂಭಾಗದಂತೆ ಮಾಡಿದಾರೆ. ಕೆಲವು ಸ್ತಂಭಗಳ ಮೇಲೂ ಆನೆಯ ಪ್ರತಿಮೆಗಳಿವೆ ಆದ್ದರಿಂದ ಆಗಿನ ಕಾಲವಲ್ಲಿ ಹಸ್ತಿದರ್ಶನದಿಂದ ಜನರಲ್ಲಿ ಬುದ್ಧನ ನೆನಪಾಗಿ ಅವರಲ್ಲಿ

ರೂಪಗಳ ದರ್ಶನ ಇವು ಜನರಿಗಾಗುತ್ತಿವೆ. ಅನೇಕ ಶತಮಾನಗಳ ತನಕ ನಡೆಯದೆ ಇದ್ದದ್ದು ಈಗ ದೇವನಾಂಪ್ರಿಯ ಪ್ರಿಯದರ್ಶಿ ರಾಜನ ಧರ್ಮಾನು ಶಾಸ್ತಿಯಿಂದ ವರ್ಧಿಸುತ್ತಿದೆ. ಪ್ರಾಣಿಗಳನ್ನು ಕೊಲ್ಲದಿರುವುದು, ಪ್ರಾಣಿಗಳ ವಿಷಯದಲ್ಲಿ ಅಹಿಂಸೆ, ಜ್ಞಾತಿಗಳಲ್ಲಿ ಸಂಪ್ರತಿಪತ್ತಿ ಬ್ರಾಹ್ಮಣ ಶ್ರಮಣರಲ್ಲಿ ಸಂಪ್ರತಿಪತ್ತಿ ಮಾತಾಪಿತೃಗಳ ಶುಶ್ರೂಷೆ ಹಿರಿಯರ ಶುಶ್ರೂಷೆ ಈ ರೀತಿಗಳಲ್ಲೂ ಇತರ ರೀತಿಗಳಲ್ಲೂ ಬಹುವಿಧವಾಗಿ ಧರ್ಮಾಚರಣೆ ವರ್ಧಿಸಲ್ಪಡುತ್ತಿದೆ. ದೇವಾನಾಂಪ್ರಿಯ ಪ್ರಿಯದರ್ಶಿ ರಾಜನ ಪುತ್ರರೂ ಪೌತ್ರರೂ ಪ್ರಪೌತ್ರರೂ ಕಲ್ಪಾಂತದವರೆಗೂ ಈ ಧರ್ಮಾಚರಣೆಯನ್ನು ಅಭಿವೃದ್ಧಿಪಡಿಸುತ್ತಾರೆ. ಧರ್ಮದಲ್ಲೂ ಶೀಲದಲ್ಲೂ ಪ್ರತಿಷ್ಠಿತರಾಗಿ ಅವರು ಧರ್ಮವನ್ನೇ ಅನುಶಾಸನ ಮಾಡುತ್ತಾರೆ. ಧರ್ಮಾನುಶಾಸನವೇ ಶ್ರೇಷ್ಠವಾದ ಮಾರ್ಗ. ಧರ್ಮಾ ಚರಣೆ ಅಶೀಲವಂತರಿಂದ ಆಗದ ಕೆಲಸ. ಅದರಲ್ಲಿ ಅಭಿವೃದ್ಧಿಹೊಂದಿದರೆ ಒಳ್ಳೆಯದು. ಆದರೆ, ಕ್ಷಯಹೊಂದದಿರುವುದೂ ಕೂಡ ಸಾಧುವಾದದ್ದೇ. ಇದಕ್ಕಾಗಿಯೇ ಈ ಧರ್ಮಲಿಪಿಯನ್ನು ಬರಸಲಾಗಿದೆ: ಅಭಿವೃದ್ಧಿಯಾಗು ವಂತೆ ಅವರು ಯೋಚಿಸಲಿ. ಅವರಲ್ಲಿ ಕ್ಷಯ ಕಂಡುಬರದಿರಲಿ. ಅಭಿಷಿಕ್ತ ನಾಗಿ ಹನ್ನೆರಡು ವರ್ಷಗಳಾದಾಗ ಇದನ್ನು ದೇವಾನಾಂಪ್ರಿಯ ಪ್ರಿಯ ದರ್ಶಿ ರಾಜನು ಬರಸಿದನು.

## ೫

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು:

ಕಲ್ಯಾಣ ಮಾಡುವುದು ಕಷ್ಟ. ಕಲ್ಯಾಣ ಮಾಡುವವನು ಕಷ್ಟವಾದ ದ್ದನ್ನೇ ಮಾಡುತ್ತಾನೆ. ಈಗ ಇಂತಹ ಅನೇಕ ಕಲ್ಯಾಣಗಳು ನನ್ನಿಂದ

---

ಧರ್ಮಾಚರಣೆ ಹೆಚ್ಚುವುದೆಂದು ಅಶೋಕನು ಯೋಚಿಸಿರಬಹುದು. 'ಅಗ್ನಿಸ್ಕಂಧ' ಎಂಬುದರ ಅರ್ಥದ ವಿಚಾರವಾಗಿ ಅಭಿಪ್ರಾಯ ವ್ಯತ್ಯಾಸಗಳಿವೆ. ಅಗ್ನಿಯಂತೆ ಪ್ರಜ್ವಲಿಸು ತ್ತಿರುವ ದೇವತಾಸ್ವರೂಪಗಳೆಂದು ಹಲವರು, ದೀಪೋತ್ಸವವೆಂದು ಹಲವರು, ನರಕದಲ್ಲಾ ಗುವ ಹಿಂಸೆಯ ಸಂಕೇತವೆಂದು ಹಲವರು, ಹೀಗೆ ಅನೇಕರು ಅನೇಕ ರೀತಿಯಲ್ಲಿ ಅರ್ಥ ಕಲ್ಪಿಸುತ್ತಾರೆ. ಷಾಬಾಸ್‌ಗಡಿಯಲ್ಲಿನ ಪಾಠದಂತೆ 'ಜ್ಯೋತಿಸ್ಥಂಭ' ಎಂಬ ಮಾತಿದೆ. ಸ್ವರ್ಗವಾಸಿಯಾದರೆ ವಿಮಾನಲಾಭವೂ ಹಸ್ತಿಲಾಭವೂ ತೇಜೋಮಯವಾದ ರೂಪಲಾಭವೂ ದೊರಕುವುದೆಂದು ವಿಮಾನವಸ್ತುವಿನಲ್ಲಿ ಉಕ್ತವಾಗಿರುವುದರಿಂದ ವಿಮಾನದರ್ಶನ ಹಸ್ತಿದರ್ಶನ ಅಗ್ನಿಸ್ಕಂಧದರ್ಶನ ದಿವ್ಯರೂಪದರ್ಶನ ಇವುಗಳನ್ನು ಒದಗಿಸಿ ಅಶೋಕನು ಧರ್ಮಪ್ರೇಮವನ್ನು ವೃದ್ಧಿಗೊಳಿಸಿರಬೇಕೆಂದು ಡಿ. ಆರ್. ಭಂಡಾರಕರ್‌ರವರು ಬರೆದಿರುವರು.

ಮಾಡಲ್ಪಟ್ಟಿವೆ. ಆದ್ದರಿಂದ ನನ್ನ ಪುತ್ರರೂ ಪ್ರಪೌತ್ರರೂ ಅವರ ಅನಂತರ ನನ್ನ ವಂಶಜರೂ ಕಲ್ಪಾಂತದವರೆಗೂ ಈ ಮಾರ್ಗವನ್ನನುಸರಿಸಿದರೆ ಅವರು ಸುಕೃತವನ್ನು ಮಾಡಿದಂತೆಯೇ. ಆದರೆ ಇದರಲ್ಲಿ ಕೊಂಚವೂ ಕಡಮೆ ಮಾಡಬಾರದು. ಹಾಗೆ ಮಾಡಿದರೆ, ದುಷ್ಕೃತ ಮಾಡಿದಂತೆಯೇ. ಏಕೆಂದರೆ ಪಾಪಮಾಡುವುದು ಬಹು ಸುಲಭ. ಬಹುಕಾಲದವರೆಗೆ ಧರ್ಮಮಹಾ ಮಾತ್ರರೆಂಬವರು ಇರಲಿಲ್ಲ. ಅಭಿಷಿಕ್ತನಾಗಿ ಹದಿಮೂರು ವರ್ಷಗಳಾದಾಗ ನನ್ನಿಂದ ಧರ್ಮಮಹಾಮಾತ್ರರೆಂಬವರು ಮಾಡಲ್ಪಟ್ಟರು. ಧರ್ಮಾಧಿಷ್ಠಾನ ಧರ್ಮಬುದ್ಧಿ ಇವುಗಳನ್ನು ಬೆಳೆಸಲು, ಧರ್ಮಯುಕ್ತರಾದವರ ಹಿತ ಸುಖಗಳನ್ನು ಪಾಲಿಸಲು, ಅವರು ಸರ್ವಮತದವರಲ್ಲೂ ವ್ಯಾಪಿಸಿರುವರು. ಯೋನರು[1] ಕಾಂಭೋಜರು ಗಾಂಧಾರರು ಇವರಲ್ಲೂ ರಾಷ್ಟ್ರಿಕ[2] ಪಿಟೆನಿಕರಲ್ಲೂ ಅಪರಾಂತದ ಇತರರಲ್ಲೂ ಅವರು ವ್ಯಾಪಿಸಿರುವರು. ಭೃತ್ಯರು

---

[1] ಯೋನರು—ಅಂತ ಅಥವಾ ಪ್ರಾತ್ಯಂತದಲ್ಲಿದ್ದ ಯವನ ರಾಜರಲ್ಲಿಗೆ ಅಶೋಕನು ದೂತರನ್ನು ಕಳುಹಿಸುತ್ತಾನೆ; ಧರ್ಮವಿಜಯವನ್ನು ಸಾಧಿಸುತ್ತಾನೆ (ಶಿ. ಶಾ. ೧೩) ಅಲ್ಲದೆ (ಶಿ. ಶಾ. ೨) ಪಶುಗಳಿಗೂ ಮನುಷ್ಯರಿಗೂ ಚಿಕಿತ್ಸಾಲಯಗಳನ್ನು ಸ್ಥಾಪಿಸುತ್ತಾನೆ. ಆದರೆ, ಧರ್ಮಮಹಾಮಾತ್ರರೆಂಬ ಹೊಸಬಗೆಯ ಅಧಿಕಾರಿಗಳು ೨ ಮತ್ತು ೧೩ನೆಯ ಶಾಸನಗಳಲ್ಲಿ ಉಕ್ತವಾಗಿರುವ ರಾಜ್ಯಗಳಿಗೆ ಹೋದಂತಿಲ್ಲ. ಈ ಶಾಸನದಲ್ಲಿ 'ಯೋನರು' ಎಂದು ಹೇಳಿರುವುದು "ಅಪರಾಂತ"ದ ನಿವಾಸಿಗಳಾದ ಹಲವು ಯವನ ಜನಾಂಗಗಳನ್ನು ಉದ್ದೇಶಿಸಿ. ಅಪರಾಂತ ವೆಂದರೆ 'ಪಶ್ಚಿಮ ಭಾಗ' ಎಂದು ಪುರಾಣಗಳಲ್ಲಿ ಸೂಚನೆಯಿರುವುದಾಗಿ ರಾಧಾಕುಮುದ ಮುಖರ್ಜಿ ಅವರು ಹೇಳುತ್ತಾರೆ.

[2] ರಾಷ್ಟ್ರಿಕರು—ಗಿರಿನಗರದಲ್ಲಿ ಕ್ಷಾತ್ರಪರುದ್ರದಾಮನ ಶಾಸನವೊಂದರಲ್ಲಿ ಯವನ ತುಷಸ್ಪ ಎಂಬ ರಾಷ್ಟ್ರಿಯನು ಅಶೋಕನಕಾಲದಲ್ಲಿದ್ದನೆಂದು ಹೇಳಿರುವುದರಿಂದ ಗುಜರಾತ್ ಪ್ರಾಂತದಲ್ಲಿ ರಾಷ್ಟ್ರಿಕರಿದ್ದಿರಬೇಕೆಂದು ಹುಲ್ಷ್‌ರವರು ಅಭಿಪ್ರಾಯಪಡುತ್ತಾರೆ. ಆ ಪ್ರದೇಶಕ್ಕೆ ಹಿಂದೆ ಸುರಾಷ್ಟ್ರ ಎಂಬ ಹೆಸರಿತ್ತು. ಮಹಾರಾಷ್ಟ್ರ ಪ್ರಾಂತದಲ್ಲಿ ಮಹಾರಥಿ ಮಹಾಭೋಜ ಎಂಬ ಹೆಸರುಗಳು ಆಂಧ್ರ ಶಾತವಾಹನ ಕಾಲಗಳಲ್ಲಿ ಸಿಕ್ಕಿರುವುದರಿಂದ, ರಾಷ್ಟ್ರಿಕರೂ ೧೩ನೆಯ ಶಾಸನದಲ್ಲಿ ಹೇಳಿರುವ ಭೋಜರೂ ಅಲ್ಲೇ ಇದ್ದಿರಬೇಕೆಂದು ಭಂಡಾರಕರರು ಹೇಳುತ್ತಾರೆ. "ಪಿಟನಿಕ" ಅಂದರೆ, "ತಲೆತಲಾಂತರದಿಂದ ಬಂದ" ಎಂಬುದೇ ಅರ್ಥ ಎಂದು ಭಂಡಾರಕರರು ವಾದಿಸುತ್ತಾರೆ. ಆದರೆ, ಇದು ಸಮಂಜಸವಾಗಿ ಕಾಣುವುದಿಲ್ಲ. ಪೈಠಣಪುರದ ಜನರು ಎಂದು ಸ್ಮಿತ್‌ರವರು ಹೇಳುತ್ತಾರೆ. ಪಿಟನಿಕರು ಯಾರೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ ಅವರು ಒಂದು ಪ್ರತ್ಯೇಕ ಜನಾಂಗದವರೆಂದೂ ಮಾಳವ ಸೌರಾಷ್ಟ್ರ ವಿಂಧ್ಯಪ್ರಾಂತಗಳ ಹತ್ತಿರವೇ ಅವರು ಇದ್ದಿರಬೇಕೆಂದೂ ನಾವು ಊಹಿಸಬಹುದಾಗಿದೆ.

ಸ್ವಾಮಿಗಳು ಬ್ರಾಹ್ಮಣ ತಾಪಸಿಗಳು[1] ಗೃಹಸ್ಥರು ಅನಾಥರು ವೃದ್ಧರು ಇವರ ಹಿತಸುಖಗಳಿಗಾಗಿಯೂ ಧರ್ಮಯುಕ್ತರಾದವರನ್ನು ಬಂಧನದಿಂದ ಬಿಡಿಸುವುದಕ್ಕಾಗಿಯೂ ಅವರಿರುವರು. ಬಂಧನಬದ್ಧರಾದವರಿಗೆ ಸಹಾಯ ಮಾಡುವುದಕ್ಕೂ, ಬಂಧನ ಬದ್ಧರಾದವರನ್ನು ಮಕ್ಕಳೊಂದಿಗರು ಕಷ್ಟದಲ್ಲಿ ತೊಳಲುವವರು ವೃದ್ಧರು ಎಂಬ ಕಾರಣಗಳಿಗಾಗಿ ಬಿಡಿಸುವುದಕ್ಕೂ ಅವರಿರುವರು. ಪಾಟಲೀಪುತ್ರದಲ್ಲೂ ಹೊರಗಿನ ನಗರಗಳಲ್ಲೂ ಇರುವ ಎಲ್ಲಾ ಅವರೋಧನಗಳಲ್ಲೂ ನನ್ನ ಭ್ರಾತೃ ಭಗಿನಿಯರಲ್ಲೂ[2] ಇತರ ಜ್ಞಾತಿಗಳಲ್ಲೂ ಅವರಿರುವರು. ಧರ್ಮನಿರತರಿಗಾಗಿ ಧರ್ಮಾಧಿಷ್ಠಾನದಲ್ಲಿರುವವರಿಗಾಗಿ, ದಾನ ಬುದ್ಧಿಯುಳ್ಳವರಿಗಾಗಿ ಈ ಧರ್ಮಮಹಾಮಾತ್ರರು ನನ್ನ ವಿಜಿತದಲ್ಲಿ ವ್ಯಾಪಿಸಿರುವರು.

ಇದಕ್ಕಾಗಿಯೇ ಈ ಧರ್ಮಲಿಪಿಯನ್ನು ಬರಸಲಾಗಿದೆ. ಇದು ಚಿರಸ್ಥಾಯಿಯಾಗಿರಲಿ; ನನ್ನ ಮಕ್ಕಳು ಇದನ್ನನುವರ್ತಿಸಲಿ, ಎಂದು.

೬

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು: ಬಹುಕಾಲದಿಂದಲೂ ಜನರಿಗಾಗಿ ಕರ್ಮಗಳನ್ನು ಮಾಡುವುದು, ವೃತ್ತಾಂತಗಳನ್ನು ತಿಳಿಸುವುದು ಇವು ಸರ್ವಕಾಲದಲ್ಲೂ ನಡೆಯುತ್ತಿರಲಿಲ್ಲ. ಆದ್ದರಿಂದ ನನ್ನಿಂದ ಹೀಗೆ ಮಾಡಲಾಗಿದೆ: ನಾನು ಭೋಜನಮಾಡುತ್ತಿರಲಿ, ಅವರೋಧನದೊಳಗಿರಲಿ, ಒಳಗಣ ಕೋಣೆಯೊಳಗಿರಲಿ, ಗೋಶಾಲೆಯಲ್ಲಿರಲಿ[3] ಪಲ್ಲಕ್ಕಿಯಲ್ಲಿರಲಿ, ಉದ್ಯಾನಗಳಲ್ಲಿರಲಿ,—ಸರ್ವತ್ರ ಸರ್ವಕಾಲದಲ್ಲೂ ಪ್ರತಿವೇದಕರು[4]

---

[1] ಬ್ರಾಹ್ಮಣತಾಪಸಿಗಳು—"ಇತರ ಶಾಸನಗಳಂತೆ, ಇಲ್ಲಿ ಬ್ರಾಹ್ಮಣಶ್ರಮಣರು ಎಂದು ಹೇಳಿಲ್ಲವಾದರೂ, ಇಲ್ಲೂ ಬ್ರಾಹ್ಮಣ ಎಂಬ ಪದಕ್ಕೆ ಬ್ರಾಹ್ಮಣ ಧರ್ಮದಂತೆ ವಿರಕ್ತರಾಗಿ ಸಂನ್ಯಾಸವನ್ನು ಸ್ವೀಕರಿಸಿದವರು ಎಂಬುದೇ ಅರ್ಥವಿರಬೇಕು.

[2] ಭ್ರಾತೃಭಗಿನಿಯರಲ್ಲೂ—ಸಹೋದರರೆಲ್ಲರನ್ನೂ ಕೊಂದು ಅಶೋಕನು ಸಿಂಹಾಸನಾರೋಹಣ ಮಾಡಿದನೆಂಬ ಕಥೆಗೆ ಇದು ತೀರ ವಿರುದ್ಧ!

[3] ಗೋಶಾಲೆಯಲ್ಲಿರಲಿ—ವ್ರಜೆ ಎಂಬ ಮೂಲಪದಕ್ಕೆ "ಸಪಥಿ" ಎಂಬರ್ಥವನ್ನೂ ಕೆಲವರು ಹೇಳುತ್ತಾರೆ.

[4] ಪ್ರತಿವೇದಕರು—ಹೀಗೆ ರಾಜ್ಯದ ನಾನಾ ಭಾಗಗಳ ಸಮಾಚಾರಗಳನ್ನು ರಾಜನಿಗೆ ತಿಳಿಸುವವರನ್ನು ಗೂಢ ಪುರುಷರೆಂದು ಕಾಟಿಲ್ಯನು ಹೇಳುತ್ತಾನೆ. (I, 11, 13) ದೇಶದಲ್ಲಿ ನಡೆಯುವುದೆಲ್ಲವನ್ನೂ ಕಂಡು ಕೇಳಿ ವಿಚಾರಿಸಿ ರಾಜನಿಗೆ ವರದಿ ಒಪ್ಪಿಸುವುದೇ ಹಲವು ಅಧಿಕಾರಿಗಳ ಕೆಲಸ ಎಂದು ಮೆಗಾಸ್ತನೀಸನೂ ಹೇಳುತ್ತಾನೆ.

ಬಂದು ನನಗೆ ಜನರ ಅರ್ಥವನ್ನು ತಿಳಿಸತಕ್ಕದ್ದು. ನಾನು ಜನರ ಅರ್ಥವನ್ನು ಸರ್ವತ್ರ ಮಾಡುತ್ತೇನೆ.

ಅಲ್ಲದೆ ಯಾವುದನ್ನಾದರೂ ಕೊಡಬೇಕೆಂದಾಗಲಿ, ಹೇಳಬೇಕೆಂದಾಗಲಿ ನಾನು ಮುಖತಃ ಮಾಡಿದ ಆಜ್ಞೆಯ ಮೇಲೋ ಅಥವಾ, ಮಹಾಮಾತ್ರರಿಗೆ ವಹಿಸಿದ್ದ ಅಗತ್ಯವಾದ ವಿಷಯದಲ್ಲೋ,[1] ಪರಿಷತ್ತಿನಲ್ಲಿ ವಿವಾದವಾಗಲಿ ನಿರ್ಧರವಾಗಲಿ ಉಂಟಾದರೆ ಕೂಡಲೇ ಅದನ್ನು ನಾನೆಲ್ಲಿದ್ದರೂ ನನಗೆ ಸರ್ವ ಕಾಲದಲ್ಲೂ ತಿಳಿಸತಕ್ಕದ್ದು. ಹೀಗೆ ನನ್ನಿಂದ ಆಜ್ಞಾಪಿಸಲಾಗಿದೆ.

ಜನರಿಗಾಗಿ ದುಡಿಯುವುದರಲ್ಲೂ ಅವರಿಗಾಗಿ ತೆಗೆದುಕೊಳ್ಳುವ ಉತ್ಥಾನ[2] ದಲ್ಲೂ ನನಗೆ ತುಷ್ಟಿ ಎಂಬುದೇ ಇಲ್ಲ. ಸರ್ವಲೋಕಹಿತಸಾಧನೆಯೇ ನನ್ನ ಕರ್ತವ್ಯ. ಅದಕ್ಕೆ ಮುಖ್ಯವಾದದ್ದೇನೆಂದರೆ ಉತ್ಥಾನ ಮತ್ತು ಅರ್ಥ ಸಂತೀರಣ. ಸರ್ವಲೋಕಹಿತಸಾಧನೆಗಿಂತ ಮೇಲಾದ ಕರ್ಮವೇ ಇಲ್ಲ. ನಾನು ಕಿಂಚಿತ್ತಾದರೂ ಪರಾಕ್ರಮ ಮಾಡುತ್ತಿದ್ದರೆ ಅದು ಇದಕ್ಕಾಗಿ: ಜೀವಿಗಳಿಗೆ ಸಲ್ಲಿಸಬೇಕಾದ ಋಣವನ್ನು ಕೊಡುವುದಕ್ಕಾಗಿ: ಇಲ್ಲಿ ಅವರು ಸುಖವಾಗಿರುವ ಸಲುವಾಗಿ: ಪರದಲ್ಲಿ ಅವರು ಸ್ವರ್ಗವನ್ನು ಪಡೆಯುವ ಸಲುವಾಗಿ.

ಇದಕ್ಕಾಗಿಯೇ ಈ ಧರ್ಮಲಿಪಿಯನ್ನು ಬರಸಲಾಗಿದೆ: ಇದು ಚಿರ ಸ್ಥಾಯಿಯಾಗಿರಲಿ. ನನ್ನ ಪುತ್ರರೂ ಪೌತ್ರರೂ ಪ್ರಪೌತ್ರರೂ ಸರ್ವ ಲೋಕ ಹಿತಸಾಧನೆಗಾಗಿ ಅನುಸರಿಸಲಿ. ಕಡುಪರಾಕ್ರಮದಿಂದಲ್ಲದೆ ಅದನ್ನು ಸಾಧಿ ಸುವುದು ಕಷ್ಟ.

೭

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಸರ್ವಮತದವರೂ ಸರ್ವತ್ರ ವಾಸಮಾಡಬಹುದೆಂದು ಇಚ್ಛಿಸುತ್ತಾನೆ. ಏಕೆಂದರೆ, ಅವರೆಲ್ಲರೂ ಸಂಯಮ

---

[1] ಅಗತ್ಯವಾದ ವಿಷಯ—ಆತ್ಯಯಿಕ, ಎಂಬ ಮಾತನ್ನು ಕೌಟಿಲ್ಯನೂ ಉಪಯೋಗಿಸು ತ್ತಾನೆ. ಅಗತ್ಯವಾದವುಗಳನ್ನೆಲ್ಲ ಮಂತ್ರಿಪರಿಷತ್ತಿನ ಅಭಿಪ್ರಾಯದಂತೆ ನಡಸಬೇಕೆಂದು ಅವನು ಹೇಳುತ್ತಾನೆ. "ಆತ್ಯಯಿಕೆ ಕಾರ್ಯಂ ಮಂತ್ರಿಣೊ ಮಂತ್ರಿಪರಿಷದಂ ಚ ಆಹೂಯ ಬ್ರೂಯಾತ್"

[2] ಉತ್ಥಾನ—ಈಮಾತಿಗೆ ಚಟುವಟಿಕೆ, ಜಾಗರೂಕತೆ ಎಂಬ ಅರ್ಥಗಳನ್ನು ಹೇಳಬಹು ದೆಂದು ತೋರುತ್ತದೆ. "ರಾಜ್ಞೋಹಿ ವ್ರತಮುತ್ಥಾನಂ" ಎಂದು ಕೌಟಿಲ್ಯನೂ ಹೇಳುತ್ತಾನೆ (I 19) ಮಜ್ಝಿಮನಿಕಾಯ ( I. 86) ದಲ್ಲೂ ಈ ಅರ್ಥದಲ್ಲಿ 'ಉತ್ಥಾನ'ವನ್ನು ಉಪಯೋಗಿಸಿದೆ.

ದಲ್ಲೂ ಭಾವಶುದ್ಧಿಯಲ್ಲೂ ಇಚ್ಛೆಯುಳ್ಳವರಾಗಿದಾರೆ. ಜನರಾದರೋ ವಿಧವಿಧವಾದ ಬಯಕೆಗಳನ್ನೂ ವಿಧವಿಧವಾದ ರಾಗಗಳನ್ನೂ ಹೊಂದಿರುವರು. ಆದ್ದರಿಂದ ಅವರು (ತಾವು ಮಾಡಬೇಕಾದ ಎಲ್ಲವನ್ನೂ) ನೆರವೇರಿಸಬಹುದು; ಅಥವಾ, ಸ್ವಲ್ಪಮಾತ್ರ ನೆರವೇರಿಸಬಹುದು. ಆದರೆ, ವಿಪುಲವಾಗಿ ದಾನ ಮಾಡಿದರೂ ಕೂಡ, ಸಂಯಮ ಭಾವಶುದ್ಧಿ ಕೃತಜ್ಞತೆ ದೃಢಭಕ್ತಿ ಇವು ಇಲ್ಲದಿದ್ದರೆ ನೀಚರೇ ಸರಿ.

೮

ಬಹುಕಾಲದವರೆಗೆ ದೇವಾನಾಂಪ್ರಿಯರು[1] ವಿಹಾರಯಾತ್ರೆ[2] ಎಂಬುದನ್ನು ಮಾಡುತ್ತಿದ್ದರು. ಆಗ ಬೇಟೆ ಮತ್ತು ಇತರ ಮನೋರಂಜಕಗಳು ನಡೆಯುತ್ತಿದ್ದುವು. ಆದರೆ ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಅಭಿಷಿಕ್ತನಾಗಿ ಹತ್ತು ವರ್ಷಗಳಾದಾಗ ಸಂಬೋಧಿಗೆ[3] ಹೋದನು. ಇದರಿಂದಲೇ ಧರ್ಮ

---

[1] **ದೇವಾನಾಂಪ್ರಿಯರು:** ಅಶೋಕನ ಕಾಲದ ಹಿಂದಿನ ಮಹಾರಾಜರುಗಳಿಗೆ ದೇವಾನಾಂಪ್ರಿಯ ಎಂಬ ಬಿರುದಿತ್ತೆಂಬುದಕ್ಕೆ ಇದೊಂದು ನಿದರ್ಶನ. ಗಿರಿನಗರದಲ್ಲೂ ಧೌಲಿಯಲ್ಲೂ ದೇವಾನಾಂಪ್ರಿಯರು ಎಂಬುದಕ್ಕೆ ಬದಲಾಗಿ 'ರಾಜರು' ಎಂದು ಬರೆದಿದೆ.

[2] **ವಿಹಾರಯಾತ್ರೆ:** ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ (II. ೨) ರಾಜನ ವಿಹಾರಕ್ಕಾಗಿ ಒಂದು ವನವನ್ನು ಮೀಸಲಾಗಿಡಬೇಕೆಂದೂ ಅದರ ಸುತ್ತ ಆಳವಾದ ಕಂದಕಗಳನ್ನು ತೋಡಿ ಅದರಲ್ಲಿ ಅನೇಕ ತಟಾಕಗಳನ್ನು ನಿರ್ಮಿಸಿ ಹಸ್ತಿಹಸ್ತಿನೀ ಕಲಭ ಮುಂತಾದ ಮೃಗಗಳನ್ನೂ ಭಗ್ನನಖದಂಷ್ಟ್ರವ್ಯಾಲಗಳನ್ನೂ ಅಲ್ಲಿ ಇರಿಸಬೇಕೆಂದೂ ಮುಳ್ಳಿಲ್ಲದ ಮರಗಳನ್ನು ಬೆಳೆಸಬೇಕೆಂದೂ ಹೇಳಿದೆ. ಚಂದ್ರಗುಪ್ತಮೌರ್ಯನ ಮೃಗಯಾವಿಹಾರವನ್ನು ಕುರಿತು ಮೆಗಾಸ್ತನೀಸನು ಈ ರೀತಿ ಹೇಳುತ್ತಾನೆ: "ಬಿಲ್ಲುಬಾಣಗಳನ್ನು ಹಿಡಿದ ಸ್ತ್ರೀ ಭಟರೊಡನೆ ರಥಾರೂಢನಾಗಿ ರಾಜನು ಬೇಟೆಗೆ ಹೊರಡುತ್ತಾನೆ. ರಥದ ಸುತ್ತ ನೂರಾರು ಭರ್ಜಿಯವರು ಓಡುತ್ತಾ ದಾರಿಬಿಡಿಸುವರು. ತಮಟೆಗಳನ್ನು ಬಡಿಯುತ್ತಾ ಬೇಟೆಗಾರರೆಲ್ಲರೂ ಕಾಡಿನೊಳಕ್ಕೆ ನುಗ್ಗುವರು. ವಿಹಾರಕ್ಕಾಗಿ ಮೊದಲೇ ಸಿದ್ಧಗೊಳಿಸಿರುವ ಸ್ಥಳಗಳಲ್ಲಿ ಬೇಟೆಗಾಗಿ ಪರಿಜನರೊಡನೆ ರಾಜನು ನಿಲ್ಲುವನು." (viii ೩)

[3] **ಸಂಬೋಧಿಗೆ ಹೋದನು:** (ಅಯಾಯ ಸಂಬೋಧಿಂ., ಗಿರಿನಗರ:) ಸಂಬೋಧಿ ಸಾಧನ, ಸಂಬೋಧಿವ್ರತ, ಸಂಬೋಧಿ ಮುಂತಾದ ಪದಗಳಿಗೆ ಬುದ್ಧನ ಮಾರ್ಗ ಬೌದ್ಧ ಧರ್ಮ ಎಂಬ ಅರ್ಥವಿದ್ದರೂ ಕೂಡ, ಭಂಡಾರಕರ್‌ರವರು 'ಅಯಾಯ ಸಂಬೋಧಿಂ' ಎಂಬುದಕ್ಕೆ ಬೌದ್ಧಧರ್ಮವನ್ನು ಸ್ವೀಕರಿಸಿದನು ಎಂಬುದಕ್ಕಿಂತ ಸಂಬೋಧಿ ಅಂದರೆ ಬುದ್ಧನು ಸಂಬೋಧಿಯನ್ನು ಪಡೆದ ಸ್ಥಳಕ್ಕೆ ಹೋದನು ಎಂಬ ಅರ್ಥವೇ ಸರಿ ಎಂದು ಪ್ರತಿಪಾದಿಸುತ್ತಾರೆ. ಈ ಶಾಸನದಲ್ಲಿ ಹೇಳಿರುವಂತೆ ಸಂಬೋಧಿಗೆ ಹೋದದ್ದು ಅಶೋಕನ ಮೊದಲನೆಯ ಧರ್ಮಯಾತ್ರೆ. ಆದ್ದರಿಂದ ಅದು ಒಂದು ಪುಣ್ಯಕ್ಷೇತ್ರಕ್ಕೆ ಮಾಡಿದ ಯಾತ್ರೆಯಾಗಿಯೇ ಇರಬೇಕು. ಅಲ್ಲದೆ ಷಾಬಾಸ್‌ಗಡಿ ಮುಂತಾದ ಹಲವುಕಡೆ

ಯಾತ್ರೆ ಮೊದಲಾದುದು. ಆಗ ನಡೆಯುವುದೇನೆಂದರೆ: ಬ್ರಾಹ್ಮಣ ಶ್ರಮಣರ ದರ್ಶನ, ಅವರಿಗೆ ದಾನ; ಹಿರಿಯರ ದರ್ಶನ ಅವರಿಗೆ ಹಿರಣ್ಯದಾನ; ಜನ ಪದದ ಜನರ ದರ್ಶನ, ಅವರಿಗೆ ಧರ್ಮಾನುಶಾಸ್ತಿ, ಅವರೊಂದಿಗೆ ಧರ್ಮ ವಿಷಯವಾದ ಚರ್ಚೆ. ಇದರಿಂದ ದೇವಾನಾಂಪ್ರಿಯ ಪ್ರಿಯದರ್ಶಿಗೆ ಹೆಚ್ಚು ಅಭಿರಾಮವಾಗಿದೆ.

೯

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು:

ಬಾಧೆಗೊಳಗಾದಾಗ, ಆವಾಹ ವಿವಾಹಗಳಾದಾಗ[1] ಸಂತಾನಲಾಭವಾದಾಗ ಪ್ರವಾಸ ಹೊರಡುವಾಗ ಮತ್ತು ಇತರ ಇಂತಹ ಸಮಯಗಳಲ್ಲಿ ಜನರು ವಿಧವಿಧವಾದ ಮಂಗಲಗಳನ್ನು ಮಾಡುತ್ತಾರೆ. ಮಹಿಳೆಯರಂತೂ ಅನೇಕ ಬಗೆಯ ಕ್ಷುದ್ರ ಹಾಗೂ ನಿರರ್ಥಕ ಮಂಗಲಗಳನ್ನು ಮಾಡುತ್ತಾರೆ.

ಮಂಗಲಗಳನ್ನೇನೋ ಮಾಡತಕ್ಕದ್ದೇ. ಆದರೆ ಈ ತರದ ಮಂಗಲದಿಂದ ಫಲವಿಲ್ಲ.

ಮಹತ್ತಾದ ಫಲವನ್ನು ನೀಡುವ ಮಂಗಲವೆಂದರೆ ಧರ್ಮಮಂಗಲ. ಅದು ಯಾವುದೆಂದರೆ, ದಾಸರು ಭೃತ್ಯರು ಇವರಲ್ಲಿ ಸಂಪ್ರತಿಪತ್ತಿ; ಗುರುಗಳಲ್ಲಿ ಭಕ್ತಿ. ಪ್ರಾಣಿಗಳ ವಿಷಯದಲ್ಲಿ ಸಂಯಮ ಸಾಧುವಾದದ್ದು. ಬ್ರಾಹ್ಮಣ ಶ್ರಮಣರಿಗೆ ಮಾಡುವ ದಾನ ಸಾಧುವಾದದ್ದು. ಧರ್ಮಮಂಗಲವೆಂದರೆ ಇವು; ಮತ್ತು ಇಂತಹವು. ಆದ್ದರಿಂದ ತಂದೆ ಮಗ ಸಹೋದರ ಸ್ವಾಮಿ ಮಿತ್ರ ನೆರೆಯುವನು ಎಲ್ಲರೂ ಇತರರನ್ನು ಹೀಗೆ ಎಚ್ಚರಿಸತಕ್ಕದ್ದು: ಇದು ಸಾಧುವಾದದ್ದು, ಅರ್ಥಲಾಭವಾಗುವವರೆಗೂ ಇಂತಹ ಮಂಗಲವನ್ನು ಮಾಡತಕ್ಕದ್ದು ಎಂದು.

ದಾನ ಸಾಧುವಾದದ್ದೆಂದು ಹೇಳಲಾಗಿದೆ. ಆದರೆ ಧರ್ಮದಾನದಂತಹ ದಾನವೂ ಧರ್ಮಾನುಗ್ರಹದಂತಹ ಅನುಗ್ರಹವೂ ಬೇರೆ ಇಲ್ಲ. ಆದ್ದರಿಂದ ಮಿತ್ರರಾಗಲಿ ಇಷ್ಟರಾಗಲಿ ಜ್ಞಾತಿಗಳಾಗಲಿ ಪರಿಚಿತರಾಗಲಿ ಆಯಾ ಸಂದರ್ಭ

---

'ನಿಷ್ಕಮ' ಎಂಬ ಪದವನ್ನೇ ಉಪಯೋಗಿಸಿರುವುದರಿಂದ ಅಶೋಕನು ಬುದ್ಧಗಯೆಗೆ ಹೋಗಿ ಸಂಬೋಧಿಸ್ಥಾನವನ್ನು ಸಂದರ್ಶಿಸಿ ಬಂದಿರಬೇಕೆಂಬುದೇ ಇದಕ್ಕೆ ಸರಿಯಾದ ಅರ್ಥ.

[1] ಆವಾಹ—ವಿವಾಹ: ಆವಾಹವೆಂದರೆ ಹೆಣ್ಣು ತಂದುಕೊಳ್ಳುವುದು ಅಂದರೆ, ಮಗನ ಮದುವೆ; ವಿವಾಹವೆಂದರೆ ಹೆಣ್ಣು ಕೊಡುವುದು, ಅಂದರೆ ಮಗಳ ಮದುವೆ.

ಗಳಲ್ಲಿ ಹೀಗೆ ಎಚ್ಚರಿಸತಕ್ಕದ್ದು. ಇದನ್ನು ಮಾಡತಕ್ಕದ್ದು ; ಇದೇ ಸಾಧುವಾದದ್ದು ; ಇದರಿಂದ ಸ್ವರ್ಗವನ್ನು ಪಡೆಯಬಹುದು, ಎಂದು.

ಸ್ವರ್ಗ[1]ವನ್ನು ಪಡೆಯುವುದಕ್ಕಿಂತ ಮೇಲಾದ ಕರ್ತವ್ಯ ಯಾವುದು ? [2]ಇತರ ಮಂಗಲಗಳ ಫಲ ಸಂದೇಹಾಸ್ಪದ. ಅವು ಅರ್ಥವನ್ನು ಕೊಡಬಹುದು, ಕೊಡದಿರಬಹುದು. ಅಲ್ಲದೆ ಅವು ಇಹಲೋಕಕ್ಕೆ ಮಾತ್ರ ಅನ್ವಯಿಸುತ್ತವೆ. ಆದರೆ ಪುಣ್ಯವಾದ ಧರ್ಮಮಂಗಲ ಕಾಲವನ್ನು ಮೀರಿದ್ದು. ಇಹದಲ್ಲಿ ಅರ್ಥವನ್ನು ಕೊಡದೆ ಇದ್ದರೂ ಪರದಲ್ಲಿ ಅನಂತವಾದ ಅರ್ಥವನ್ನು ಕೊಡುತ್ತದೆ. ಅದರಿಂದ ಎರಡೂ ದೊರೆಯುತ್ತವೆ. ಧರ್ಮಮಂಗಲದಿಂದ ಇಹದಲ್ಲಿ ಅರ್ಥ ; ಪರದಲ್ಲಿ ಅನಂತವಾದ ಪುಣ್ಯ.

## ೧೦

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಯಶಸ್ಸನ್ನೂ ಕೀರ್ತಿಯನ್ನೂ ಸಾರವೆಂದು ಭಾವಿಸಿ ಅವುಗಳನ್ನು ಬಯಸುವುದಿಲ್ಲ. ಆದರೆ ಜನರು ಈಗಲೂ ಮುಂದೆಯೂ ಧರ್ಮಶುಶ್ರೂಷೆಮಾಡುತ್ತಾ ಧರ್ಮವ್ರತರಾಗಿರುವ ಸಲುವಾಗಿ ಅವನು ಯಶಸ್ಸನ್ನೂ ಕೀರ್ತಿಯನ್ನೂ ಬಯಸುತ್ತಾನೆ. ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಮಾಡುವ ಅಲ್ಪ ಸ್ವಲ್ಪ ಪರಾಕ್ರಮವೆಲ್ಲವೂ ಪರಕ್ಕಾಗಿಯೇ ; ಸಕಲರಿಗೂ ಬಿಡುಗಡೆಯಾಗಲೆಂದೇ. ಅಪುಣ್ಯವೇ ಬಂಧನ. ಕಡುಪರಾಕ್ರಮವಿಲ್ಲದೆ, ಉಳಿದುದನ್ನೆಲ್ಲ ಪರಿತ್ಯಜಿಸದೆ ಇದು ಕೆಳವರ್ಗದವರಿಗೆ ಕಷ್ಟ; ಉಚ್ಚವರ್ಗದವರಿಗೂ ಕಷ್ಟ. ಈ ಇಬ್ಬರಲ್ಲಿ ಉಚ್ಚವರ್ಗದವರಿಗೆ ಹೆಚ್ಚು ಕಷ್ಟ.

## ೧೧

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು. ಧರ್ಮದಾನದಂತಹ ದಾನವಿಲ್ಲ.[3] ಧರ್ಮಸಂಸ್ತವ[4] ಧರ್ಮಸಂವಿಭಾಗ[5] ಧರ್ಮ

---

[1] ಸ್ವರ್ಗ—ಧರ್ಮವನ್ನನುಸರಿಸಿದರೆ, ಗೃಹಸ್ಥರಾದವರಿಗೆ ಸ್ವರ್ಗ ದೊರೆಯುವುದೆಂಬ ನಂಬಿಕೆ ಆಗಿನ ಬೌದ್ಧರಿಗೂ ಇದ್ದಂತೆ ತೋರುತ್ತದೆ.

[2] ಮುಂದಿನ ಭಾಗವು ಕಾಲ್‌ಸಿ ಷಾಬಾಸ್‌ಗಡಿ ಮಙ್‌ಸೆಹ್ರಾ ಎಂಬಲ್ಲಿ ಮಾತ್ರ ದೊರೆತಿದೆ.

[3] ಧಮ್ಮಪದ, ೩೫೪—ಧಮ್ಮದಾನಂ ಸಬ್ಬದಾನಂ ಜಿನಾತಿ

[4] ಧರ್ಮಸಂಸ್ತವ—ಧರ್ಮದ ಮೂಲಕ ಬಲಗೊಂಡ ಸ್ನೇಹ. ಪರಸ್ಪರ ಎಚ್ಚರಗೊಳಿಸುತ್ತಾ, ಧರ್ಮಬೋಧೆಯಿಂದ ಜೀವನವನ್ನು ಒಬ್ಬರಿಗೊಬ್ಬರು ತಿದ್ದುತ್ತಾ ಇದ್ದರೆ ಅಂತಹ ಸ್ನೇಹ ನಿಜವಾದ ಸ್ನೇಹವೆಂಬುದು ಅಶೋಕನ ಅಭಿಪ್ರಾಯ.

[5] ಧರ್ಮಸಂವಿಭಾಗ—ಪ್ರಾಣಿವರ್ಗದಮೇಲೂ ದಾಸಭೃತ್ಯರಮೇಲೂ ಧರ್ಮದೃಷ್ಟಿ

ಸಂಬಂಧ[1] ಇವುಗಳ ಹಾಗೆ ಬೇರೊಂದಿಲ್ಲ. ಅದು ಹೀಗೆ: ದಾಸಭೃತ್ಯರಲ್ಲಿ ಸಂಪ್ರತಿಪತ್ತಿ, ಮಾತಾಪಿತೃಗಳ ಶುಶ್ರೂಷೆ, ಇವು ಸಾಧುವಾದದ್ದು. ಮಿತ್ರರು ಇಷ್ಟರು ಜ್ಞಾತಿಗಳು ಬ್ರಾಹ್ಮಣಶ್ರಮಣರು ಇವರಿಗೆ ನೀಡುವ ದಾನ ಸಾಧುವಾದದ್ದು; ಪ್ರಾಣಿಗಳನ್ನು ಕೊಲ್ಲದಿರುವುದು ಸಾಧುವಾದದ್ದು; ತಂದೆ ಮಗ ಸಹೋದರ ಸ್ವಾಮಿ ಮಿತ್ರ ಇಷ್ಟ ಜ್ಞಾತಿ ಇವರು ಹೀಗೆ ತಿಳಿಸತಕ್ಕದ್ದು: ಇದು ಸಾಧುವಾದದ್ದು; ಇದನ್ನು ಮಾಡಬೇಕು; ಹೀಗೆ ಮಾಡಿದರೆ, ಈ ಧರ್ಮದಾನದಿಂದ, ಇಹಲೋಕವನ್ನೂ ಪಡೆಯಬಹುದು; ಪರದಲ್ಲೂ ಅನಂತವಾದ ಪುಣ್ಯವುಂಟಾಗುತ್ತದೆ, ಎಂದು.

೧೨

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಎಲ್ಲಾ ಮತದವರನ್ನೂ—ಸಂನ್ಯಾಸಿಗಳನ್ನೂ ಗೃಹಸ್ಥರನ್ನೂ—ದಾನದಿಂದಲೂ ವಿವಿಧ ಪೂಜೆಗಳಿಂದಲೂ ಪೂಜಿಸುತ್ತಿರುವನು.[2] ಆದರೆ ಈ ಬಗೆಯ ದಾನವನ್ನೂ ಪೂಜೆಯನ್ನೂ ದೇವಾನಾಂಪ್ರಿಯನು ಸರ್ವಮತದವರಲ್ಲೂ ಆಗಬೇಕಾದ ಸಾರವೃದ್ಧಿಗಿಂತ ಮೇಲೆಂದು ಪರಿಗಣಿಸುವುದಿಲ್ಲ. ಸಾರವೃದ್ಧಿ ಆಗುವುದು ಬಹುವಿಧಗಳಿಂದ. ಆದರೆ ಅವೆಲ್ಲಕ್ಕೂ ಮೂಲ ವಚನಗುಪ್ತಿ. ಅಂದರೆ, ತನ್ನ ಮತದ ಪೂಜೆಯನ್ನೂ ಇತರರ ಮತದ ದೂಷಣೆಯನ್ನೂ ಸರಿಯಾದ ಪ್ರಕರಣವಿಲ್ಲದೆ ಮಾಡಕೂಡದು. ಅಂತಹ ಪ್ರಕರಣ ಬಂದಾಗಕೂಡ ಅದು ಲಘುವಾಗಿಯೇ ಇರತಕ್ಕದ್ದು. ಸರ್ವಪ್ರಕಾರಗಳಲ್ಲೂ ಪರಮತದವರನ್ನು ಪೂಜಿಸಲೇಬೇಕು. ಹೀಗೆ ಮಾಡಿದರೆ ತನ್ನ ಮತವೂ ವರ್ಧಿಸುತ್ತದೆ; ಪರಮತಕ್ಕೂ ಉಪಕಾರವಾಗುತ್ತದೆ. ಅನ್ಯಥಾ ಮಾಡಿದರೆ, ತನ್ನ ಮತಕ್ಕೆ ಹಾನಿ, ಪರಮತಕ್ಕೆ ಅಪಕಾರ. ಏಕೆಂದರೆ, ಆತ್ಮಮತವನ್ನು

---

ಯಿಂದ ಕನಿಕರ ತೋರಿಸುತ್ತಾ, ತಾಯಿ ತಂದೆಯರನ್ನೂ ಗುರುಹಿರಿಯರನ್ನೂ ಶುಶ್ರೂಷಿಸುತ್ತಾ, ಇಷ್ಟಮಿತ್ರರನ್ನು ಎಚ್ಚರಿಸುತ್ತಾ, ಧರ್ಮವನ್ನು ಎಲ್ಲರಿಗೂ ಹಂಚುತ್ತಾ ಜೀವನ ನಡಸುವುದೇ ಧರ್ಮಸಂವಿಭಾಗ ಎಂದು ಈ ಶಾಸನದಿಂದಲೇ ಸ್ಪಷ್ಟವಾಗುತ್ತದೆ. ಧರ್ಮವನ್ನೂ ಅಧರ್ಮವನ್ನೂ ವಿಭಜನೆಮಾಡಿ ಅರಿತುಕೊಳ್ಳುವುದು, ಎಂಬ ಅರ್ಥವನ್ನೂ ಕೆಲವರು ಹೇಳುತ್ತಾರೆ.

[1] ಧರ್ಮಸಂಬಂಧ: ಪ್ರತಿಯೊಬ್ಬರೊಡನೆಯೂ ನಮ್ಮ ಸಂಬಂಧವು ಧರ್ಮದ ಮೇಲೆ ನೆಲೆನಿಂತರೆ ಕ್ಷೇಮವೆಂಬುದೇ ಅಶೋಕನ ಮತ.

[2] ಈ ಶಾಸನವನ್ನು ಷಾಬಾಸ್‌ಗಡಿಯಲ್ಲೂ ಮಣ್ಸೇಹ್ರಾದಲ್ಲೂ ಇತರ ಶಾಸನಗಳಿಂದ ಪ್ರತ್ಯೇಕಿಸಿ ಬೇರೊಂದು ಬಂಡೆಯಲ್ಲಿ ಬರೆದಿದೆ. ಅಲ್ಲಿಯ ಜನರ ಅವಗಾಹನೆಗೆ ವಿಶೇಷವಾಗಿ ಬರುವ ಸಲುವಾಗಿ ಹೀಗೆ ಮಾಡಿರಬೇಕೆಂದು ತೋರುತ್ತದೆ.

ಹೇಗೆ ಬೆಳಗಿಸಲಿ ಎಂಬ ಆತುರದಿಂದ ಯಾರು ಅದನ್ನೇ ಪೂಜಿಸಿ ಪರಮತವನ್ನು ಹಳಿಯುತ್ತಾನೋ ಅವನು ತನ್ನ ವರ್ತನೆಯಿಂದ ತನ್ನ ಮತಕ್ಕೇ ಹೆಚ್ಚು ಹಾನಿಯನ್ನು ಉಂಟುಮಾಡುತ್ತಾನೆ. ಅಂದರೆ, ಸಮವಾಯವೇ ಸಾಧುವಾದದ್ದು. ಹೀಗೆ ಒಟ್ಟುಗೂಡುವುದು ಏತಕ್ಕಾಗಿ ಅಂದರೆ, ಇತರರ ಮತವನ್ನು ಕೇಳುವುದಕ್ಕಾಗಿ, ಶುಶ್ರೂಷಿಸುವುದಕ್ಕಾಗಿ. ಇದೇ ದೇವಾನಾಂಪ್ರಿಯನ ಇಚ್ಛೆ: ಎಲ್ಲ ಮತದವರೂ ಬಹುಶ್ರುತ[1]ರಾಗಲಿ ಎಂದು: ಕಲ್ಯಾಣಾಗಮಗಳನ್ನು ಹೊಂದಲಿ, ಎಂದು. ಆಯಾ ಮತಗಳಲ್ಲಿ ಶ್ರದ್ಧೆ ಇರುವವರಿಗೆ ಈಗ ಹೀಗೆ ಹೇಳತಕ್ಕದ್ದು: ಸರ್ವಮತದವರಲ್ಲೂ ಸಾರವೃದ್ಧಿಯಾಗಬೇಕು. ದೇವಾನಾಂಪ್ರಿಯನು ದಾನವನ್ನೂ ಪೂಜೆಯನ್ನೂ ಇದಕ್ಕಿಂತ ಮೇಲಾಗಿ ಎಣಿಸುವುದಿಲ್ಲ, ಎಂದು.

ಇದಕ್ಕಾಗಿಯೇ ಅನೇಕರು ವ್ಯಾಪಿಸಿರುವರು: ಧರ್ಮ ಮಹಾಮಾತ್ರರು, ಸ್ತ್ರೀ ಅಧ್ಯಕ್ಷ ಮಹಾಮಾತ್ರರು,[2] ವ್ರಜ ಭೂಮಿಕರು,[3] ಇತರರು.

ಇದರ ಫಲ: ಆತ್ಮ ಮತದ ವೃದ್ಧಿ; ಧರ್ಮದ ಬೆಳಗು.

---

[1] ಬೌದ್ಧ ಭಿಕ್ಷುಗಳಿಗೆ 'ಬಹುಶ್ರುತ' ಎಂಬ ಬಿರುದಿತ್ತೆಂದು ಇತ್‌ಸಿಂಗ್‌ನು ಹೇಳುತ್ತಾನೆ. ಅಲ್ಲದೆ ವಿನಯಪಿಟಕದಲ್ಲೂ (IV ೧೦) ಈ ವಿಶೇಷಣವನ್ನು ಉಪಯೋಗಿಸಿದೆ.

[2] ಸ್ತ್ರೀ ಅಧ್ಯಕ್ಷ ಮಹಾಮಾತ್ರರು—ಪಾಟಲೀಪುತ್ರದಲ್ಲೂ ಇತರ ನಗರಗಳಲ್ಲೂ ಇದ್ದ ಅವರೋಧನಗಳ ಅಧಿಕಾರಿಗಳಿಗೆ ಈ ಹೆಸರಿತ್ತೆಂದು ತೋರುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗಣಿಕಾಧ್ಯಕ್ಷ ಎಂಬ ಒಬ್ಬ ಅಧಿಕಾರಿಯನ್ನು ಕುರಿತು ವಿವರಗಳನ್ನು ಕೊಟ್ಟಿದೆ. (II ೨೭) ಅಲ್ಲದೆ, ರಾಜಧಾನಿಯ ಮತ್ತು ಹೊರಗಿನ ವಿಹಾರಸ್ಥಾನಗಳಲ್ಲಿ ಕಾಮದೂರರಾದ ಅಧಿಕಾರಿಗಳನ್ನು ನಿಯಮಿಸಿ ಜನರ ಶುದ್ಧಾಶುದ್ಧತೆಗಳನ್ನು ಪರೀಕ್ಷಿಸಬೇಕೆಂದು ಕೌಟಿಲ್ಯನೂ ಹೇಳಿದಾನೆ. ಸ್ತ್ರೀಯರಲ್ಲಿ ಪರಮತಪೂಜೆಯ ಭಾವನೆಗಳು ಅಂಕುರಿಸಬೇಕೆಂದು ಅಶೋಕನು ಮನಗಂಡಿದ್ದನೆಂದು ಒಂಬತ್ತನೆಯ ಶಿಲಾಶಾಸನದಿಂದ ತಿಳಿದುಬರುತ್ತದೆ.

[3] ವ್ರಜಭೂಮಿಕರು:—ಇಲ್ಲಿ ಗೋಮಾಳಗಳ ಮೇಲ್ವಿಚಾರಣೆ ಮಾಡುವ ವ್ರಜಭೂಮಿಕರೆಂಬ ಅಧಿಕಾರಿಗಳಿಗೂ ಪರಮತಪೂಜೆಯ ಪ್ರಸಾರಕ್ಕೂ ಸಂಬಂಧವೇನು ಎಂಬ ಪ್ರಶ್ನೆ ಏಳುತ್ತದೆ. ಆದರೆ, ವಿವೀತಾಧ್ಯಕ್ಷ ಎಂಬ ಅಧಿಕಾರಿಗೆ ಕೌಟಿಲ್ಯನು ಗೋಮಾಳಗಳನ್ನು ಸ್ಥಾಪಿಸುವುದು, ಕಳ್ಳರೂ ದುಷ್ಟಮೃಗಗಳೂ ನುಗ್ಗದಂತೆ ಕಾಡುಗಳನ್ನು ಶೋಧನೆ ಮಾಡುವುದು, ಕೆರೆಬಾವಿಗಳನ್ನು ತೋಡುವುದು, ಫಲಪುಷ್ಪಗಳ ಉದ್ಯಾನಗಳನ್ನು ಸಿದ್ಧ ಮಾಡುವುದು, ರಸ್ತೆಗಳನ್ನು ಉಪಯೋಗಕ್ಕೆ ಬರುವಂತೆ ಉಳಿಸಿ ರಕ್ಷಿಸುವುದು, ವ್ಯಾಪಾರವನ್ನು ಬೆಳೆಸುವುದು, ಎಲ್ಲಾ ವಿಧವಾದ ವ್ಯವಹಾರಗಳನ್ನೂ ಕಾಪಾಡುವುದು, ಎಂಬ ಕಾರ್ಯಕ್ಷೇತ್ರವನ್ನು ಸೂಚಿಸಿರುವುದರಿಂದ, ವ್ರಜಭೂಮಿಕರು ಎಂದು ಅಶೋಕನು ಹೇಳುವ ಅಧಿಕಾರಿಗಳು ಅರಣ್ಯ ಜನಗಳನ್ನೂ ಯಾತ್ರಿಕರನ್ನೂ ಪರದೇಶದ ವ್ಯಾಪಾರಗಾರರನ್ನೂ ಧರ್ಮದಕಡೆ ತಿರುಗಿಸಬಲ್ಲವರಾಗಿದ್ದರೆಂದು ತೋರುತ್ತದೆ.

೧೩

ಅಭಿಷಿಕ್ತನಾಗಿ ಎಂಟುವರ್ಷಗಳಾದಾಗ ದೇವಾನಾಂ ಪ್ರಿಯಪ್ರಿಯದರ್ಶಿ ರಾಜನು ಕಲಿಂಗವನ್ನು ಜಯಿಸಿದನು. ಒಂದೂವರೆ ಶತಸಹಸ್ರ ಜನರನ್ನು ಅಲ್ಲಿಂದ ಸೆರೆಹಿಡಿದು ಸಾಗಿಸಲಾಯಿತು. ಶತಸಹಸ್ರ ಜನರು ಅಲ್ಲಿ ಹತರಾದರು. ಅದಕ್ಕಿಂತ ಬಹು ಮಂದಿ ಮೃತರಾದರು. ಈಗ ಕಲಿಂಗರು ಕೈವಶರಾದ ಅನಂತರ ದೇವಾನಾಂಪ್ರಿಯನ ಧರ್ಮಪಾಲನೆ ಧರ್ಮಕಾಮತೆ ಹಾಗೂ ಧರ್ಮಾನುಶಾಸ್ತಿ ತೀವ್ರವಾದುವು. ಕಲಿಂಗವನ್ನು ಜಯಿಸಿದ್ದಕ್ಕಾಗಿ ದೇವಾನಾಂಪ್ರಿಯನು ಅನುಶೋಚಿಸುತ್ತಾನೆ.

ಏಕೆಂದರೆ, ಅದುವರೆಗೂ ಜಯಿಸದೆ ಇದ್ದ ಒಂದು ದೇಶವನ್ನು ಜಯಿಸು ವಾಗ ಅಲ್ಲಿ ವಧೆಯೂ ಮರಣವೂ ಸೆರೆಯೂ ನಡೆಯುವುದರಿಂದ ದೇವಾನಾಂಪ್ರಿಯನಿಗೆ ತುಂಬಾ ವೇದನೆ ಉಂಟಾಗಿದೆ. ಅಲ್ಲದೆ, ಹಿರಿಯರ ಶುಶ್ರೂಷೆ ಮಾತಾಪಿತೃಗಳ ಶುಶ್ರೂಷೆ ಗುರುಶುಶ್ರೂಷೆ ಮಿತ್ರರು ಇಷ್ಟರು ಜ್ಞಾತಿಗಳು ದಾಸರು ಭೃತ್ಯರು ಇವರಲ್ಲಿ ಸಂಪ್ರತಿಪತ್ತಿ ದೃಢಭಕ್ತಿ ಮುಂತಾ ದವುಗಳಿಂದ ಕೂಡಿ, ಅಲ್ಲಿ ವಾಸವಾಗಿದ್ದ ಬ್ರಾಹ್ಮಣರಿಗಾಗಲಿ ಶ್ರಮಣರಿ ಗಾಗಲಿ ಇತರ ಮತದವರಿಗಾಗಲಿ, ಗೃಹಸ್ಥರಿಗಾಗಲಿ ಗಾಯ ನೋವು ಸಾವು ನಂಟರಿಷ್ಟರ ಅಗಲಿಕೆ ಇವು ಸಂಭವಿಸುವುದರಿಂದ ದೇವಾನಾಂಪ್ರಿಯ ನಿಗೆ ಇನ್ನೂ ಹೆಚ್ಚಿನ ವೇದನೆ ಉಂಟಾಗಿದೆ. ಅಥವಾ ತಾವು ನೆಮ್ಮದಿ ಯಿಂದಿದ್ದರೂ, ತಾವು ತುಂಬಾ ಸ್ನೇಹದಿಂದ ಪ್ರೀತಿಸುವ ಇಷ್ಟಮಿತ್ರರು ಪರಿಚಿತರು ನಂಟರು ಇವರಿಗೆ ಅಪಘಾತಗಳಾದರೆ ಅಂತಹವರು ಆ ಅಪ ಘಾತ ತಮಗಾದಂತೆಯೇ ಪರಿತಪಿಸುವರು. ಹೀಗೆ, ಆದ ಕಷ್ಟಗಳಲ್ಲಿ ಸರ್ವ ಮನುಷ್ಯರೂ ಭಾಗಿಗಳಾದರೂ, ದೇವನಾಂಪ್ರಿಯನ ಪಾಲು ಹೆಚ್ಚಿನದು.

ಯವನರ ಜನಪದವನ್ನು ಬಿಟ್ಟರೆ, ಬ್ರಾಹ್ಮಣ ಶ್ರಮಣರಿಲ್ಲದ ಜನಪದವೇ ಇಲ್ಲ[1]. ಯಾವುದಾದರೊಂದು ಮತದಲ್ಲಿ ಶ್ರದ್ಧೆ ಇಲ್ಲದ ಮನುಷ್ಯರು ಎಲ್ಲಿಯೂ ಇಲ್ಲ. ಆದ್ದರಿಂದ, ಕಲಿಂಗ ದೇಶದಲ್ಲಿ ಹತರಾದ ಮೃತರಾದ ಗಾಯಗೊಂಡ ಜನರ ನೂರರಲ್ಲೊಂದು ಭಾಗವಾಗಲಿ ಸಾವಿರದಲ್ಲೊಂದು ಭಾಗವಾಗಲಿ ಈಗ ಅದೇ ಕಷ್ಟಕ್ಕೊಳಗಾದರೆ ದೇವಾನಾಂಪ್ರಿಯನಿಗೆ ವೇದನೆ ಉಂಟಾಗುತ್ತದೆ.

---

[1] ಮಜ್ಝಿಮನಿಕಾಯ (ii. ೧೪೯) ದಲ್ಲಿ ಬುದ್ಧದೇವನು ಆಶ್ವಲಾಯನನಿಗೆ ಹೇಳುವ ಮಾತುಗಳಿವು : "ಯವನಕಾಂಭೋಜರಲ್ಲಿಯೂ ಇತರ ಪ್ರಾತ್ಯಂತ ಜನಪದಗಳಲ್ಲೂ ಎರಡೇ ಎರಡು ವರ್ಣಗಳು ಮಾತ್ರ ಇವೆ. ಆರ್ಯ ಮತ್ತು ದಾಸ; ಅಲ್ಲಿ ಆರ್ಯನಾದವನು ದಾಸನಾಗಿಬಿಡುತ್ತಾನೆ; ದಾಸನಾದವನು ಆರ್ಯನಾಗಬಲ್ಲ"

ಯಾರಾದರೂ ಅಪಕಾರವಮಾಡಿದರೂ ಕೂಡ ಕ್ಷಮ್ಯವಾದದ್ದನ್ನೆಲ್ಲ ಕ್ಷಮಿಸ ತಕ್ಕದ್ದೆಂದು ದೇವಾನಾಂಪ್ರಿಯನು ಭಾವಿಸುವನು.

ಈಗ ತಾನು ಜಯಿಸಿರುವ ಅಟವೀಜನರು ಕೂಡ ತನ್ನಂತೆ ನಡೆಯಲು ತನ್ನಂತೆಯೇ ವಿಚಾರವಮಾಡಲು ಅವನು ಪ್ರೇರಿಸುವನು.

ಹೀಗೆ ದೇವಾನಾಂಪ್ರಿಯನು ಅನುತಾಪಪಡುತ್ತಿದ್ದರೂ ಅವನು ಪ್ರಭಾವ ಶಾಲಿಯಾದ್ದರಿಂದ ಅವರು ತಮ್ಮ ತಪ್ಪುಗಳಿಗೆ ನಾಚಿ ನಡೆಯಲಿ; ತಪ್ಪು ಮಾಡಿ ಅವರು ಹತರಾಗದಿರಲಿ. ದೇವಾನಾಂಪ್ರಿಯನು ಸರ್ವಭೂತಗಳಿಗೂ ಅಕ್ಷತಿಯನ್ನೂ ಸಂಯಮವನ್ನೂ ಸಮಚರ್ಯೆಯನ್ನೂ ಮಾರ್ದವವನ್ನೂ ಇಚ್ಛಿಸುತ್ತಾನೆ.

ದೇವಾನಾಂಪ್ರಿಯನು ಧರ್ಮವಿಜಯವನ್ನೇ[1] ಮುಖ್ಯವಾದ ವಿಜಯ ವೆಂದು ಭಾವಿಸುತ್ತಾನೆ. ಇಲ್ಲಿಯೂ ಎಲ್ಲಾ ಅಂತಗಳಲ್ಲಿಯೂ ಆರು ನೂರು ಯೋಜನಗಳವರೆಗೂ, ಅಂತಿಯೋಕ್[2] ಎಂಬ ಯವನರಾಜ, ಆ ಅಂತಿಯೋಕನ ಆಚೆ ನಾಲ್ಕು ರಾಜರು—ತುರಮಾಯ[3] ಅಂತಿಕಿನಿ[4] ಮಕ[5]

---

[1] ಧರ್ಮವಿಜಯ—ಧರ್ಮವಿಜಯ ಎಂಬ ಮಾತನ್ನು ಕೌಟಿಲ್ಯನೂ ಉಪಯೋಗಿಸು ತ್ತಾನೆ. ಆದರೆ, ಅಶೋಕನು ಅದಕ್ಕೆ ಇಲ್ಲಿ ವಿಶೇಷರೀತಿಯ ಮೆರುಗನ್ನು ಕೊಟ್ಟಿರುವನು. "ತ್ರಯೋಭಿಯೋಕ್ತಾರೋ ಧರ್ಮಾಸುರ ಲೋಭವಿಜಯಿನ ಇತಿ" (XII) ದೇಶವನ್ನು ಆಕ್ರಮಿಸುವವರು ಮೂರು ರೀತಿಯವರು: ಧರ್ಮವಿಜಯಿ, ಅಸುರವಿಜಯಿ, ಲೋಭವಿಜಯಿ, ಎಂದು ಅವನು ಹೇಳುತ್ತಾನೆ. ತೇಷಾಮಭ್ಯವಪತ್ತ್ಯಾ ಧರ್ಮವಿಜಯೀತುಷ್ಯತಿ : ಅವರು ಕಾಣಿಕೆ ಒಪ್ಪಿಸುವುದರಿಂದಲೇ ಧರ್ಮವಿಜಯಿ ತೃಪ್ತನಾಗುತ್ತಾನೆ ಎಂದು ಅರ್ಥಶಾಸ್ತ್ರದಲ್ಲಿ ಹೇಳಿದೆ. ಅಶೋಕನು ಲೋಭವಿಜಯಿಯಂತೆ ದೇಶಕೋಶಗಳಿಗಾಗಿ ಆಸೆಪಟ್ಟು ಅಸುರ ವಿಜಯಿಯಂತೆ ಜನರನ್ನೂ ಜನರ ನಾಯಕರನ್ನೂ ಕೊಂದು ಸೆರೆಹಿಡಿದನಾದರೂ, ತಕ್ಷಣವೇ ಮನನೊಂದು ಧರ್ಮವಿಜಯಿ ಆಗುತ್ತಾನೆ. ಅಲ್ಲದೆ ಧರ್ಮವನ್ನೇ ತನ್ನ ಜಯಪತಾಕೆ ಯಾಗಿ ಅಂಗೀಕರಿಸುತ್ತಾನೆ. C.H.I. I, ೫೦೩.

[2] ಅಂತಿಯೋಕ—ಸಿರಿಯಾ ದೇಶದ ರಾಜನಾದ ಎರಡನೆಯ ಅಂತಿಯೋಕ (೨೬೧ ರಿಂದ ೨೪೬ ವರೆಗೆ ಆಳಿದನು.) ಶಿಲಾಶಾಸನ ೨ ರಲ್ಲೂ ಇವನ ಪ್ರಸ್ತಾಪವಿದೆ.

[3] ತುರುಮಾಯ—ಈಜಿಪ್ಟ್ ದೇಶದ ರಾಜನಾಗಿದ್ದ ಟಾಲಮಿ ಫಿಲಾಡೆಲ್ಫಾಸ್ (೨೮೫ ರಿಂದ ೨೪೭ ರ ವರೆಗೆ ಆಳಿದನು) ಇವನ ಕಾಲದಲ್ಲಿ ಈಜಿಪ್ಟ್ ದೇಶವು ತುಂಬಾ ವಿಸ್ತಾರವಾಗಿತ್ತು. ಸಂಪತ್ತು ಸುಖಗಳ ನೆಲೆವೀಡಾಗಿತ್ತು.

[4] ಅಂತಿಕಿನಿ—ಮೆಸಿಡೋನಿಯಾ ದೇಶದ ರಾಜನಾದ ಆಂಟಿಗೊನಸ್ ಗೋನಾಟಸ್ (೨೭೮ ರಿಂದ ೨೩೯ ರ ವರೆಗೆ ಆಳಿದನು.)

[5] ಮಕ—ಉತ್ತರ ಆಫ್ರಿಕಾದಲ್ಲಿ ಈಜಿಪ್ಟಿನ ಪಶ್ಚಿಮದಲ್ಲಿರುವ ಸೈರಿನಿ ದೇಶವನ್ನಾಳಿದ ಮಗಸ್ ಎಂಬ ರಾಜನು (೩೦೦ ರಿಂದ ೨೫೮ ರ ವರೆಗೆ ಆಳಿದನು)

ಅಲಿಕಸುದರ[1] ಕೆಳಗೆ ಚೋಳ ಪಾಂಡ್ಯ ತಾಮ್ರಪರ್ಣಿತನಕ ದೇವಾನಾಂ ಪ್ರಿಯನಿಗೆ ಈ ಧರ್ಮವಿಜಯ ಮತ್ತೆ ಮತ್ತೆ ದೊರೆತಿದೆ.

ಹಾಗೆಯೇ ಇಲ್ಲಿ 'ರಾಜವಿಷಯ[2]'ದಲ್ಲೂ ಯವನ ಕಾಂಭೋಜರಲ್ಲೂ ನಭಕ ನಾಭಪಂಕ್ತಿಯರಲ್ಲೂ[3] ಭೋಜಪಿಟನಿಕರಲ್ಲೂ[4] ಆಂಧ್ರಪುಳಿಂದರಲ್ಲೂ ದೇವಾನಾಂಪ್ರಿಯನ ಧರ್ಮಾನುಶಾಸ್ತಿಯನ್ನು ಅನುಸರಿಸುವರು. ದೇವಾನಾಂ ಪ್ರಿಯನ ದೂತರು[5] ಹೋಗದಕಡೆಗಳಲ್ಲಿ ಕೂಡ ಜನರು ದೇವಾನಾಂ ಪ್ರಿಯನ ಧರ್ಮವೃತ್ತವನ್ನೂ ವಿಧಾನವನ್ನೂ ಧರ್ಮಾನುಶಾಸ್ತಿಯನ್ನೂ ಕೇಳಿ ಅದನ್ನನುಸರಿಸುತ್ತಿರುವರು; ಮುಂದೆಯೂ ಅನುಸರಿಸುವರು.

ಇದರಿಂದ ಎಲ್ಲಕಡೆಗಳಲ್ಲೂ ವಿಜಯ ದೊರೆತಿದೆ. ಈ ವಿಜಯದಿಂದ ಎಲ್ಲ ಕಡೆಗಳಲ್ಲೂ ಪ್ರೀತಿ ಉಂಟಾಗಿದೆ. ಧರ್ಮವಿಜಯದಿಂದ ಪ್ರೀತಿ ಲಭಿಸುತ್ತದೆ. ಹಾಗೆ ಲಭಿಸಿದ ಪ್ರೀತಿ ಸ್ವಲ್ಪವಾದರೂ ಕೂಡ, ಪರದಲ್ಲಿ ಅದರಿಂದ ಮಹತ್ತಾದ ಫಲವುಂಟೆಂದು ದೇವಾನಾಂಪ್ರಿಯನು ತಿಳಿದಿರುವನು.

---

[1] ಅಲಿಕಸುದರ—ಉತ್ತರ ಗ್ರೀಸ್‌ನಲ್ಲಿ ಮೆಸಿಡೋನಿಯಾದ ಪಶ್ಚಿಮದಲ್ಲಿರುವ ಎಪಿರಸ್ ದೇಶವನ್ನಾಳಿದ ಅಲೆಕ್ಸಾಂಡರ್ ಎಂಬ ರಾಜನು (೨೭೨ ರಿಂದ ೨೫೮ ರ ವರೆಗೆ ಆಳಿದನು) ಈ ರಾಜರ ಆಸ್ಥಾನಗಳಿಗೆಲ್ಲ ಅಶೋಕನು ಆಗಾಗ ದೂತರನ್ನು ಕಳುಹಿಸಿ ಧರ್ಮಬೋಧೆ ಮಾಡಿರಬೇಕು. ಏಕೆಂದರೆ, ಈ ಶಾಸನದಲ್ಲಿ ಅಲ್ಲೆಲ್ಲ "ಧರ್ಮವಿಜಯ ಮತ್ತೆ ಮತ್ತೆ ದೊರೆತಿದೆ" ಎಂದು ಅಶೋಕನು ಹೇಳಿರುವನು.

[2] ರಾಜವಿಷಯ—ರಾಜವಿಷಯ ಎಂದು ಇಲ್ಲಿ ಹೇಳಿರುವುದು ರಾಜನ ಅನುಶಾಸ್ತಿಗೆ ಒಳಪಟ್ಟ 'ವಿಜಿತ'ವನ್ನು ಎಂಬುದು ಸ್ಪಷ್ಟ. ಅಂತಗಳಲ್ಲಿ, ಅಂದರೆ, ನೆರೆಹೊರೆಯ ರಾಜ್ಯಗಳಲ್ಲಿ ಧರ್ಮವಿಜಯವೂ ಸಾಮ್ರಾಜ್ಯದಲ್ಲಿ ಧರ್ಮಾನುಶಾಸ್ತಿಯ ಪ್ರಭಾವವೂ ಇತ್ತೆಂದು ಶಾಸನಗಳು ಹೇಳುತ್ತವೆ.

[3] ನಭಕನಾಭಪಂಕ್ತಿಯರು—ಪಾಣಿನಿ ಸೂತ್ರಗಳಲ್ಲಿ ನಾಭಾಕ ಎಂಬ ಹೆಸರಿನ ಒಂದು ಜನಾಂಗ (iv I, ೧೧೨) ದ ಪ್ರಸ್ತಾಪವಿದೆ. ವೈವರ್ತ ಪುರಾಣದಲ್ಲಿ ನಾಭಿಕ ಪುರ ಎಂಬ ಒಂದು ನಗರವು ಹಿಮಾಲಯಾಪ್ರಾಂತದಲ್ಲಿತ್ತೆಂದು ಹೇಳಿದೆ. ಆದ್ದರಿಂದ ನಭಕನಾಭಪಂಕ್ತಿಯರು ಎಂಬ ಜನಾಂಗಗಳು ಬಹುಶಃ ವಾಯುವ್ಯ ಹಿಮಾಲಯಪ್ರಾಂತ ದಲ್ಲಿದ್ದಿರಬೇಕೆಂದು ಬ್ಯೂಲರ್‌ರವರು ಅಭಿಪ್ರಾಯಪಡುತ್ತಾರೆ.

[4] ಭೋಜಪಿಟನಿಕರು—ರಾಷ್ಟ್ರಿಕಪಿಟನಿಕರ ಹಾಗೆ ಭೋಜಪಿಟನಿಕರು ಕೂಡ ಅಪರಾಂತದ ಒಂದು ಜನಾಂಗವಾಗಿರಬೇಕೆಂದು ಹುಲ್‌ಷ್‌ರವರು ಹೇಳುತ್ತಾರೆ.

[5] ದೂತರು—ಯವನರಾಜರು ಮಗಧ ರಾಜಧಾನಿಗೆ ದೂತರನ್ನು ಕಳುಹಿಸಿದಂತೆ ಮಗಧ ರಾಜರೂ ಕೂಡ ಯವನದೇಶಗಳಿಗೆ ದೂತರನ್ನು ಕಳುಹಿಸುತ್ತಿದ್ದರೆಂದು ಇದರಿಂದ ವ್ಯಕ್ತವಾಗುತ್ತದೆ.

ಇದಕ್ಕಾಗಿಯೇ ಈ ಧರ್ಮಲಿಪಿಯನ್ನು ಬರೆಸಿರುವುದು : ನನ್ನ ಪುತ್ರರೂ ಪ್ರಪೌತ್ರರೂ ಹೊಸ ವಿಜಯವನ್ನು ಗಳಿಸಬೇಕೆಂದು ಯೋಚಿಸದಿರಲಿ. ಒಂದುವೇಳೆ ಅವರಿಗೆ ಹೊಸ ವಿಜಯವು ರುಚಿಕರವಾಗಿ ಕಂಡುಬಂದರೂ ಅವರಿಗೆ ಕ್ಷಮೆಯೂ ಲಘುವಾದ ದಂಡನೆಗಳನ್ನು ಕೊಡುವ ಯೋಚನೆಯೂ ರುಚಿಸಲಿ. ಧರ್ಮವಿಜಯವೇ ವಿಜಯವೆಂದು ಅವರು ತಿಳಿಯಲಿ. ಇಹ ಲೋಕಕ್ಕೂ ಪರಲೋಕಕ್ಕೂ ಅದೇ. ಉಳಿದವುಗಳಲ್ಲಿ ಆಸೆಯನ್ನು ತೊರೆದು ಅವರು ಧರ್ಮರತಿಯನ್ನೇ ಬೆಳಸಲಿ. ಇಹಲೋಕಕ್ಕೂ ಪರಲೋಕಕ್ಕೂ ಅದೇ !

## ೧೪

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಈ ಧರ್ಮಲಿಪಿಗಳನ್ನು ಸಂಕ್ಷೇಪವಾಗಿಯೂ ಮಧ್ಯಮವಾಗಿಯೂ ವಿಸ್ತಾರವಾಗಿಯೂ ಬರೆಸಿರುವನು. ಆದರೆ ಎಲ್ಲ ಲಿಪಿಗಳೂ ಎಲ್ಲ ಕಡೆಗಳಿಗೂ ಹೊಂದುವುದಿಲ್ಲ[1] ; ಅಲ್ಲದೆ ನಾನು ಜಯಿಸಿರುವ ರಾಜ್ಯ ವಿಶಾಲವಾಗಿದೆ. ಈಗಾಗಲೇ ಬಹುವಾಗಿ ಬರೆಸಿರುವೆನು. ಮುಂದೆಯೂ ಬಹುವಾಗಿ ಬರೆಸುತ್ತೇನೆ. ಅದರಂತೆ ಜನರು ನಡೆಯುವ ಸಲುವಾಗಿಯೂ ಅರ್ಥಮಾಧುರ್ಯದ ದೃಷ್ಟಿಯಿಂದಲೂ ಕೆಲವು ಮಾತುಗಳನ್ನು ಮತ್ತೆ ಮತ್ತೆ ಹೇಳಿದೆ.[2] ಆಯಾ ದೇಶದ ನಿಮಿತ್ತವೂ[3] ಇತರ ಕಾರಣಗಳ ನಿಮಿತ್ತವೂ ಲಿಪಿಕಾರನ ಅಪರಾಧ[4]ದಿಂದಲೂ ಕೆಲವು ಲಿಪಿಗಳನ್ನು ಅಸಂಪೂರ್ಣವಾಗಿ[5] ಅಂಶಮಾತ್ರವಾಗಿ ಬರೆದಿರಬಹುದು.

---

[1] ೧೩ ಹಾಗೂ ೧೩ ನೆಯ ಶಾಸನಗಳನ್ನು ಕಲಿಂಗ ದೇಶದಲ್ಲಿ ಪ್ರಚಾರಮಾಡದೆ. ಹೊಸದಾಗಿ ಅಶೋಕನೇ ಜಯಿಸಿದ ಆ ದೇಶದ ಜನಗಳ ಮನೋಭಾವಕ್ಕೆ ಹೊಂದುವ ಎರಡು ಲಿಪಿಗಳನ್ನು ಅಲ್ಲಿ ಬರೆಸಿರುವನು.

[2] **ಮತ್ತೆ ಮತ್ತೆ ಹೇಳಿದೆ**—"ದಾಸಭೃತ್ಯರಲ್ಲಿ ಸಂಪ್ರತಿಪತ್ತಿ ; ಮಾತಾಪಿತೃಗಳ ಶುಶ್ರೂಷೆ. ಮಿತ್ರರು ಇಷ್ಟರು ಜ್ಞಾತಿಗಳು ನಂಟರು ಬ್ರಾಹ್ಮಣ ಶ್ರಮಣರು ಇವರಿಗೆ ದಾನ" ಇತ್ಯಾದಿ.

[3] ಆಯಾ ದೇಶದ ನಿಮಿತ್ತ ಬರೆದ ಬಿಡಿಶಾಸನಗಳು ಕೆಲವೆಡೆ ಎರಡಿವೆ, ಕೆಲವೆಡೆ ಒಂದಿದೆ.

[4] **ಲಿಪಿಕಾರನ ಅಪರಾಧ**—ಉದಾ : ಷಾಬಾಸ್‌ಗಡಿ ಶಿಲಾಶಾಸನದಲ್ಲಿ ೬ ನೆಯ ಶಾಸನ ಮತ್ತು ೧೩ ನೆಯ ಶಾಸನ ಇವುಗಳಲ್ಲಿ ಹಲವಾರು ಪಂಕ್ತಿಗಳ ಪುನರುಕ್ತಿ ಇದೆ.

[5] **ಅಸಂಪೂರ್ಣ**—೭ ನೆಯ ಸ್ತಂಭಶಾಸನ ಒಂದೇ ಒಂದು ಸ್ತಂಭದಲ್ಲಿ ಮಾತ್ರ ಸಿಕ್ಕಿದೆ. ಉಳಿದ ಸ್ತಂಭಗಳಲ್ಲಿ ಮೊದಲನೆಯ ೬ ಶಾಸನಗಳನ್ನು ಮಾತ್ರ ಬರೆದಿದೆ.

# ೧೦. ಕಲಿಂಗ ಶಾಸನಗಳು[1]

## ೧

ನಗರವ್ಯಾವಹಾರಿಕರಾದ[2] ತೋಸಲಿಯ[3] ಮಹಾಮಾತ್ರರಿಗೆ ದೇವಾನಾಂ ಪ್ರಿಯನ ವಚನದಂತೆ ಹೀಗೆ ಹೇಳತಕ್ಕದ್ದು : ನಾನು ಯಾವುದನ್ನು ಸರಿ ಎಂದು ಕಾಣುತ್ತೇನೋ ಅದನ್ನು ಕಾರ್ಯತಃ ನಡಸಲು ಇಚ್ಛಿಸುತ್ತೇನೆ. ಅದನ್ನು ಆಗಮಾಡಿಸಲು ಪ್ರಯತ್ನಿಸುತ್ತೇನೆ. ಇದಕ್ಕೆ ಮುಖ್ಯವಾದದ್ದೇನೆಂದರೆ—ಈಗ ನಾನು ನಿಮಗೆ ಮಾಡುವ ಅನುಶಾಸ್ತಿ. ನಿಮ್ಮನ್ನು ನಾನು ಬಹು ಸಹಸ್ರ ಮನುಷ್ಯರಮೇಲೆ ಅವರ ಪ್ರೀತಿಯನ್ನು ಗಳಿಸುವ ಸಲುವಾಗಿ ನಿಯಮಿಸಿರುವೆನು.

ಎಲ್ಲ ಮನುಷ್ಯರೂ ನನ್ನ ಮಕ್ಕಳು[4]. ನನ್ನ ಮಕ್ಕಳು ಇಹಲೋಕದಲ್ಲೂ ಪರಲೋಕದಲ್ಲೂ ಎಲ್ಲಾ ಹಿತಸುಖಗಳನ್ನೂ ಹೊಂದಬೇಕೆಂದು ನಾನು ಇಚ್ಛಿಸುತ್ತಿರುವಂತೆಯೇ ಎಲ್ಲ ಮನುಷ್ಯರ ವಿಷಯದಲ್ಲೂ ನಾನು ಇಚ್ಛಿಸುತ್ತೇನೆ. ಈ ನನ್ನ ಬಯಕೆ ಎಲ್ಲಿಯತನಕ ಹೋಗುತ್ತದೆ ಎಂಬುದನ್ನು ನೀವು ತಿಳಿದಿಲ್ಲ; ಒಬ್ಬೊಬ್ಬರು ತಿಳಿದಿರಬಹುದು : ಅವರು ತಿಳಿದಿರುವುದು ಕೂಡ ಸ್ವಲ್ಪ ಮಾತ್ರ. ಎಲ್ಲವನ್ನೂ ತಿಳಿದಿಲ್ಲ.

ನೀವು ಸುವಿಹಿತರಾದರೂ ಇದಕ್ಕೆ ಗಮನ ಕೊಡಿ. ನೀತಿಯನ್ನು ನಡಸುವಾಗ ಒಬ್ಬರಿಗೆ ಬಂಧನ ಪ್ರಾಪ್ತವಾಗಬಹುದು ; ಅಥವಾ ಪರಿಕ್ಲೇಶ[5]

---

[1] ೧೧, ೧೨, ೧೩ : ಈ ಶಾಸನಗಳನ್ನು ಜೌಗಡದಲ್ಲೂ ಧೌಳಿಯಲ್ಲೂ ಪ್ರಕಟಿಸದೆ ಅವುಗಳಿಗೆ ಬದಲಾಗಿ ಅಶೋಕನು ಕಲಿಂಗರಿಗೆ ರುಚಿಸಬಹುದಾದ ರಾಜಕೀಯ ಸುಧಾರಣೆಗಳನ್ನೊಳಗೊಂಡ ಈ ಎರಡು ಶಾಸನಗಳನ್ನು ಪ್ರತ್ಯೇಕವಾಗಿ ಬರೆದು ಪ್ರಕಟಿಸಿರುವನು.

[2] ಕೌಟಿಲ್ಯನು ಪೌರವ್ಯಾವಹಾರಿಕರು ಎಂಬ ಅಧಿಕಾರಿಗಳನ್ನು ಕುರಿತು ಪ್ರಸ್ತಾಪಿಸುತ್ತಾನೆ. (I. ೧೨,) ದೇಶದ ಹದಿನೆಂಟು ಮುಖ್ಯ ಅಧಿಕಾರಿಗಳಲ್ಲಿ ಅವರೂ ಸೇರಿರುವರು.

[3] ಜೌಗಡದಲ್ಲಿ ತೋಸಲಿ ಎಂಬುದಕ್ಕೆ ಬದಲಾಗಿ ಸಮಾಪಾ ಎಂದಿದೆ.

[4] ಹೊಸದಾಗಿ ಒಂದು ದೇಶವನ್ನು ಗೆದ್ದರೆ, ಅಲ್ಲಿಯ ಜನರಿಗೆ ಅಭಯಕೊಟ್ಟು ಅವರನ್ನು ತಂದೆಯಂತೆ ಅನುಗ್ರಹಿಸಬೇಕೆಂದು ಕೌಟಿಲ್ಯನು ಹೇಳುತ್ತಾನೆ. VII, ೧೬ " ದತ್ವಾ ಚಾಭಯಂ ಪಿತೇವಾನುಗೃಹ್ಣೀಯಾತ್ "

[5] ಪರಿಕ್ಲೇಶ : ಬಂಧನಸ್ಥರಾದವರಿಗೆ ಕೊಡುವ ಹಿಂಸೆ. ಕೌಟಿಲ್ಯನು ಇದಕ್ಕೆ ' ಕರ್ಮ ' ಎಂದು ಹೇಳುತ್ತಾನೆ. ದೋಷಮಾಡಿದವನು ಎಂಬ ಅನುಮಾನ ಬಲವಾಗಿದ್ದ ಪಕ್ಷದಲ್ಲಿ ಅವನಿಂದ ನಿಜಾಂಶವನ್ನು ಹೊರಗೆಡಹಿಸುವುದಕ್ಕಾಗಿ ಆಗಿನ ಕಾಲದಲ್ಲಿ ಹಿಂಸೆ ಕೊಡು

ಪ್ರಾಪ್ತವಾಗಬಹುದು. ತಮ್ಮ ಬಂಧನ ಕೊನೆಯಾಗುವಂತೆ ಕೆಲವರು ಅಕಸ್ಮಾತ್ ಆಜ್ಞೆಯನ್ನು ಪಡೆಯಬಹುದು. ಇತರ ಅನೇಕರಿಗೆ ಬಹು ದುಃಖವಾಗಬಹುದು. ಆಗ ನೀವು ಮಧ್ಯವರ್ತಿಗಳಾಗಿದ್ದು ಅವರೆಲ್ಲರನ್ನೂ ಸಮವಾಗಿ ಕಾಣುವ ಇಚ್ಛೆಯುಳ್ಳವರಾಗಿರಬೇಕು.

ಆದರೆ ಹಲವು ತೆರನ ಸ್ವಭಾವಗಳಿಂದ ತಪ್ಪಿನಡೆಯುತ್ತೇವೆ; ಅಸೂಯೆ ಆಶುಕೋಪ ನಿಷ್ಠುರತೆ ಅವಸರ ಅನಭ್ಯಾಸ ಸೋಮಾರಿತನ ಅಲಸಿಕೆ ಮಂಕುತನ, ಇಂತಹ ಸ್ವಭಾವಗಳು ಬರದಿರಲಿ ಎಂದು ನೀವು ಇಚ್ಛಿಸಬೇಕು. ಅದಕ್ಕೆ ಮೂಲ ಆಶುಕೋಪವಿಲ್ಲದಿರುವುದು, ಅವಸರವಿಲ್ಲದಿರುವುದು. ನೀತಿಯಲ್ಲಿ ಅಲಸಿಕೆ ಇರುವವನು ಮುಂಬರುವುದೇ ಇಲ್ಲ. ಆದರೆ, ಏಳಬೇಕು! ನಡೆಯಬೇಕು! ಮುಂಬರಿಯಬೇಕು.

ಇದನ್ನು ಸಾಧಿಸಬೇಕೆಂದಿರುವವನು ನಿಮಗೆ ಹೀಗೆ ಹೇಳಬೇಕು: ಋಣವನ್ನು ಗಮನಿಸು. ದೇವಾನಾಂಪ್ರಿಯನ ಅನುಶಾಸ್ತಿ ಹೀಗಿದೆ. "ಇದರ ಮೇಲಿನ ಸಂಪ್ರತಿಪತ್ತಿಯಿಂದ ಮಹತ್ತಾದ ಫಲವುಂಟು. ಇದರ ಮೇಲಿನ ಅಸಂಪ್ರತಿಪತ್ತಿಯಿಂದ ಮಹತ್ತಾದ ಅಪಾಯವುಂಟು. ಇದನ್ನು ಸಾಧಿಸದಿದ್ದರೆ ಸ್ವರ್ಗ ಸಿದ್ಧಿಸುವುದಿಲ್ಲ; ರಾಜನ ಮೆಚ್ಚುಗೆಯೂ ಲಭಿಸುವುದಿಲ್ಲ. ಈ ಕರ್ಮವನ್ನು ಕೆಡಿಸಿದರೆ ನನಗೆ ಸಂತೋಷವಾಗುವುದು ಹೇಗೆ; ಆದರೆ ಸಂಪ್ರತಿಪತ್ತಿ ಇದ್ದರೆ ಸ್ವರ್ಗಲಾಭವೂ ಆಗುತ್ತದೆ; ಋಣವಿಮೋಚನೆಯೂ ಆಗುತ್ತದೆ."

ಈ ಲಿಪಿಯನ್ನು ತಿಷ್ಯನಕ್ಷತ್ರ[1]ದಂದು ಕೇಳತಕ್ಕದ್ದು. ತಿಷ್ಯನಕ್ಷತ್ರಗಳ ನಡುನಡುವೆ ಆಗಾಗ ಒಬ್ಬೊಬ್ಬರಾಗಿಯೂ ಕೇಳಬಹುದು. ಹೀಗೆ ಮಾಡಿದರೆ

---

ತ್ತಿದ್ದರೆಂದು ಕೌಟಿಲ್ಯನಿಂದಲೂ ಗೊತ್ತಾಗುತ್ತದೆ. (ಆಪ್ತದೋಷಂ ಕರ್ಮಕಾರಯೇತ್ IV ೮) ವ್ಯಾವಹಾರಿಕಂ ಕರ್ಮಚತುಷ್ಕಂ, ಎಂದು ಹೇಳುತ್ತಾ ಕೌಟಿಲ್ಯನು ನಾಲ್ಕು ಬಗೆಯ ಹಿಂಸೆಗಳನ್ನು ವಿವರಿಸುತ್ತಾನೆ. ಬೆತ್ತದಿಂದ ಏಟುಗಳು, ತಲೆಕೆಳಗಾಗಿ ತೂಗುಹಾಕುವುದು, ಛಳಿಗಾಲದಲ್ಲಿ ಹೊರಗೆ ಮಲಗಿಸುವುದು ಅಥವಾ ಬೇಸಿಗೆಯಲ್ಲಿ ಬೆಂಕಿಯ ಹತ್ತಿರ ಮಲಗಿಸುವುದು, ಬರೆ ಹಾಕುವುದು ಮುಂತಾದ ಕರ್ಮಗಳು ಅರ್ಥಶಾಸ್ತ್ರದಲ್ಲಿ ಉಕ್ತವಾಗಿವೆ. ದಿವಸಾಂತರಂ ಏಕೈಕಂ ಚ ಕರ್ಮಕಾರಯೇತ್, ಪ್ರತಿದಿವಸವೂ ಬೇರೆ ಬೇರೆ ಕರ್ಮಗಳನ್ನು ಮಾಡತಕ್ಕದ್ದು, ಎಂದು ಕೌಟಿಲ್ಯನು ಹೇಳುತ್ತಾನೆ.

[1] ತಿಷ್ಯ ಅಥವಾ ಪುಷ್ಯನಕ್ಷತ್ರ ಅಶೋಕನ ಜನ್ಮನಕ್ಷತ್ರವಿದ್ದಿರಬಹುದು. ಹಾಗೆಯೇ ತಿಷ್ಯಮಾಸದ (ಪೌಷ್ಯಮಾಸದ) ಹುಣ್ಣಿಮೆ ಕೂಡ ಅಶೋಕನ ಶಾಸನಗಳಲ್ಲಿ ಬಹು ಮುಖ್ಯವೆಂದು ಪರಿಗಣಿಸಲಾಗಿದೆ.

ಇದರಲ್ಲಿ ಸಂಪ್ರತಿಪತ್ತಿ ಸಾಧ್ಯ. ಇದಕ್ಕಾಗಿಯೇ ಈ ಲಿಪಿಯನ್ನು ಬರೆಸಿರುವುದು : ನಗರವ್ಯಾವಹಾರಿಕರಾದ ಮಹಾಮಾತ್ರರು ಇದನ್ನು ಯಾವಾಗಲೂ ಗಮನಿಸಲಿ, ಎಂದು ; ಅಕಸ್ಮಾತ್ ಬಂಧನವೂ ಅಕಸ್ಮಾತ್ ಪರಿಕ್ಲೇಶವೂ ಆಗದಿರಲಿ, ಎಂದು.

ಇದಕ್ಕಾಗಿಯೇ ಕರ್ಕಶರಲ್ಲದ ಚಂಡರಲ್ಲದ ಸಖರಂತೆ ವರ್ತಿಸುವ ಮಹಾಮಾತ್ರರನ್ನು ಈ ನನ್ನ ಅನುಶಾಸ್ತಿಯಂತೆ ನಡೆಯುತ್ತಿದೆಯೋ ಎಂದು ಅರಿಯಲು ಐದುವರ್ಷಗಳಿಗೊಂದುಸಾರಿ ನಾನು ಕಳುಹಿಸುತ್ತೇನೆ. ಉಜ್ಜಯಿನಿಯಿಂದ ಕೂಡ ಕುಮಾರನು[1] ಈ ಅರ್ಥಕ್ಕಾಗಿಯೇ ಇಂತಹವರನ್ನು ಮೂರುವರ್ಷಗಳಿಗೊಮ್ಮೆ ತಪ್ಪದೆ ಕಳುಹಿಸುವನು. ಹಾಗೆಯೇ ತಕ್ಷಶಿಲೆಯಿಂದಲೂ, ಮಹಾಮಾತ್ರರು ಹೀಗೆ ಅನುಸಂಯಾನ ಮಾಡುವಾಗ ತಮ್ಮ ಕರ್ಮವನ್ನು ಗಮನಿಸುತ್ತಾ, ರಾಜನ ಅನುಶಾಸ್ತಿಯಂತೆ ನಡೆಯುತ್ತಿದೆಯೋ ಎಂದು ಅರಿತುಕೊಳ್ಳುವರು.

೨

ತೋಸಲಿಯ[2] ಕುಮಾರನಿಗೂ ಮಹಾಮಾತ್ರರಿಗೂ ದೇವಾನಾಂಪ್ರಿಯನ ವಚನದಂತೆ ಹೀಗೆ ಹೇಳತಕ್ಕದ್ದು : ನಾನು ಯಾವುದನ್ನು ಸರಿಯೆಂದು ಕಾಣುತ್ತೇನೋ ಅದನ್ನು ಕಾರ್ಯತಃ ನಡಸಲು ಇಚ್ಛಿಸುತ್ತೇನೆ. ಅದನ್ನು ಆಗಮಾಡಲು ಪ್ರಯತ್ನಿಸುತ್ತೇನೆ. ಇದಕ್ಕೆ ಮುಖ್ಯವಾದದ್ದೇನೆಂದರೆ, ಈಗ ನಾನು ನಿಮಗೆ ಮಾಡುವ ಅನುಶಾಸ್ತಿ. ನನ್ನ ಮಕ್ಕಳು ಇಹಲೋಕದಲ್ಲೂ ಪರಲೋಕದಲ್ಲೂ ಎಲ್ಲಾ ಹಿತಸುಖಗಳನ್ನೂ ಹೊಂದಬೇಕೆಂದು ನಾನು ಇಚ್ಛಿಸುತ್ತಿರುವಂತೆಯೇ ಎಲ್ಲ ಮನುಷ್ಯರ ವಿಷಯದಲ್ಲೂ ನಾನು ಇಚ್ಛಿಸುತ್ತೇನೆ.

ಅವಿಜಿತರಾದ ಅಂತ ಪ್ರದೇಶೀಯರನ್ನು ಕುರಿತು ರಾಜನ ಇಚ್ಛೆ ಏನು ? ಅಂತಪ್ರದೇಶೀಯರನ್ನು ಕುರಿತು ನನ್ನ ಇಚ್ಛೆ ಏನೆಂದರೆ : ದೇವಾನಾಂಪ್ರಿಯನು ಹೀಗೆ ಇಚ್ಛಿಸುತ್ತಾನೆಂದು ಅವರು ತಿಳಿದುಕೊಳ್ಳಲಿ. " ನನ್ನನ್ನು ಕುರಿತು ಅವರು ಭಯಪಡದಿರಲಿ. ನನ್ನಲ್ಲಿ ಅವರು ವಿಶ್ವಾಸವಿಡಲಿ. ನನ್ನಿಂದ ಅವರು ಹೊಂದಬೇಕಾದದ್ದು ದುಃಖವನ್ನಲ್ಲ, ಸುಖವನ್ನು. ಅವರಲ್ಲಿ ಕ್ಷಮ್ಯ

[1] ಉಜ್ಜಯಿನಿಯಲ್ಲೂ ತಕ್ಷಶಿಲೆಯಲ್ಲೂ ರಾಜಕುಮಾರರು ಆಳುತ್ತಿದ್ದರೆಂಬುದಕ್ಕೆ ಇದೊಂದು ನಿದರ್ಶನ.

[2] ಜೌಗಡದಲ್ಲಿ ಸಮಾಪ ಎಂದಿದೆ.

ವಾದದ್ದನ್ನು ದೇವಾನಾಂ ಪ್ರಿಯನು ಕ್ಷಮಿಸುತ್ತಾನೆ ಎಂದು ಅವರು ತಿಳಿದು ಕೊಳ್ಳಲಿ. ನನ್ನ ನಿಮಿತ್ತವಾಗಿ ಅವರು ಧರ್ಮದಲ್ಲೇ ಚರಿಸಲಿ. ಈ ಲೋಕ ವನ್ನೂ ಪರಲೋಕವನ್ನೂ ಪಡೆಯಲಿ."

ಇದಕ್ಕಾಗಿಯೇ ನಾನು ಅನುಶಾಸಿಸುತ್ತಿರುವುದು. ನಾನು ಋಣ ವಿಮುಕ್ತನಾಗುವುದಕ್ಕಾಗಿ ಅನುಶಾಸಿಸುತ್ತಿದೇನೆ. ನನ್ನ ಇಚ್ಛೆಯನ್ನೂ ನನ್ನ ಅಚಲವಾದ ಹಾಗೂ ದೃಢವಾದ ಪ್ರತಿಜ್ಞೆಯನ್ನೂ ತಿಳಿಸುತ್ತಿದೇನೆ. ಆದ್ದರಿಂದ ಹಾಗೆಯೇ ಮಾಡುತ್ತಾ ನೀವು ಅವರಿಗೆ ಆಶ್ವಾಸನವನ್ನು ಕೊಡತಕ್ಕದ್ದು : ದೇವಾನಾಂಪ್ರಿಯನು ಅವರಿಗೆ ತಂದೆಯ ಹಾಗೆ. ದೇವಾನಾಂಪ್ರಿಯನು ಅವರನ್ನು ತನ್ನಷ್ಟೇ ಪ್ರೀತಿಸುತ್ತಿದಾನೆ. ದೇವಾನಾಂ ಪ್ರಿಯನು ಅವರಿಗಾಗಿ ತನ್ನ ಮಕ್ಕಳಿಗಾಗಿ ಮಾಡುವಂತೆಯೇ, ಅನುಕಂಪಿಸುತ್ತಾನೆ—ಎಂದು ತಿಳಿಸ ತಕ್ಕದ್ದು. ಆದ್ದರಿಂದ ಅವರಿಗೆ ಅನುಶಾಸನಮಾಡಿ ನನ್ನ ಇಚ್ಛೆಯನ್ನು ತಿಳಿಸಿ. ಇದಕ್ಕಾಗಿ ಸರ್ವದೇಶಗಳಲ್ಲಿಯೂ ಅಧಿಕಾರಿಗಳನ್ನು ನಿಯಮಿಸಿರು ವೆನು.[1] ಅವರಿಗೆ ಆಶ್ವಾಸನವನ್ನು ಕೊಡುವುದಕ್ಕೂ ಇಹಲೋಕ ಪರಲೋಕ ಗಳಲ್ಲಿ ಹಿತಸುಖಗಳನ್ನು ಪಡೆಯುವಂತೆ ಅವರನ್ನು ನಡೆಯಿಸುವುದಕ್ಕೂ ನೀವು ಸಮರ್ಥರಾಗಿರುವಿರಿ. ಹೀಗೆ ಮಾಡಿದರೆ ನೀವು ಸ್ವರ್ಗವನ್ನು ಪಡೆಯು ವಿರಿ ; ನನ್ನ ಋಣವನ್ನೂ ತೀರಿಸುವಿರಿ. ಇದಕ್ಕಾಗಿಯೇ ಈ ಧರ್ಮಲಿಪಿ ಯನ್ನು ಬರೆಸಿರುವುದು : ಮಹಾಮಾತ್ರರು ಯಾವಾಗಲೂ ಅಂತ ಪ್ರದೇಶೀ ಯರಿಗೆ ಆಶ್ವಾಸನ ಕೊಡುವುದಕ್ಕೂ ಅಂತ ಪ್ರದೇಶೀಯರು ಧರ್ಮದಲ್ಲೇ ಚರಿಸುವುದಕ್ಕೂ. ಈ ಲಿಪಿಯನ್ನು ಚಾತುರ್ಮಾಸ್ಯದಲ್ಲಿ[2] ತಿಷ್ಯನಕ್ಷತ್ರದಂದು ಕೇಳತಕ್ಕದ್ದು. ತಿಷ್ಯನಕ್ಷತ್ರಗಳ ನಡುನಡುವೆಯೂ, ಆಗಾಗ, ಒಬ್ಬೊಬ್ಬ ರಾಗಿಯೂ ಕೇಳಬಹುದು. ಹೀಗೆ ಮಾಡಿದರೆ ನನ್ನ ಇಚ್ಛೆಯನ್ನು ಪ್ರೀತಿ ಯಿಂದ ನಡಸಿದಂತಾಯಿತು.

---

[1] ಮೊದಲನೆಯ ಸ್ತಂಭಶಾಸನದಲ್ಲಿ ಹೇಳಿರುವ ಅಂತಮಹಾಮಾತ್ರರೇ ಇವರು. ಅಂತ ಪ್ರದೇಶದ ಜನರಲ್ಲಿ ಧರ್ಮಾಚರಣೆ ಹೆಚ್ಚುವುದಕ್ಕಾಗಿಯೂ ಅವರನ್ನು ಕನಿಕರದಿಂದ ಕಂಡು ಅವರ ಪ್ರೀತಿವಿಶ್ವಾಸಗಳನ್ನು ಸಂಪಾದಿಸುವುದಕ್ಕಾಗಿಯೂ ಅಶೋಕನು ಅಂತ ಮಹಾಮಾತ್ರರನ್ನು ನಿಯಮಿಸಿದನೆಂದು ತೋರುತ್ತದೆ.

[2] ಚಾತುರ್ಮಾಸ್ಯ—ಗ್ರೀಷ್ಮ ಹೇಮಂತ ವರ್ಷ ಋತುಗಳ ನಾಲ್ಕನೆಯ ತಿಂಗಳುಗಳ ತಿಷ್ಯ ನಕ್ಷತ್ರದ ದಿನ. ಅಧಿಕಾರಿಗಳು ತಮ್ಮ ತಮ್ಮ ಕರ್ತವ್ಯವನ್ನು ಮರೆಯದೆ ಇರಲು ಅಶೋಕನು ಈರೀತಿಯ ಪಠನ ವ್ಯವಸ್ಥೆಯನ್ನೇರ್ಪಡಿಸಿರುವನು.

# ೧೧. ಸ್ತಂಭಶಾಸನಗಳು[1]

## ೧

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು : ಅಭಿಷಿಕ್ತನಾಗಿ ಇಪ್ಪತ್ತಾರು ವರ್ಷಗಳಾದಾಗ ನನ್ನಿಂದ ಈ ಧರ್ಮಲಿಪಿಯನ್ನು ಬರೆಸಲಾಯಿತು. ಮೇಲ್ತರದ ಧರ್ಮಕಾಮ, ಮೇಲ್ತರದ ಪರೀಕ್ಷೆ, ಮೇಲ್ತರದ ಶುಶ್ರೂಷೆ, ಮೇಲ್ತರದ ಭಯ, ಮೇಲ್ತರದ ಉತ್ಸಾಹ, ಇವುಗಳಿಂದಲ್ಲದೆ ಇಹವನ್ನೂ ಪರವನ್ನೂ ಹೊಂದುವುದು ಕಷ್ಟ. ಆದರೆ ನನ್ನ ಅನುಶಾಸ್ತಿಯಿಂದ ಧರ್ಮಾಪೇಕ್ಷೆ ಧರ್ಮಕಾಮ ಇವು ದಿನದಿನಕ್ಕೂ ವೃದ್ಧಿಯಾಗಿವೆ, ವೃದ್ಧಿಯಾಗುತ್ತಿವೆ. ನನ್ನ ಪುರುಷರು ಕೂಡ—ಉತ್ಕೃಷ್ಟರೂ[2] ನಿಕೃಷ್ಟರೂ ಮಧ್ಯಮರೂ—ನನ್ನ ವಿಧಿಗಳಂತೆ ನಡೆಯುತ್ತಾರೆ. ಚಪಲಮತಿಗಳಿಗೆ ಅವರು ಉತ್ತೇಜನ ಕೊಡಲು ಬಲ್ಲರು. ಆದ್ದರಿಂದ ಅವರು ಜನರನ್ನು ನಡಸುತ್ತಾರೆ. ಅಂತಮಹಾಮಾತ್ರರೂ[3] ಹಾಗೆಯೇ. ನನ್ನ ವಿಧಿಯೂ ಕೂಡ ಹೀಗಿದೆ: ಧರ್ಮದಿಂದ ಪಾಲಿಸಿ ; ಧರ್ಮದಿಂದ ವಿಧಾಯಕ ಮಾಡಿ ; ಧರ್ಮದಿಂದ ಸುಖವನ್ನು ಸಾಧಿಸಿ ; ಧರ್ಮದಿಂದ ಗೋಪನಮಾಡಿ.[4]

## ೨

ದೇವನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು : ಧರ್ಮ ಸಾಧುವಾದದ್ದು. ಆದರೆ, ಧರ್ಮವೆಂದರೆ ಯಾವುದು ? ಅಲ್ಪವಾದ ಆಸ್ರವ ;[5] ಬಹುವಾದ ಕಲ್ಯಾಣ, ದಯೆ, ದಾನ, ಸತ್ಯ, ಶುಚಿ.

---

[1] ಅಭಿಷಿಕ್ತನಾಗಿ ಇಪ್ಪತ್ತಾರು ವರ್ಷಗಳಾದಾಗ ಈ ಏಳು ಸ್ತಂಭಶಾಸನಗಳನ್ನೂ ಒಟ್ಟಾಗಿ ಅಶೋಕನು ಪ್ರಕಟಿಸಿರಬೇಕು. ಏಕೆಂದರೆ, ೪ ೫ ೬ ನೆಯ ಶಾಸನಗಳಲ್ಲಿ ಅದರ ಕಾಲದ ಪ್ರಸ್ತಾಪನೆ ಇದೆ.

[2] ಉತ್ಕೃಷ್ಟರೂ, ನಿಕೃಷ್ಟರೂ, ಮಧ್ಯಮರೂ : ಅಧಿಕಾರಿಗಳಲ್ಲಿ ಮೂರು ವರ್ಗ.

[3] ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ ಅಂತಪಾಲರು ಎಂಬ ದೊಡ್ಡ ಅಧಿಕಾರಿಗಳನ್ನು ಕುರಿತು ಹೇಳಿದೆ. II. ೪

[4] ಧರ್ಮದೃಷ್ಟಿಯಿಂದ 'ವಚನ' ಗುಪ್ತಿಯನ್ನು ಮಾಡಿ, ಎಂಬುದೇ ಇದರ ಅರ್ಥವೆಂದು ಹುಲ್ಷ್‌ರವರು ಹೇಳುತ್ತಾರೆ. ಆದರೆ, ಅಂತ ಮಹಾಮಾತ್ರರೂ ಪುರುಷರೂ ಪ್ರಜೆಗಳನ್ನು ಧರ್ಮದಿಂದ ರಕ್ಷಿಸತಕ್ಕದ್ದೆಂದು ಅಶೋಕನು ವಿಧಾಯಕಮಾಡಿರುವನು ಎಂಬುದೇ ಸಮಂಜಸವಾಗಿ ಕಾಣುತ್ತದೆ.

[5] ಆಸ್ರವ: ಜೈನಧರ್ಮದಲ್ಲೂ ಬೌದ್ಧಧರ್ಮದಲ್ಲೂ, ಅನೇಕ ವಿಧದ ಆಸ್ರವಗಳನ್ನು

ಚಕ್ಷುದಾನವು ಕೂಡ ನನ್ನಿಂದ ಬಹುವಿಧದಲ್ಲಿ ಮಾಡಲ್ಪಟ್ಟಿದೆ. ದ್ವಿಪಾದ ಚತುಷ್ಪಾದಗಳಿಗೆ ಪಕ್ಷಿಗಳಿಗೆ ವಾರಿಚರಗಳಿಗೆ ನನ್ನಿಂದ ವಿಧವಿಧವಾದ ಅನುಗ್ರಹಗಳೂ ಪ್ರಾಣದಕ್ಷಿಣೆಯೂ ಮಾಡಲ್ಪಟ್ಟಿವೆ. ಹಾಗೆಯೇ, ಇತರ ಬಹುವಿಧದ ಕಲ್ಯಾಣಗಳನ್ನೂ ನನ್ನಿಂದ ಮಾಡಲಾಗಿದೆ.

ಇದಕ್ಕಾಗಿಯೇ ಈ ಧರ್ಮಲಿಪಿಯನ್ನು ಬರೆಸಲಾಯಿತು. ಜನರು ಇದನ್ನನುಸರಿಸಲಿ—ಎಂದು; ಇದು ಚಿರಸ್ಥಾಯಿಯಾಗಿರಲಿ, ಎಂದು. ಇದನ್ನನುಸರಿಸುವವರು ಸುಕೃತವನ್ನೇ ಮಾಡುತ್ತಾರೆ.

೩

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು: ಈ ಕಲ್ಯಾಣ ನನ್ನಿಂದ ಮಾಡಲಾಯಿತು ಎಂದು ತಾವು ಮಾಡುವ ಕಲ್ಯಾಣವನ್ನೇ ಜನರು ಗಮನಿಸುತ್ತಾರೆ. ಆದರೆ, ಈ ಪಾಪ ನನ್ನಿಂದ ಮಾಡಲಾಯಿತು, ಇದಕ್ಕೆ ಆಸ್ರವ ಎಂದು ಹೆಸರು, ಎಂದು ಜನರು, ಪಾಪವನ್ನು ಗಮನಿಸುವುದಿಲ್ಲ. ಹೀಗೆ ಪಾಪವನ್ನು ಗಮನಿಸುವುದು ಕಷ್ಟ. ಆದರೆ, ಹೀಗೆ ಗಮನಿಸಬೇಕಾಗಿದೆ. ಚಂಡತನ ನಿಷ್ಠುರ ಕ್ರೋಧ ಮಾನ ಈರ್ಷ್ಯೆ ಇವು ಆಸ್ರವಗಳು. ಇವುಗಳಿಂದ ನಾನು ಹಾಳಾಗದಿರಲಿ ; ಹಾಗೆಯೇ, ಇದು ನನಗೆ ಇಹಲೋಕಕ್ಕಾಗಿ, ಇದು ನನಗೆ ಪರಲೋಕಕ್ಕಾಗಿ, ಎಂದು ಮನಸ್ಸಿಟ್ಟು ಗಮನಿಸಬೇಕಾಗಿದೆ.

೪

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು: ಅಭಿಷಿಕ್ತನಾಗಿ ಇಪ್ಪತ್ತಾರು ವರ್ಷಗಳಾದಾಗ ಈ ಧರ್ಮಲಿಪಿಯನ್ನು ಬರೆಸಿದೆನು. ಬಹುಶತಸಹಸ್ರಜನರ ಮೇಲೆ ನನ್ನಿಂದ ರಾಜೂಕರು ನಿಯಮಿತರಾಗಿರುವರು. ವ್ಯವಹಾರದಲ್ಲೂ ದಂಡದಲ್ಲೂ ನಾನು ಅವರನ್ನು ಆತ್ಮಪತ್ಯರಾಗಿ[1] ಮಾಡಿರುವೆನು. ಏಕೆಂದರೆ, ಹೀಗೆ ಆಶ್ವಾಸಿತರಾದ ಆ ನನ್ನ ರಾಜೂಕರು ತಮ್ಮ ಕರ್ಮಗಳನ್ನು ಮಾಡುತ್ತಾ ಜನಪದದ ಜನರ ಹಿತಸುಖಗಳನ್ನು ಹೆಚ್ಚಿಸಿ, ಅವರನ್ನು ಅನುಗ್ರಹಿಸಲಿ. ಸುಖಕರ ಯಾವುದು, ದುಃಖಕರ ಯಾವುದು, ಎಂಬುದನ್ನು ತಿಳಿದು, ಧರ್ಮಯುಕ್ತರಾದವರ ಸಹಾಯವನ್ನು ಗಳಿಸಿ ಜನಪದದ ಜನರು

---

ಸಾಧಕರು ದೂರೀಕರಿಸಿ ನಡೆಯಬೇಕೆಂದು ಹೇಳಿದೆ. ಕಾಮಾಸ್ರವ ಭವಾಸ್ರವ ಅವಿದ್ಯಾಸ್ರವ, ದೃಷ್ಟ್ಯಾಸ್ರವ ಎಂಬ ಪಾಪಗಳನ್ನು ಬೌದ್ಧರೂ, ಭಾವಾಸ್ರವ ದ್ರವ್ಯಾಸ್ರವ ಎಂಬ ಆಸ್ರವಗಳನ್ನು ಜೈನರೂ ಖಂಡಿಸಿರುವರು, ಆಸ್ರವವೆಂದರೆ ಹರಿದು ಬರುವುದೆಂದರ್ಥ. ಆಸ್ರವಕ್ಕೆ ೪೨ ದಾರಿಗಳುಂಟೆಂದೂ ಜೈನರು ನಂಬುವರು.

[1] ಆತ್ಮಪತ್ಯರಾಗಿ—ಸ್ವತಂತ್ರರಾಗಿ ; ತಮಗೆ ಸೂಕ್ತತೋರಿದಂತೆ ನಡೆದುಕೊಳ್ಳುವಂತೆ.

ಇಹಪರಗಳನ್ನು ಪಡೆಯುವಂತೆ, ಅವರು ಎಚ್ಚರಿಸಬೇಕು. ನನ್ನ ರಾಜೂಕರು ನನ್ನನ್ನು ಪರಿಚರಿಸಲು ಕಾತರರಾಗಿರುವರು. ಅಲ್ಲದೆ, ಅವರು ನನ್ನ ಇಚ್ಛೆಯನ್ನರಿತ ಪುರುಷರನ್ನೂ ಪರಿಚರಿಸುವರು. ಪುರುಷರು ಕೂಡ ನನ್ನನ್ನು ತುಷ್ಟಿಪಡಿಸಬೇಕೆಂದು ರಾಜೂಕರನ್ನು ಎಚ್ಚರಿಸುವರು.

ವಿದಗ್ಧಳಾದ ಧಾತ್ರಿಯ ಕೈಗೆ ಮಗುವನ್ನೊಪ್ಪಿಸಿದ ಅನಂತರ, ಆ ವಿದಗ್ಧಳಾದ ಧಾತ್ರಿ ನನ್ನ ಮಗುವನ್ನು ಪಾಲಿಸುತ್ತಾಳೆ ಎಂದು ಸ್ವಸ್ಥ ಮಾನಸನಾಗುವಂತೆ, ನಾನು ಜನಪದದ ಹಿತಸುಖಗಳಿಗಾಗಿ ರಾಜೂಕರನ್ನು ನಿಯಮಿಸಿರುವೆನು. ಅವರು ನಿರ್ಭೀತರಾಗಿ ಶಾಂತಮನಸ್ಸಿನಿಂದ ತಮ್ಮ ಕರ್ಮಗಳನ್ನು ಮಾಡಲಿ ಎಂಬುದಕ್ಕಾಗಿಯೇ ನಾನು ರಾಜೂಕರನ್ನು ವ್ಯವಹಾರದಲ್ಲೂ ದಂಡದಲ್ಲೂ ಆತ್ಮಪತ್ಯರಾಗಿ ಮಾಡಿರುವುದು.

ವ್ಯವಹಾರಸಮತೆಯನ್ನೂ ದಂಡಸಮತೆಯನ್ನೂ ಇಚ್ಛಿಸತಕ್ಕದ್ದೇ. ಆದ್ದರಿಂದ, ಮುಂದೆ, ಇದೇ ನನ್ನ ಆಜ್ಞೆ. ಬಂಧನಬದ್ಧರಾಗಿ, ದಂಡ ವಿಧಿಸಲ್ಪಟ್ಟವರಾಗಿ, ವಧೆಗೆ ಗುರಿಯಾಗಬೇಕಾದವರಿಗೆ ಮೂರು ದಿನಗಳ ಯೌತಕ[1]ವು ನನ್ನಿಂದ ಕೊಡಲಾಗಿದೆ. ಈ ಯೌತಕಕಾಲದಲ್ಲಿ ಜ್ಞಾತಿಗಳು ಬಂದು, ವಿಧಿಸಲಾದ ಶಿಕ್ಷೆಯನ್ನು ಪುನರ್ವಿಮರ್ಶಿಸುವಂತೆ ರಾಜೂಕರನ್ನು ಕೇಳಿಕೊಂಡು, ಹಾಗೆ ಮಾಡಿಸಬಹುದು. ಅಥವಾ, ಅಂತಹವರು ಯಾರೂ ಇಲ್ಲದಿದ್ದರೆ, ಆಗ ಪಾರತ್ರಿಕಕ್ಕಾಗಿ ಅವರು ದಾನಮಾಡಬಹುದು, ಉಪವಾಸಾದಿಗಳನ್ನು ಮಾಡಬಹುದು. ಏಕೆಂದರೆ, ನಿರೋಧಕಾಲದಲ್ಲೂ[2] ಅವರು ಪರವನ್ನು ಪಡೆಯಬೇಕೆಂಬುದೇ ನನ್ನ ಇಚ್ಛೆ. ವಿಧವಿಧವಾದ ಧರ್ಮಾಚರಣಗಳೂ ಸಂಯಮವೂ ದಾನವೂ ಜನರಲ್ಲಿ ವರ್ಧಿಸಬೇಕೆಂಬುದೇ ನನ್ನ ಇಚ್ಛೆ.

---

[1] **ಯೌತಕ**—ದಾನ.

[2] **ನಿರೋಧಕಾಲದಲ್ಲೂ ಕೂಡ**—ಈ ಪದಕ್ಕೆ ಅನೇಕರು ಅನೇಕ ರೀತಿಯ ಅರ್ಥಗಳನ್ನು ಕೊಡುತ್ತಾರೆ. ಬ್ಯೂಲರ್‌ರವರು 'ಕಾರಾಗೃಹದಲ್ಲಿರುವಾಗಲೂ' ಎಂದೂ, ಥಾಮಸ್‌ರವರು 'ಮರಣಕಾಲ ನಿರ್ಧರವಾಗಿದ್ದರೂ ಕೂಡ' ಎಂದೂ, ಹುಲ್ಟ್‌ಶ್‌ರವರು, 'ವಧೆಯನ್ನು ನಿರೋಧಮಾಡಿದ ಕಾಲದಲ್ಲಿಯೂ ಕೂಡ, ಅಂದರೆ, ಮೂರು ದಿನಗಳ ಯೌತಕದಲ್ಲೂ ಕೂಡ' ಎಂದೂ ಅಭಿಪ್ರಾಯಪಡುತ್ತಾರೆ. ಮರಣದಂಡನೆ ವಿಧಿಸುವಷ್ಟು ಕ್ರೂರವಾದ ಕರ್ಮಗಳನ್ನು ಮಾಡಿದ್ದರೂ ಕೂಡ ಧರ್ಮಾಚರಣೆಯಿಂದ, ಸಂಯಮದಿಂದ, ದಾನದಿಂದ, ಪರವನ್ನು ಸಾಧಿಸಬಹುದೆಂಬುದು ಅಶೋಕನ ಅಭಿಮತ.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ (II. ೨೬) ಪುಣ್ಯಶೀಲರಾದವರು ಬಂಧನಬದ್ಧರಾದವರನ್ನು ಬಿಡಿಸಬಹುದೆಂದೂ, 'ದೋಷನಿಷ್ಕ್ರಯ'ವನ್ನು ಕೊಟ್ಟು ಅವರು ಬಂಧವಿಮುಕ್ತರಾಗಬಹುದೆಂದೂ ಹೇಳಿದೆ.

೫

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು: ಅಭಿಷಿಕ್ತನಾಗಿ ಇಪ್ಪತ್ತಾರು ವರ್ಷಗಳಾದಾಗ ನನ್ನಿಂದ ಈ ಪ್ರಾಣಿಗಳು ಅವಧ್ಯವೆಂದು ನಿರ್ಧರಿಸಲಾಯಿತು:[1] ಯಾವುವೆಂದರೆ, ಶುಕಶಾರಿಕೆಗಳು ಅರುಣಗಳು ಚಕ್ರವಾಕಗಳು ಹಂಸಗಳು ನಂದೀಮುಖಗಳು ಕೊಕ್ಕರೆಗಳು ಬಾವಲಿಗಳು ಅಂಬಾಪಿಪೀಲಿಕಗಳು ದುಳೀಗಳು (?) ಅನಸ್ಥಿಮತ್ಸ್ಯಗಳು ವಿದರ್ವೀಮತ್ಸ್ಯಗಳು (?) ಗಂಗಾ ಪುಪುಟಕಗಳು (?) ಸಂಕುಚಿತಮಾಡಿಕೊಳ್ಳಬಲ್ಲ ಮತ್ಸ್ಯಗಳು ಕಮಠಗಳು ಶಾಲ್ಯಕಗಳು ಪರ್ಣಶಶಗಳು ಶೃಮರಗಳು ಶಂಡಕಗಳು ಮುಂಗಸೆಗಳು ಪಲಾಶತಗಳು (?) ಶ್ವೇತಕಪೋತಗಳು ಗ್ರಾಮಕಪೋತಗಳು, ಅಲ್ಲದೆ, ಪ್ರತಿಭೋಗಕ್ಕೆ ಬರದ ಅಥವಾ ಆಹಾರಕ್ಕೊದಗದ ಎಲ್ಲಾ ಚತುಷ್ಪಾದಗಳು.

ಗಬ್ಬವಾಗಿರುವ ಅಥವಾ ಹಾಲುಕರೆಯುವ ಆಡು ಕುರಿ ಹಂದಿ ಇವುಗಳನ್ನು ಕೊಲ್ಲಕೂಡದು. ಆರುತಿಂಗಳಾಗುವವರೆಗೂ ಅವುಗಳ ಶಿಶುಗಳನ್ನು ಕೊಲ್ಲಕೂಡದು. ಹುಂಜಗಳಿಗೆ ಹಿಡ ಮಾಡಬಾರದು. ಜೀವಿಗಳು ಸೇರಿಕೊಂಡಿರುವ ಹೊಟ್ಟನ್ನು ಉರಿಸಬಾರದು. ವಿನಾಕಾರಣವಾಗಲಿ, ಹಿಂಸ್ರ ಪ್ರಾಣಿಗಳನ್ನು ಓಡಿಸುವ ಉದ್ದೇಶದಿಂದಾಗಲಿ, ಕಾಡನ್ನು ಉರಿಸಬಾರದು.

ಜೀವಿಗಳಿಂದ ಜೀವವನ್ನು ಪೋಷಿಸಲಾಗದು.

ಮೂರು ಚಾತುರ್ಮಾಸ್ಯಗಳಲ್ಲೂ[2] ತಿಷ್ಯಮಾಸದ ಪೌರ್ಣಮಾಸಿಯಲ್ಲೂ ಮೂರು ದಿನಗಳು—ಅಂದರೆ, ಚತುರ್ದಶಿ ಪಂಚದಶಿ ಪ್ರಥಮೆ,—ಈ ದಿನ

---

[1] ಅರ್ಥಶಾಸ್ತ್ರದಲ್ಲಿ ಕೂಡ ಹಲತೆರನ ಪಕ್ಷಿಮೃಗಾದಿಗಳಿಗೆ ಅಭಯ ಕೊಡಲಾಗಿದೆ. (II. 26) ಹಂಸ ಚಕ್ರವಾಕ ಶುಕ ಶಾರಿಕೆ ಮಯೂರ ಮುಂತಾದ ಮಂಗಳ ಜೀವಿಗಳನ್ನೂ ಆನೆ ಕುದುರೆ ಎತ್ತುಗಳನ್ನೂ ಮತ್ಸ್ಯಗಳನ್ನೂ ಹಿಂಸಾಬಾಧೆಗಳಿಂದ ರಕ್ಷಿಸಬೇಕೆಂದು ಅದರಲ್ಲಿ ಹೇಳಿದೆ. ಅಲ್ಲದೆ, ಈ ಶಾಸನದಲ್ಲಿ ಹೇಳಿರುವಂತೆ ಹಲವು ಪ್ರಾಣಿಗಳಿಗೆ ಹಿಡ ಮಾಡಕೂಡದೆಂದು ಕಾಟಿಲ್ಯನೂ ಹೇಳಿದ್ದಾನೆ. (ಪುಂಸ್ತ್ವೋಪಘಾತಂಚ ಪ್ರತಿಷೇಧಯೇತ್) (XIII. 5)

[2] ಈ ಶಾಸನದಲ್ಲಿ ಹೇಳಿರುವಂತೆ ಚಾತುರ್ಮಾಸ್ಯ, ಪೌರ್ಣಮಾಸಿ ಮುಂತಾದ ದಿನಗಳಲ್ಲಿ ಪ್ರಾಣಿವಧೆಯನ್ನು ನಿಷೇಧಿಸಬೇಕೆಂದು ಕಾಟಿಲ್ಯನೂ ಹೇಳಿರುವನು. (XIII. 5) (ಚಾತುರ್ಮಾಸ್ಯೇಷು ಅರ್ಧ ಮಾಸಿಕಂ ಅಘಾತಂ; ಪೌರ್ಣಮಾಸೀಷು ಚ ಚಾತುರಾತ್ರಿಕಂ; ರಾಜದೇಶನಕ್ಷತ್ರೇಷು ಏಕರಾತ್ರಿಕಂ ಯೋನಿಬಾಲವಧಂ ಪುಂಸ್ತ್ವೋಪ ಘಾತಂ ಚ ಪ್ರತಿಷೇಧಯೇತ್)

ಮೂರು ಚಾತುರ್ ಮಾಸ್ಯಗಳು—ಗ್ರೀಷ್ಮ ಋತುವಿನ ನಾಲ್ಕನೆಯ ಮಾಸವಾದ

ಗಳಲ್ಲೂ—ಉಪವಾಸದ ದಿನಗಳಲ್ಲೂ ಖಂಡಿತವಾಗಿಯೂ ಮತ್ಸ್ಯವನ್ನು ಕೊಲ್ಲಕೂಡದು, ವಿಕ್ರಯ ಮಾಡಕೂಡದು. ಈ ದಿನಗಳಲ್ಲಿ ಆನೆಕಾಡುಗಳಲ್ಲಾಗಲಿ, ಬೆಸ್ತರಿಗೆ ಸೇರಿದ ಕೆರೆಗಳಲ್ಲಾಗಲಿ, ಬೇರೆ ಯಾವ ಜೀವಿಯನ್ನೂ ಕೊಲ್ಲಕೂಡದು. ಪ್ರತಿ ಪಕ್ಷದಲ್ಲೂ ಅಷ್ಟಮಿ ಚತುರ್ದಶಿ ಪಂಚದಶಿ ದಿವಸಗಳಲ್ಲಿ, ತಿಷ್ಯ ಪುನರ್ವಸು ದಿವಸಗಳಲ್ಲಿ ಹೋರಿಗಳಿಗೆ ಹಿಡ ಮಾಡಬಾರದು; ಆಡು ಟಗರು ಹಂದಿ ಮುಂತಾದ ಇತರ ಪ್ರಾಣಿಗಳಿಗೂ ಹಿಡ ಮಾಡಬಾರದು. ತಿಷ್ಯಪುನರ್ವಸುಗಳಲ್ಲಿ, ಚಾತುರ್ಮಾಸ್ಯಗಳಲ್ಲಿ ಚಾತುರ್ಮಾಸ್ಯದ ಶುಕ್ಲಪಕ್ಷದಲ್ಲಿ, ಕುದುರೆಗಳಿಗೂ ಎತ್ತುಗಳಿಗೂ ಬರೆ ಹಾಕಕೂಡದು.

ಅಭಿಷಿಕ್ತನಾಗಿ ಇಪ್ಪತ್ತಾರು ವರ್ಷಗಳವರೆಗೆ[1] ನನ್ನಿಂದ ಇಪ್ಪತ್ತೈದು ಬಂಧನಮೋಕ್ಷಗಳು ನೆರವೇರಿಸಲಾಯಿತು.

೬

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು : ಲೋಕದ ಹಿತಸುಖಗಳ ಸಲುವಾಗಿ, ಇದನ್ನು ಅವರು ತಪ್ಪದೆ ನಡಸಿ, ಆದಷ್ಟು ಧರ್ಮವೃದ್ಧಿಯಾಗಲೆಂದು, ಅಭಿಷಿಕ್ತನಾಗಿ ಹನ್ನೆರಡು ವರ್ಷಗಳಾದಾಗ ನನ್ನಿಂದ ಧರ್ಮಲಿಪಿಗಳನ್ನು[2] ಬರೆಸಲಾಯಿತು. ಲೋಕದ ಹಿತಸುಖಗಳನ್ನು ಈ ರೀತಿ ಸಾಧಿಸಬಹುದು ಎಂದು ಯೋಚಿಸಿ ನಾನು ನನ್ನ ಜ್ಞಾತಿಗಳನ್ನು ಮಾತ್ರವೇ ಅಲ್ಲ, ಹತ್ತಿರದವರನ್ನೂ ದೂರದವರನ್ನೂ ಸುಖದ ಕಡೆಗೆ ನಡಸುತ್ತಿದೇನೆ. ಅದರಂತೆ ತಿಳಿಸುತ್ತಿದೇನೆ. ಹಾಗೆಯೇ ನಾನು ಎಲ್ಲ ವರ್ಗದವರನ್ನೂ ಗಮನಿಸುತ್ತಿದೇನೆ, ಸರ್ವಮತದವರನ್ನೂ ವಿವಿಧ ಪೂಜೆಗಳಿಂದ ಪೂಜಿಸುತ್ತಿದೇನೆ. ಯಾವಾಗಲೂ ತಾನೇ ಎದುರುಗೊಳ್ಳುವುದೇ[3] ಮುಖ್ಯವಾದದ್ದೆಂದು ನಾನು ಭಾವಿಸುತ್ತೇನೆ.

---

"ಆಷಾಢ", ವರ್ಷ ಋತುವಿನ ನಾಲ್ಕನೆಯ ಮಾಸವಾದ ಕಾರ್ತಿಕ, ಹೇಮಂತ ಋತುವಿನ ನಾಲ್ಕನೆಯ ಮಾಸವಾದ 'ಫಾಲ್ಗುಣ' ಇವು ಮೂರು.

[1] ವರ್ಷಕ್ಕೊಮ್ಮೆ ಕಾರಾಗೃಹಗಳಿಂದ ಕೈದಿಗಳನ್ನು ಬಿಡುವ ಪದ್ಧತಿಯಿದ್ದಂತೆ ಕಾಣುತ್ತದೆ. ಬಹುಶಃ ರಾಜನಕ್ಷತ್ರವಾದ ತಿಷ್ಯದಲ್ಲಿ ಇದು ನಡೆದಿರಬೇಕು. ಕೌಟಿಲ್ಯನು (II. 36) ರಾಜನ ಜನ್ಮನಕ್ಷತ್ರದ ದಿನ ಬಾಲವೃದ್ಧ ವ್ಯಾಧಿತಾನಾಥರನ್ನು ಬಿಡುವುದು—ಎಂದು ಹೇಳಿರುವನು.

[2] ೧೪ ಶಿಲಾ ಶಾಸನಗಳು.

[3] ಆತ್ಮನಾ ಪ್ರತ್ಯುಪಗಮನಂ—"ಯಾವ ಮತವನ್ನು ತಾನು ಸ್ವಂತವಾಗಿ ಸ್ವೀಕರಿಸುತ್ತಾನೋ ಅದೇ ಮುಖ್ಯ" ಎಂಬ ಅರ್ಥವನ್ನು ರಾಧಾಕುಮುದ ಮುಖರ್ಜಿಯವರು

ಅಭಿಷಿಕ್ತನಾಗಿ ಇಪ್ಪತ್ತಾರು ವರ್ಷಗಳಾದಾಗ ಈ ಧರ್ಮಲಿಪಿಯನ್ನು ಬರೆಸಲಾಯಿತು.

೭[1]

ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು:

ಬಹುಕಾಲದವರೆಗಿನ ರಾಜರು ಧರ್ಮವೃದ್ಧಿಯಿಂದ ಜನರನ್ನು ಅಭಿವೃದ್ಧಿಗೊಳಿಸಬೇಕೆಂಬ ಇಚ್ಛೆಯುಳ್ಳವರಾಗಿದ್ದರು. ಆದರೆ ಅದಕ್ಕನುರೂಪವಾದ ಧರ್ಮವೃದ್ಧಿಯನ್ನು ಪಡೆದು ಜನರು ಅಭಿವೃದ್ಧಿ ಹೊಂದಲಿಲ್ಲ.

ಇದನ್ನು ಕುರಿತು ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು: ಸನಗೆ ಹೀಗೆನ್ನಿಸಿತು—ಬಹುಕಾಲದವರೆಗಿನ ರಾಜರಿಗೆ ಧರ್ಮವೃದ್ಧಿಯಿಂದ ಜನರನ್ನು ಅಭಿವೃದ್ಧಿಗೊಳಿಸಬೇಕೆಂಬ ಇಚ್ಛೆಯಿದ್ದರೂ ಏಕೆ ಅದಕ್ಕನುರೂಪವಾದ ಧರ್ಮವೃದ್ಧಿಯನ್ನು ಪಡೆದು ಜನರು ಅಭಿವೃದ್ಧಿ ಹೊಂದಲಿಲ್ಲ? ಧರ್ಮವೃದ್ಧಿಯಮೂಲಕ ಅವರನ್ನು ಹೇಗೆ ಉದ್ಧರಿಸುವುದು?—ಎಂದು.

ಇದನ್ನು ಕುರಿತು ದೇವಾನಾಂಪ್ರಿಯ ಪ್ರಿಯದರ್ಶಿರಾಜನು ಹೀಗೆ ಹೇಳುವನು: ನನಗೆ ಹೀಗೆನ್ನಿಸಿತು. ಧರ್ಮಶ್ರವಣ[2]ಗಳನ್ನು ಶ್ರವಣಮಾಡಿಸುತ್ತೇನೆ; ಧರ್ಮಾನುಶಾಸ್ತಿಗಳನ್ನು ಅನುಶಾಸನಮಾಡಿಸುತ್ತೇನೆ. ಜನರು ಇವುಗಳನ್ನು ಕೇಳುತ್ತಾ ಅನುಸರಿಸುತ್ತಾ ಉನ್ನತಿ ಪಡೆಯುತ್ತಾರೆ; ಧರ್ಮವೃದ್ಧಿ ಕೂಡ ಖಂಡಿತವಾಗಿಯೂ ಸಿದ್ಧಿಸುತ್ತದೆ.

ಇದಕ್ಕಾಗಿಯೇ ಧರ್ಮಶ್ರವಣಗಳನ್ನು ಶ್ರವಣಮಾಡಿಸಿದೇನೆ. ವಿಧವಿಧವಾದ ಧರ್ಮಾನುಶಾಸ್ತಿಗಳನ್ನೂ ಅನುಶಾಸನಮಾಡಿದ್ದೇನೆ. ಬಹುಜನರಲ್ಲಿ ನಿಯುಕ್ತರಾಗಿರುವ ಪುರುಷರು ಅವುಗಳನ್ನು ತಿಳಿಯಹೇಳುತ್ತಾರೆ; ಅವುಗಳನ್ನು ವಿಸ್ತಾರ ಮಾಡುತ್ತಾರೆ. ಬಹುಶತಸಹಸ್ರಪ್ರಾಣಿಗಳಲ್ಲಿ ನಿಯುಕ್ತರಾಗಿರುವ ರಾಜೂಕರು ಕೂಡ ನನ್ನಿಂದ ಹೀಗೆ ಆಜ್ಞಪ್ತರಾಗಿದಾರೆ: ಧರ್ಮಯುಕ್ತರಾದ ಜನರಿಗೆ ಹೀಗೆ ತಿಳಿಸತಕ್ಕದ್ದು—ಎಂದು.

ದೇವನಾಂಪ್ರಿಯ ಪ್ರಿಯದರ್ಶಿರಾಜನು ಹೀಗೆ ಹೇಳುವನು: ಇದಕ್ಕಾ

---

ಹೇಳುತ್ತಾರೆ. ಆದರೆ, ಹುಲ್ಷ್‌ರವರು, ವಿವಿಧ ಮತದವರನ್ನು ತಾನೇ ಎದುರುಗೊಂಡು ಅವರಿಗೆ ದಾನ ಪೂಜೆಗಳನ್ನು ಸಲ್ಲಿಸುವ ಧರ್ಮಯಾತ್ರೆಗಳನ್ನು ಕೊಂಡಾಡಿರುವ ಅಶೋಕನು ಇಲ್ಲಿ ಅಂತಹ ಯಾತ್ರೆಗಳನ್ನೇ ಪ್ರಸ್ತಾಪಿಸುತ್ತಿರುವನೆಂದು ಹೇಳುತ್ತಾರೆ.

[1] ಡೆಲ್ಲಿಟೋಪ್ರಾ—ಎಂಬ ಹೆಸರಿನ ಸ್ತಂಭದಲ್ಲಿ ಮಾತ್ರ ಈ ಶಾಸನ ಸಿಕ್ಕಿದೆ. ವಿಕ್ಕ ಸ್ತಂಭಗಳಲ್ಲಿ ಇದನ್ನು ಬರೆದಂತೆ ಕಾಣುವುದಿಲ್ಲ.

[2] ಧರ್ಮಶ್ರವಣ—ಧರ್ಮದ ವಿಷಯವಾಗಿ ಬೋಧನೆ.

ಗಿಯೇ ನನ್ನಿಂದ ಧರ್ಮಸ್ತಂಭಗಳನ್ನು ಮಾಡಿಸಲಾಗಿದೆ; ಧರ್ಮಮಹಾ ಮಾತ್ರರನ್ನು ನಿಯಮಿಸಲಾಗಿದೆ; ಧರ್ಮಲಿಪಿಗಳನ್ನು ಬರೆಸಲಾಗಿದೆ.

ದೇವನಾಂಪ್ರಿಯ ಪ್ರಿಯದರ್ಶಿರಾಜನು ಹೀಗೆ ಹೇಳುವನು: ಮಾರ್ಗಗಳಲ್ಲಿ ಪಶುಗಳಿಗೆ ಮತ್ತು ಮನುಷ್ಯರಿಗೆ ನೆರಳಿಗೋಸ್ಕರ ನ್ಯಗ್ರೋಧ ವೃಕ್ಷಗಳನ್ನು ನೆಡಿಸಲಾಗಿದೆ; ಮಾವಿನ ತೋಪುಗಳನ್ನು ನೆಡಿಸಲಾಗಿದೆ. ಪ್ರತಿ ಅರ್ಧಕೋಶ[1]ದಲ್ಲೂ ಬಾವಿಗಳನ್ನು ತೋಡಿಸಲಾಗಿದೆ. ಛತ್ರಗಳನ್ನು ಕಟ್ಟಿಸಲಾಗಿದೆ. ಪಶುಗಳ ಮತ್ತು ಮನುಷ್ಯರ ಉಪಯೋಗಕ್ಕಾಗಿ ಅಲ್ಲಲ್ಲಿ ಅರವಟ್ಟಿಗೆಗಳನ್ನು ಇಡಿಸಲಾಗಿದೆ.

ಆದರೆ, ಇವುಗಳ ಉಪಯೋಗ ಕೇವಲ ಲಘುವಾದದ್ದು. ಹಿಂದಿನ ರಾಜರಿಂದಲೂ ನನ್ನಿಂದಲೂ ಸುಖವನ್ನು ಕೊಡುವ ವಿವಿಧ ಕಾರ್ಯಗಳು ನಡೆದು ಲೋಕ ಸುಖವಾಗಿ ಮಾಡಲ್ಪಟ್ಟಿವೆ. ಆದರೆ ಧರ್ಮದ ಮಾರ್ಗದಲ್ಲಿ ಜನರು ನಡೆಯುವಂತೆ ನಾನು ಹೀಗೆ ಮಾಡಿರುವೆನು.

ದೇವನಾಂಪ್ರಿಯ ಪ್ರಿಯದರ್ಶಿರಾಜನು ಹೀಗೆ ಹೇಳುವನು: ಬಹು ವಿಧದ ಕೆಲಸಗಳಿಗಾಗಿಯೂ ಬಹುವಾಗಿ ಅನುಗ್ರಹಮಾಡುವುದಕ್ಕಾಗಿಯೂ ಆ ನನ್ನ ಮಹಾಮಾತ್ರರು ಸಂನ್ಯಾಸಿಗಳಲ್ಲೂ ಗೃಹಸ್ಥರಲ್ಲೂ ಎಲ್ಲ ಮತದವರಲ್ಲೂ ವ್ಯಾಪಿಸಿರುವರು. ಸಂಘದ ಕೆಲಸಕಾರ್ಯಗಳಲ್ಲೂ ವ್ಯಾಪಿಸಬೇಕೆಂದು ಅವರು ನನ್ನಿಂದ ಆಜ್ಞಪ್ತರಾಗಿದಾರೆ. ಬ್ರಾಹ್ಮಣರಲ್ಲೂ ಆಜೀವಿಕರಲ್ಲೂ ವ್ಯಾಪಿಸಬೇಕೆಂದು ಅವರು ನನ್ನಿಂದ ಆಜ್ಞಪ್ತರಾಗಿದಾರೆ. ನಿರ್ಗ್ರಂಥರಲ್ಲೂ ವ್ಯಾಪಿಸಬೇಕೆಂದು ಅವರಿಗೆ ಆಜ್ಞೆಮಾಡಿದೇನೆ. ನಾನಾ ಮತದವರಲ್ಲೂ ವ್ಯಾಪಿಸಬೇಕೆಂದು ನಾನು ಆಜ್ಞೆಮಾಡಿದೇನೆ.

ಇಂತಹವರಿಗೆ ಇಂತಹ ಮಹಾಮಾತ್ರರು ಎಂದಿತ್ತು. ಆದರೆ, ನನ್ನ ಧರ್ಮ ಮಹಾಮಾತ್ರರು ಇವರಲ್ಲೂ ಇತರ ಎಲ್ಲಾ ಮತದವರಲ್ಲೂ ವ್ಯಾಪಿಸಿರುವರು.

ದೇವನಾಂಪ್ರಿಯ ಪ್ರಿಯದರ್ಶಿರಾಜನು ಹೀಗೆ ಹೇಳುವನು: ಇವರೂ ಇತರ ಅನೇಕ ಮುಖ್ಯರೂ ನನ್ನ ಮತ್ತು ದೇವಿಯರ ದಾನಗಳನ್ನು ವಿತರಣ ಮಾಡುತ್ತಿರುವರು. ಇಲ್ಲೂ ಪ್ರಾಂತಗಳಲ್ಲೂ ಇರುವ ಅವರೋಧಗಳಲ್ಲೂ ಅವರು

---

[1] **ಅರ್ಧಕೋಶ**—ಕೋಶವೆಂದರೆ ೮೦೦೦ ಹಸ್ತಗಳು, ಅಂದರೆ ೪೦೦೦ ಗಜ, ಅಂದರೆ ಸುಮಾರು ಎರಡೂಕಾಲು ಮೈಲಿ. ಆದ್ದರಿಂದ ಸುಮಾರು ಒಂದು ಮೈಲಿ ಅಂತರದಲ್ಲೇ ಅಶೋಕನು ಪಥಿಕರ ಅನುಕೂಲಕ್ಕಾಗಿ ಬಾವಿಗಳನ್ನು ತೋಡಿಸಿದನೆಂದು ಗೊತ್ತಾಗುತ್ತದೆ. ಚಂದ್ರಗುಪ್ತನ ಕಾಲದಲ್ಲಿ ಹತ್ತು 'ಸ್ಟೇಡಿಯಾ'ಗಳಿಗೊಂದರಂತೆ, ಅಂದರೆ, ೨೦೨೨ತ್ತಿ ಗಜಕ್ಕೊಂದರಂತೆ, ಅಂದರೆ, ಸುಮಾರು ಅರ್ಧಕೋಶಕ್ಕೊಂದರಂತೆ, ದೂರವನ್ನು ತಿಳಿಸುವ ಕಲ್ಲುಗಳನ್ನು ನೆಟ್ಟಿದ್ದರೆಂದು 'ಸ್ಟ್ರಾಬೊ' ಎಂಬ ಯವನ ಗ್ರಂಥಕರ್ತನು ಹೇಳುತ್ತಾನೆ.

ಇಂತಹ ತುಷ್ಟಿದಾಯಕವಾದ ಕೆಲಸಕಾರ್ಯಗಳನ್ನು ನಡಸುತ್ತಿರುವರು. ಧರ್ಮಾವದಾನ ಮತ್ತು ಧರ್ಮಪ್ರತಿಪತ್ತಿಯ ಅಭಿವೃದ್ಧಿಗಾಗಿ ಅವರು ನನ್ನ ಕುಮಾರರ ಹಾಗೂ ಇತರ ದೇವೀಕುಮಾರರ[1] ದಾನಗಳನ್ನು ವಿತರಣಮಾಡು ತ್ತಿರುವರು. ಧರ್ಮಾವದಾನ ಹಾಗೂ ಧರ್ಮಪ್ರತಿಪತ್ತಿ ಅಂದರೆ ಇವು: ದಯೆ ದಾನ ಸತ್ಯ ಶುಚಿ ಮಾರ್ದವ ಸಾಧುತೆ. ಇವುಗಳಿಂದ ಲೋಕ ಅಭಿವೃದ್ಧಿ ಹೊಂದುತ್ತದೆ.

ದೇವನಾಂಪ್ರಿಯ ಪ್ರಿಯದರ್ಶಿ ರಾಜನು ಹೀಗೆ ಹೇಳುವನು: ನಾನು ಏನೇನು ಸಾಧವಾದದ್ದನ್ನು ಮಾಡಿರುವೆನೋ ಅದನ್ನು ಲೋಕ ಅನುಸರಿಸಿದೆ; ಮತ್ತು, ಅನುಸರಿಸುತ್ತದೆ. ಎಂದರೆ, ಮಾತಾಪಿತೃಗಳ ಶುಶ್ರೂಷೆ, ಗುರು ಶುಶ್ರೂಷೆ, ಹಿರಿಯರಲ್ಲಿ ಗೌರವ, ಬ್ರಾಹ್ಮಣ ಶ್ರಮಣರು ಬಡವರು ನೊಂದವರು ಇವರಲ್ಲಿ, ದಾಸರು ಭೃತ್ಯರು ಇವರಲ್ಲಿ, ಸಂಪ್ರತಿಪತ್ತಿ—ಇವು ಅಭಿವೃದ್ಧಿ ಹೊಂದಿವೆ ಮತ್ತು ಹೊಂದುತ್ತವೆ.

ದೇವಾನಾಂಪ್ರಿಯ ಪ್ರಿಯದರ್ಶಿರಾಜನು ಹೀಗೆ ಹೇಳುವನು: ಮನುಷ್ಯರಲ್ಲಿ ಈ ಧರ್ಮಬುದ್ಧಿ ಅಭಿವೃದ್ಧಿಯಾದದ್ದು ಎರಡು ಕಾರಣಗಳಿಂದ, ಧರ್ಮನಿಯಮದಿಂದ ಮತ್ತು ನಿಧ್ಯಪ್ತಿಯಿಂದ. ಇವೆರಡರಲ್ಲಿ ಧರ್ಮನಿಯಮ ಲಘುವಾದದ್ದು, ನಿಧ್ಯಪ್ತಿಯೇ ಹೆಚ್ಚಿನದು. ಧರ್ಮ ನಿಯಮವೆಂದರೆ, ಇಂತಿಂತಹ ಪ್ರಾಣಿಗಳು ಅವಧ್ಯವೆಂದು ನನ್ನಿಂದ ಮಾಡಲಾಗಿರುವುದು, ಹಾಗೆಯೇ ನನ್ನಿಂದ ಮಾಡಲಾಗಿರುವ ಬಹುವಿಧದ ನಿಯಮಗಳು. ನಿಧ್ಯಪ್ತಿ ಎಂದರೆ ಪ್ರಾಣಿಗಳ ವಿಷಯದಲ್ಲಿ ಅಹಿಂಸೆ, ಪ್ರಾಣಿಗಳನ್ನು ಕೊಲ್ಲದಿರುವುದು, ಇವು ಗಳಿಂದ ಧರ್ಮವೃದ್ಧಿಯಾಗುತ್ತದೆ ಎಂಬ ಸಂಕಲ್ಪ.

ಇದನ್ನು ಕುರಿತು ದೇವಾನಾಂಪ್ರಿಯನು ಹೀಗೆ ಹೇಳುವನು: ಎಲ್ಲಿ ಶಿಲಾಸ್ತಂಭಗಳಿವೆಯೋ ಎಲ್ಲಿ ಶಿಲಾಫಲಕಗಳಿವೆಯೋ ಅಲ್ಲಿ, ಇದು ಚಿರಸ್ಥಾಯಿ ಯಾಗಿ ನಿಲ್ಲುವಂತೆ, ಈ ಧರ್ಮಲಿಪಿಯನ್ನು ಬರೆಸತಕ್ಕದ್ದು.

ಇದಕ್ಕಾಗಿಯೇ ಇದನ್ನು ಮಾಡಲಾಗಿದೆ: ನನ್ನ ಪುತ್ರ ಪೌತ್ರರಿರುವ ತನಕ ಚಂದ್ರಸೂರ್ಯರಿರುವ ತನಕ ಇದನ್ನು ಜನರು ಅನುಸರಿಸಲಿ ಎಂದು. ಇದನ್ನನುಸರಿಸಿದರೆ ಅವರು ಇಹವನ್ನೂ ಪರವನ್ನೂ ಪಡೆಯುವರು. ಅಭಿಷಿಕ್ತ ನಾಗಿ ಇಪ್ಪತ್ತೇಳು ವರ್ಷಗಳಾದಾಗ ಈ ಧರ್ಮಲಿಪಿಯನ್ನು ಬರೆಸಿದೆನು.

---

[1] ದೇವೀಕುಮಾರರು—ಇವರು ಅಶೋಕನ ದೇವಿಯರ ಕುಮಾರರಲ್ಲ; ಬಿಂದು ಸಾರನ ರಾಣಿಯರ ಕುಮಾರರಾಗಿ ಅಶೋಕನ ಅಣ್ಣತಮ್ಮಂದಿರಾಗಿರಬೇಕು, ಎಂದು ಬ್ಯೂಲರ್‌ರವರು ಹೇಳುತ್ತಾರೆ.

# ೧೨. ಬಿಡಿ ಶಿಲಾಶಾಸನಗಳು

## ೧[1]

ದೇವಾನಾಂಪ್ರಿಯನು ಹೀಗೆ ಹೇಳುತ್ತಾನೆ: ನಾನು ಎರಡೂವರೆ ವರ್ಷಗಳಿಗಿಂತ ಹೆಚ್ಚು ಕಾಲ ಪ್ರಕಾಶದಲ್ಲೇ ಶಾಕ್ಯನಾಗಿದ್ದೆ.[2] ಆದರೆ, ಅಷ್ಟು ಚೆನ್ನಾಗಿ ಪರಾಕ್ರಮದಿಂದ ಪ್ರಯತ್ನಿಸಲಿಲ್ಲ. ಆದರೆ, ಈಗ, ಒಂದು ಸಂವತ್ಸರಕ್ಕಿಂತ ಹೆಚ್ಚು ಕಾಲ ಸಂಘವನ್ನು ಪ್ರವೇಶಿಸಿ[3] ಚೆನ್ನಾಗಿ ಪ್ರಯತ್ನಿಸಿರುವೆನು. ಈ ಕಾಲದಲ್ಲಿ ಜಂಬೂದ್ವೀಪದ ಜನರು ದೇವರುಗಳೊಂದಿಗೆ ಮಿಶ್ರರಾಗದಿದ್ದವರೆಲ್ಲರೂ ದೇವರುಗಳೊಂದಿಗೆ ಮಿಶ್ರರಾದರು.[4] ಇದು ಪರಾಕ್ರಮದ ಫಲ.

---

[1] ಇದೇ ಶಾಸನ ಸಹಸ್ರಾಂ, ಬೈರಾಟ್, ಮಸ್ಕಿ, ಎರ್ರಗುಡಿ, ಸಿದ್ದಾಪುರ, ಬ್ರಹ್ಮಗಿರಿ, ಜತಿಂಗರಾಮೇಶ್ವರ ಗವಿಮಠ ಪಾಲ್ಕಿಗುಂಡು ಎಂಬ ಸ್ಥಳಗಳಲ್ಲೂ ಇದೆ. ಯಾವ ಶಿಲಾಸ್ತಂಭದ ಮೇಲೂ ಇದು ಸಿಕ್ಕಿಲ್ಲ.

ಬ್ರಹ್ಮಗಿರಿ, ಸಿದ್ದಾಪುರ, ಜತಿಂಗರಾಮೇಶ್ವರ—ಶಾಸನಗಳಲ್ಲಿ, "ಸುವರ್ಣಗಿರೇಃ ಆರ್ಯಪುತ್ರಸ್ಯ ಮಹಾಮಾತ್ರಾನಾಂ ಚ ವಚನೇನ ಇಸಿಲಸ್ಯ ಮಹಾಮಾತ್ರಾನಾಂ ಆರೋಗ್ಯಂ ವಕ್ತವ್ಯ ಏವಂವಕ್ತವ್ಯಾಃ" ಎಂಬ ಅರ್ಥ ಇದೆ. ಮಸ್ಕಿಯ ಹತ್ತಿರ ಚಿನ್ನದ ಗಣಿಗಳಿದ್ದುವಾದ್ದರಿಂದ, ಅದೇ ಅಶೋಕನ ದಕ್ಷಿಣಾಪಥದ ರಾಜಧಾನಿ ಸುವರ್ಣಗಿರಿಯಾಗಿರಬೇಕೆಂದು ತೋರುತ್ತದೆ. ಇಸಿಲಪಟ್ಟಣ ಎಂಬುದು ಸಿದ್ದಾಪುರದ ಹತ್ತಿರವೇ ಇದ್ದ ಒಂದು ನಗರವೆಂದೂ, ಅದರ ಅವಶೇಷಗಳನ್ನು ಈಗಲೂ ಗುರುತಿಸಿ ಭೂಶೋಧನೆಯ ಕೆಲಸವನ್ನು ಕೈಕೊಂಡಿರುವ ಮೈಸೂರು ಪ್ರಾಕ್ತನ ಸಂಶೋಧನಾ ಶಾಖೆಯವರು ಹೇಳುತ್ತಾರೆ. ಮಸ್ಕಿ ಶಾಸನದಲ್ಲಿ, "ದೇವಾನಂ ಪಿಯಸ ಅಸೋಕಸ" ಎಂದಿದೆ.

[2] "ಪ್ರಕಾಶ ಶಕೆ" ಎಂದು ರೂಪನಾಥದಲ್ಲೂ, 'ಬುಧಶಕೆ' ಎಂದು ಮಸ್ಕಿಯಲ್ಲೂ, 'ಉಪಾಸಕೆ' ಎಂದು ಇತರಕಡೆಗಳಲ್ಲೂ ಬರೆದಿದೆ.

[3] 'ಸಂಘಂ ಉಪಗತೆ' ಸಂಘವನ್ನು ಪ್ರವೇಶಿಸಿ "ಅಂದರೆ, 'ಭಿಕ್ಷುಗತಿಕ' ನಾಗಿ, ಎಂದು ಭಂಡಾರಕರ್ ಅವರು ಹೇಳುತ್ತಾರೆ. ಕೆಲಕಾಲ ಭಿಕ್ಷುಗಳೊಂದಿಗೆ ವಿಹಾರಗಳಲ್ಲಿದ್ದು ಮನೋಬುದ್ಧಿಗಳನ್ನು ಪರಿಷ್ಕರಿಸಿ ಅನಂತರ ರಾಜಕಾರ್ಯದಲ್ಲೇ ನಿರತನಾಗಿರಬೇಕೆಂದೂ ತಿಳಿಯಬೇಕು.

[4] ದೇವರುಗಳೊಂದಿಗೆ ಮಿಶ್ರರಾಗದಿದ್ದ ಜನರೆಂದರೆ ಅರಣ್ಯವಾಸಿಗಳಾದ ಅನಾಗರಿಕ ಜನರೆಂದು ಥಾಮಸ್‌ರವರು ಕೇಂಬ್ರಿಡ್ಜ್ ಇಂಡಿಯಾ ಚರಿತ್ರೆಯಲ್ಲಿ ಅಭಿಪ್ರಾಯಪಡುತ್ತಾರೆ. ಅನೇಕ ದೇವತೆಗಳನ್ನು ಆರಾಧಿಸುತ್ತಾ, ಆ ದೇವತೆಗಳು ಮಿಶ್ರವಾಗದಿದ್ದಕಾರಣ, ಪರಸ್ಪರ ಧರ್ಮದ್ವೇಷದಿಂದ ಕಾದಾಡುತ್ತಿದ್ದ ವಿವಿಧ ಜನಾಂಗಗಳನ್ನು ಒಟ್ಟುಸೇರಿಸಿ ಅವರಲ್ಲಿ ಸ್ನೇಹಸೌಹಾರ್ದಗಳನ್ನು ಸ್ಥಾಪಿಸಿದೆನು ಎಂಬುದೇ ಇಲ್ಲಿ ಅಶೋಕನ ಅಭಿಪ್ರಾಯ ಎಂದು ಮುಖರ್ಜಿಯವರು ಅಭಿಪ್ರಾಯಪಡುತ್ತಾರೆ. ದೇವತೆಗಳೂ ಮನುಷ್ಯರೂ ಮಿಶ್ರರಾಗಿರಲಿಲ್ಲ,

ಮಹಾತ್ಮರಿಂದ ಮಾತ್ರ ಇದು ಸಾಧ್ಯ ಎಂದು ತಿಳಿಯಬೇಡಿ. ಕ್ಷುದ್ರ ಜನರೂ ಕೂಡ ತಮ್ಮ ಪರಾಕ್ರಮದಿಂದ ವಿಪುಲವಾದ ಸ್ವರ್ಗವನ್ನು ಪಡೆಯಬಹುದು. ಇದಕ್ಕಾಗಿಯೇ ಈ ಧರ್ಮಶ್ರವಣವನ್ನು ಮಾಡಿರುವುದು: ಕ್ಷುದ್ರರೂ ಮಹಾತ್ಮರೂ ಎಲ್ಲರೂ ಪರಾಕ್ರಮಿಸಲಿ, ಎಂದು. ನನ್ನ ನೆರೆಯವರು ಕೂಡ ಇದನ್ನು ತಿಳಿಯಲಿ, ಎಂದು. ಪರಾಕ್ರಮ ಎಂದರೆ, ಇದು. ಚಿರಸ್ಥಾಯಿಯಾಗಿ ನಿಲ್ಲಲಿ, ಎಂದು. ಇದು ವರ್ಧಿಸುತ್ತದೆ, ವಿಪುಲವಾಗಿ ವರ್ಧಿಸುತ್ತದೆ, ಈಗಿನದಕ್ಕಿಂತ ಒಂದೂವರೆಯಷ್ಟು ವರ್ಧಿಸುತ್ತದೆ. ಇದನ್ನು ಪರ್ವತಗಳಲ್ಲಿ ಬರೆಸಿ. ಇಲ್ಲಿ ಶಿಲಾಸ್ತಂಭಗಳು ಎಲ್ಲಿ ಇವೆಯೋ, ಆ ಶಿಲಾಸ್ತಂಭಗಳಮೇಲೂ ಬರೆಸಿ. ಇದನ್ನನುಸರಿಸಿ ನಿಮ್ಮ ಆಹಾರದಲ್ಲಿ ನಿಮ್ಮವರಿಂದ ತಿಳಿಸಿ. ಪ್ರವಾಸದಲ್ಲಿ ಈ ಶ್ರಾವಣವನ್ನು ಮಾಡಲಾಯಿತು. ೨೫೬[1] ರಾತ್ರಿ ಪ್ರವಾಸ.

## ೨[2]

ದೇವಾನಾಂಪ್ರಿಯನು ಹೇಳುವನು: ತಾಯಿತಂದೆಯರಿಗೆ ಶುಶ್ರೂಷೆ ಮಾಡತಕ್ಕದ್ದು; ಹಾಗೆಯೇ ಗುರುಗಳಿಗೂ. ಪ್ರಜೆಗಳಲ್ಲಿ ದಯೆಯಿಡತಕ್ಕದ್ದು.

---

ಅಂದರೆ, ಮನುಷ್ಯರಲ್ಲಿ ಧರ್ಮಬುದ್ಧಿ ತೀರ ಕಡಿಮೆಯಾಗಿತ್ತು, ಅಶೋಕನ ಧರ್ಮಬೋಧೆಯಿಂದಲೂ ಉದಾಹರಣೆಯಿಂದಲೂ ಧರ್ಮಬುದ್ಧಿ ಬೆಳೆದು ಮನುಷ್ಯರೂ ದೇವತೆಗಳೂ ಪರಸ್ಪರ ಮಿಳಿತವಾದರು, ಎಂಬುದೇ ಇದರ ಅರ್ಥ ಎಂದು ಸ್ಮಿತ್‌ರವರು ಹೇಳುತ್ತಾರೆ. ದೇವಲೋಕದಲ್ಲಿರುವ ದೇವತೆಗಳನ್ನು ಮನುಷ್ಯರು ಯಜ್ಞಹೋಮಾದಿಗಳಿಂದ ತೃಪ್ತಿಗೊಳಿಸಿದ್ದರಿಂದ ಮೊದಲು ಭೂಲೋಕದಲ್ಲೇ ಮಾನವರೊಂದಿಗಿದ್ದು ಅನಂತರ ಸ್ವರ್ಗಕ್ಕೆ ತೆರಳಿದ ದೇವತೆಗಳು ಪುನಃ ಮನುಷ್ಯರೊಡನೆ ಮಿಶ್ರರಾದರು ಎಂದು ತಿಳಿಯಬೇಕೆಂದು ರಾಮಚಂದ್ರದೀಕ್ಷಿತರೆಂಬುವರು ವಾದಿಸುತ್ತಾರೆ. ಆದರೆ, ಶಾಸನದ ಒಟ್ಟು ಅಭಿಪ್ರಾಯದ ದೃಷ್ಟಿಯಿಂದಲೂ, ಇತರ ಶಾಸನಗಳಲ್ಲಿ ಕಂಡುಬರುವ ಅಭಿಪ್ರಾಯಗಳ ದೃಷ್ಟಿಯಿಂದಲೂ, ಸ್ಮಿತ್‌ರವರ ಊಹೆಯೇ ಸಮಂಜಸವಾಗಿದೆ.

ಸಹಸ್ರಾಂ ಎಂಬಲ್ಲಿ ಈ ಶಾಸನವನ್ನು ಬರೆದಿದೆ. ಅಲ್ಲಿ ಮಾತ್ರ ಈ ವಾಕ್ಯವಿದೆ. ಶಿಲಾಸ್ತಂಭಗಳನ್ನು ಅಶೋಕನ ಹಿಂದಿನ ರಾಜರೂ ನಿಲ್ಲಿಸುತ್ತಿದ್ದರೆಂಬುದಕ್ಕೆ ಇದೊಂದು ನಿದರ್ಶನ.

[1] ೨೫೬-ಈ ಅಂಕಿ ಶಾಸನಶಾಸ್ತ್ರಜ್ಞರಿಗೆ ತುಂಬಾ ತೊಡಕಾಗಿ ಕುಳಿತಿದೆ. ಬ್ಯೂಲರ್‌ರವರು "ಬುದ್ಧನ ಪರಿನಿರ್ವಾಣವಾದನಂತರ ೨೫೬ ವರ್ಷಗಳು" ಎಂದು ಅದಕ್ಕೆ ಅರ್ಥ ಕೊಟ್ಟರು. ಆದರೆ, "ರಾತ್ರಿ" ಎಂಬ ಪದವನ್ನೂ ಸೇರಿಸಿ ಬರೆದಿರುವರಾದ್ದರಿಂದ, ಅಶೋಕನು ರಾಜಧಾನಿಯಿಂದ ಪ್ರವಾಸ ಹೊರಟು, ೨೫೬ ರಾತ್ರಿಗಳು ಕಳೆದ ದಿನ ಇದನ್ನು ಪ್ರಕಟಣೆಗಾಗಿ ಕೊಟ್ಟನೆಂಬ ಅರ್ಥವನ್ನೇ ಥಾಮಸ್‌ರವರು ಹೇಳಿರುತ್ತಾರೆ.

[2] ಈ ಶಾಸನ ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗರಾಮೇಶ್ವರ, ಎರ್ರಗುಡಿ ಎಂಬಲ್ಲಿ, ಮಾತ್ರ ದೊರೆತಿದೆ.

ಸತ್ಯವನ್ನೇ ಆಡತಕ್ಕದ್ದು; ಇಂತಹ ಧರ್ಮಗುಣಗಳನ್ನೇ ಅವಲಂಬಿಸತಕ್ಕದ್ದು. ಶಿಷ್ಯರು ಗುರುಗಳನ್ನು ಗೌರವಿಸಬೇಕು. ಹಾಗೆಯೇ ಜ್ಞಾತಿಗಳನ್ನೂ. ಇದೇ ಪುರಾಣವಾದ[1] ಪ್ರಕೃತಿ. ಇದು ದೀರ್ಘಾಯುಸ್ಸನ್ನು ಕೊಡುತ್ತದೆ. ಇದನ್ನೇ ಮಾಡತಕ್ಕದ್ದು. ಇದೇ ದೇವಾನಾಂಪ್ರಿಯನ ಧರ್ಮ. ಲಿಪಿಕಾರ ಚಪಡ[2]ನಿಂದ ಬರೆಯಲ್ಪಟ್ಟದ್ದು.

## ಭಬ್ರು ಶಾಸನ

ಮಗಧರಾಜ[3]ನಾದ ಪ್ರಿಯದರ್ಶಿ, ಸಂಘವನ್ನು ಅಭಿವಂದಿಸಿ ಅವರ ಆರೋಗ್ಯ ಸುಖಗಳನ್ನು ಬಯಸುತ್ತಾನೆ.

ಪೂಜ್ಯರೇ! ಬುದ್ಧನಲ್ಲೂ ಧರ್ಮದಲ್ಲೂ ಸಂಘದಲ್ಲೂ[4] ನನಗೆ ಎಷ್ಟು ಗೌರವ, ಎಷ್ಟು ಪ್ರಸಾದ ಇದೆ ಎಂಬುದನ್ನು ನೀವು ಬಲ್ಲಿರಿ.

ಪೂಜ್ಯರೇ! ಭಗವಾನ್ ಬುದ್ಧನ ಭಾಷಿತಗಳೆಲ್ಲವೂ ಸುಭಾಷಿತಗಳು. ಆದರೂ ಪೂಜ್ಯರೇ! ಚಿರಸ್ಥಾಯಿಯಾದ ಸದ್ಧರ್ಮವೆಂದು ನನಗೆ ತೋರುವುದನ್ನು ಅರಿಕೆಮಾಡಿಕೊಳ್ಳುತ್ತೇನೆ.

ಪೂಜ್ಯರೇ! ಈ ಧರ್ಮ ಪರ್ಯಾಯಗಳು[5]—ವಿನಯ ಸಮುಕಸ, ಅಳಿಯವಸಾನಿ, ಅನಾಗತ ಭಯಾನಿ, ಮುನಿಗಾತಾ, ಮೌನಯಸೂತೆ, ಉಪತಿಸಪಸಿನೆ,

---

[1] "ಮಾತೃದೇವೋಭವ, ಪಿತೃದೇವೋಭವ" ಎಂದು ಮುಂತಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುವುದನ್ನೇ ಅಶೋಕನು ಪುರಾಣವಾದ ಧರ್ಮ ಎಂದು ಹೇಳುತ್ತಿರಬಹುದು.

[2] ಈ ವಾಕ್ಯವೊಂದನ್ನು ಮಾತ್ರ ವಾಯವ್ಯ ಪ್ರಾಂತದ ಖರೋಷ್ಠೀ ಲಿಪಿಯಲ್ಲಿ ಬರೆದಿದೆ. ಚಪಡ ಎಂಬುವನು ಪ್ರಸಿದ್ಧ ಲಿಪಿಕಾರನಾಗಿದ್ದಿರಬೇಕು. ಆತ ಬಹುಶಃ ವಾಯವ್ಯಪ್ರಾಂತದವನಾಗಿದ್ದು ಈ ಒಂದು ವಾಕ್ಯವನ್ನು ಮಾತ್ರ ತನ್ನ ಸ್ವಂತ ಲಿಪಿಯಲ್ಲೇ ಬರೆದಿರಬೇಕೆಂದು ತೋರುತ್ತದೆ.

[3] ಮಗಧ ರಾಜನೆಂದು ಹೇಳಿರುವುದು ಇದೊಂದೇ ಶಾಸನದಲ್ಲಿ.

[4] ಬುದ್ಧ ಧರ್ಮ ಸಂಘ ಎಂಬ ತ್ರಿರತ್ನಗಳನ್ನೂ ಹೀಗೆ ಇಲ್ಲಿ ಸ್ಪಷ್ಟವಾಗಿ ಪೂಜ್ಯಭಾವನೆಯಿಂದ ಸೂಚಿಸಿರುವುದರಿಂದ 'ಸಂಘಂ ಉಪಗತೆ' ಮುಂತಾದ ಇತರ ಶಾಸನಗಳಲ್ಲಿನ ಮಾತುಗಳ ಅರ್ಥವೂ ಸ್ಪಷ್ಟವಾಗುತ್ತದೆ.

[5] ಈ ಧರ್ಮಪರ್ಯಾಯಗಳು ಯಾವಯಾವುವು ಎಂಬುದರ ವಿಷಯದಲ್ಲಿ ತುಂಬಾ ಭಿನ್ನಾಭಿಪ್ರಾಯಗಳಿವೆ. ಅನಾಗತಭಯಾನಿ (ಅಂಗುತ್ತರನಿಕಾಯ ೩. ಸುತ್ತ ೭೮) ಮುನಿಗಾಥಾ (ಸುತ್ತನಿಪಾತ ೧, ೧೨) ಮೋನೆಯಸೂತೆ (ಸುತ್ತನಿಪಾತ ೩, ೧೧) ಸುಳ್ಳು, ಹೇಳುವುದರ ವಿಷಯದ ವ್ಯಾಖ್ಯಾನದಿಂದ ಪ್ರಾರಂಭವಾಗುವ ಲಾಘುಲೋವಾದ (ಮಜ್ಝಿಮನಿಕಾಯ ೧)—ಈ ನಾಲ್ಕು ಪರ್ಯಾಯಗಳನ್ನು ಅಶೋಕನು ನಿರ್ವಿವಾದವಾಗಿ ಸೂಚಿಸಿದಾನೆ. ಆದರೆ, ವಿನಯ ಸಮುಕಸ—(ಮುಖ್ಯವಾದ ವಿನಯ) ಅಂದರೆ ಯಾವುದು?

ಲಘುಲೋವಾದೆ ಮುಸಾವಾದಂ ಅಧಿಗಚ್ಛೈ—ಪೂಜ್ಯರೇ ! ಭಗವಾನ್ ಬುದ್ಧನ ಭಾಷಿತಗಳಾದ ಇವುಗಳನ್ನು ಭಿಕ್ಷುಗಳೂ ಭಿಕ್ಷುಣಿಯರೂ ಆಗಾಗ ಕೇಳಬೇಕು ; ಮನಸ್ಸಿಗೆ ತಂದುಕೊಳ್ಳಬೇಕು ; ಹಾಗೆಯೇ ಉಪಾಸಕರೂ ಉಪಾಸಿಕೆಯರೂ ಕೂಡ. ಪೂಜ್ಯರೇ ! ಇದಕ್ಕಾಗಿಯೇ ಇದನ್ನು ನಾನು ಬರೆಸಿರುವೆನು : ನನ್ನ ಅಭಿಮತವನ್ನು ಅವರು ತಿಳಿಯಲಿ, ಎಂದು.

---

ಎಡ್ಮಂಡ್ಸ್ ಎಂಬುವರು (*JRAS* ೧೯೧೩, ೩೮೭) ಇಲ್ಲಿ ಅಶೋಕನು ಬುದ್ಧದೇವನ ಪ್ರಥಮ ಧರ್ಮಪ್ರವರ್ತನದ ಪ್ರಾಮುಖ್ಯತೆಯನ್ನೇ ಸಾರುತ್ತಿದಾನೆ" ಎನ್ನುತ್ತಾರೆ. ಆರ್ಯ ವಿನಯವನ್ನು ವಿವರಿಸುವುದಕ್ಕಾಗಿಯೇ ಹೊರಟಿರುವ 'ಸಿಗಾಲೊವಾದ ಸುತ್ತಾಂತ'ವೇ ಅಶೋಕನ 'ವಿನಯಸಮುಕಸೆ' ಎಂದು ಬರುವಾರವರು ವಾದಿಸುತ್ತಾರೆ (*J.A.R.S.* ೧೯೧೫, ೮೦೯) 'ಅಳಿಯವಸಾನಿ' ಅಂದರೆ, ಆರ್ಯರು ವಾಸಿಸಬೇಕಾದ ರೀತಿಯನ್ನು ವಿವರಿಸುವ ಭಾಗ (ದೀಘನಿಕಾಯ ೩, ೨೬೯) ಎಂದು ವೂಲ್‌ನರ್‌ರವರೂ ಆರ್ಯವಂಶಗಳು ಯಾವುವು ಎಂದು ವಿವರಿಸುವ ಭಾಗ (ಅಂಗುತ್ತರ ನಿಕಾಯ ೨) ಎಂದು ಹುಲ್ಟ್ಸ್‌ರವರೂ ಅಭಿಪ್ರಾಯಪಡುತ್ತಾರೆ. ಉಪತಿಸಪಸಿನೆ ಅಂದರೆ, ಉಪತಿಷ್ಯನ ಪ್ರಶ್ನೆ ಸಾರಿಪುತ್ತಸುತ್ತದಲ್ಲೂ ಬರುತ್ತದೆ, ವಿನಯ ೧, ೩೯, ೪೧ರಲ್ಲೂ ಬರುತ್ತದೆ. ಈ ಎಲ್ಲ ಧರ್ಮ ಪರ್ಯಾಯಗಳಲ್ಲೂ ಹೇಳಿರುವ ಮುಖ್ಯ ತತ್ವಗಳನ್ನು, ಅಂದರೆ, ಅಶೋಕನ ಅಭಿಮತದಂತೆ ಆಗಿನ ಬೌದ್ಧಧರ್ಮ ಗ್ರಂಥಗಳ ತಿರುಳೇನೆಂಬುದನ್ನು, ಎಲ್ಲ ಶಾಸನಗಳಲ್ಲೂ ಕಾಣಬಹುದು.

# ೧೩. ಬಿಡಿ ಸ್ತಂಭಶಾಸನಗಳು

## ದೇವಿಯ ಶಾಸನ

### (ಅಲಹಾಬಾದ್—ಕೌಶಾಂಬಿಸ್ತಂಭ)

ದೇವಾನಾಂಪ್ರಿಯನ ವಚನದಂತೆ ಎಲ್ಲೆಡೆಯ ಮಹಾಮಾತ್ರರಿಗೂ ಹೀಗೆ ಹೇಳತಕ್ಕದ್ದು :

ದ್ವಿತೀಯ ದೇವಿಯಿಂದ ದಾನಮಾಡಲ್ಪಟ್ಟ ಮಾವಿನ ತೋಪುಗಳು ಆರಾಮಗಳು ದಾನಗೃಹಗಳು ಇತರ ಇಂಥವುಗಳು, ಎಲ್ಲವನ್ನೂ ಆ ದೇವಿಯ ಹೆಸರಿನಲ್ಲಿ ಗಣಿಸತಕ್ಕದ್ದು.

ತೀವಲನ ತಾಯಾದ ಕಾರುವಾಕಿ[1] ದ್ವಿತೀಯ ದೇವಿಯ ಕೋರಿಕೆ ಇದು.

## ಸಾರನಾಥ ಶಾಸನ

ದೇವಾನಾಂಪ್ರಿಯ ... ಪಾಟಲೀಪುತ್ರ ... ಸಂಘವನ್ನು ಯಾರೂ ಭೇದಿಸ ಕೂಡದು. ಸಂಘವನ್ನು ಭೇದಿಸುವ ಭಿಕ್ಷುವಿಗಾಗಲಿ ಭಿಕ್ಷುಣಿಗಾಗಲಿ ಬಿಳಿ ಬಟ್ಟೆಯನ್ನುಡಿಸಿ ಅವರನ್ನು ಅನಾವಾಸಕ್ಕೆ ಕಳುಹಿಸತಕ್ಕದ್ದು. ದೇವಾನಾಂ ಪ್ರಿಯನು ಹೀಗೆ ಹೇಳುವನು: ಇದರ ಒಂದು ಲಿಪಿ ನಿಮ್ಮ ಸ್ಥಳದಲ್ಲಿ ನಿಕ್ಷೇಪ ವಾಗಿರಲಿ; ಇದರ ಇನ್ನೊಂದು ಲಿಪಿ ಉಪಾಸಕರ ಹತ್ತಿರವಿರಲಿ. ಈ ಶಾಸನ ದಲ್ಲಿ ವಿಶ್ವಾಸ ಹೆಚ್ಚುವುದಕ್ಕಾಗಿ ಉಪವಾಸದ ದಿನಗಳಲ್ಲಿ[2] ಉಪಾಸಕರು ಬಂದು ಸೇರಲಿ. ತಪ್ಪದೆ ಉಪವಾಸದ ದಿನಗಳಲ್ಲಿ ಪ್ರತಿ ಮಹಾಮಾತ್ರರೂ ಬಂದು ಈ ಶಾಸನವನ್ನು ತಿಳಿದು ಅದರಲ್ಲಿ ವಿಶ್ವಾಸವನ್ನು ಹೆಚ್ಚಿಸಿಕೊಳ್ಳಲಿ. ನಿಮ್ಮ ಆಹಾರದಲ್ಲೆಲ್ಲ ಇದರಂತೆ ಎಲ್ಲರಿಗೂ ತಿಳಿಸಿ. ಹಾಗೆಯೇ ಕೋಟೆ ವಿಷಯ[3]ಗಳಲ್ಲೂ ಇದರಂತೆ ತಿಳಿಸಲು ಕಳುಹಿಸಿ.

---

[1] "ಚಾರುವಾಕ್" ಎಂಬುದರಿಂದ ಆ ಹೆಸರು ಬಂದಿರಬೇಕು.

[2] ಉಪವಾಸದಿನಗಳು—ಶುಕ್ಲ ಪಕ್ಷದ ಅಷ್ಟಮಿ, ಚತುರ್ದಶಿ, ಹುಣ್ಣಿಮೆ, ಕೃಷ್ಣ ಪಕ್ಷದ ಅಷ್ಟಮಿ—ಈ ನಾಲ್ಕು ದಿನಗಳು

[3] ಕೋಟೆವಿಷಯವೆಂದರೆ—ಒಂದು ದುರ್ಗದ ಸುತ್ತ, ಅಲ್ಲಿಂದಲೇ ಆಳಲ್ಪಡುತ್ತಿದ್ದ ಪ್ರದೇಶ.

## ಸಾಂಚಿ ಸ್ತಂಭಶಾಸನ

. . . ನನ್ನ ಪುತ್ರಪೌತ್ರರಿರುವವರೆಗೂ ಚಂದ್ರಸೂರ್ಯರಿರುವವರೆಗೂ ಭಿಕ್ಷು ಸಂಘವೂ ಭಿಕ್ಷುಣೀ ಸಂಘವೂ ಸಮಗ್ರವಾಗಿರತಕ್ಕದ್ದು. ಸಂಘವನ್ನು ಭೇದಿಸುವ ಭಿಕ್ಷುವಿಗಾಗಲಿ ಭಿಕ್ಷುಣಿಗಾಗಲಿ ಬಿಳಿಯ ಬಟ್ಟೆಯನ್ನುಡಿಸಿ ಅವರನ್ನು ಅನಾವಾಸಸ್ಥಾನಕ್ಕೆ ಕಳುಹಿಸತಕ್ಕದ್ದು. ಸಂಘ ಸಮಗ್ರವಾಗಿ ಚಿರಸ್ಥಾಯಿಯಾಗಿರಬೇಕೆಂಬುದೇ ನನ್ನ ಇಚ್ಛೆ.

## ಲುಂಬಿನೀ ಸ್ತಂಭಶಾಸನ

ಅಭಿಷಿಕ್ತನಾಗಿ ಇಪ್ಪತ್ತು ವರ್ಷಗಳಾದಾಗ ದೇವಾನಾಂ ಪ್ರಿಯ ಪ್ರಿಯದರ್ಶಿ ರಾಜನು ಬುದ್ಧ ಶಾಕ್ಯಮುನಿ ಇಲ್ಲಿ ಜನಿಸಿದನೆಂದು ತಾನೇ ಇಲ್ಲಿಗೆ ಬಂದು ಆರಾಧಿಸಿದನು. ಭಗವಾನನು ಇಲ್ಲಿ ಜನಿಸಿದನೆಂದು ಒಂದು ಶಿಲಾವಿಕೃತ ಭಿತ್ತಿಕ[1]ವನ್ನು ಮಾಡಿಸಿದನು; ಶಿಲಾಸ್ತಂಭವನ್ನು ನಿಲ್ಲಿಸಿದನು. ಲುಂಬಿನೀ ಗ್ರಾಮವನ್ನು ಬಲಿಯಿಂದ ಬಿಡಿಸಿದನು. ಅಷ್ಟಭಾಗ[2]ಮಾತ್ರ ಸಾಕೆಂದನು.

---

[1] **ಶಿಲಾವಿಕೃತ**—"ಶಿಲಾವಿಗಡ" ಎಂಬ ಶಾಸನದ ಮಾತುಗಳಿಂದ ಬರುವಾರವರು "ಶಿಲಾವಿಕೃತವೆಂದರೆ, ಶಿಲಾಸ್ತಂಭದ ಮೇಲೆ ಅಶೋಕನು ಮಾಡಿಸಿ ನಿಲ್ಲಿಸಿದ, ಹ್ಯುಯೆನ್ ತ್ಸಾಂಗನು ಕಂಡು ಆನಂದಿಸಿದ, ಅಶ್ವದ ವಿಗ್ರಹ" ಎಂದೂ, ವಿಕೃತವಾದ, ಅಂದರೆ, ದೊಡ್ಡ ಶಾಲಭಿತ್ತಿಕಾ ಎಂದು ರಾಮಕೃಷ್ಣ ಭಂಡಾರ್‌ಕರ್‌ರವರೂ ಅಭಿಪ್ರಾಯಪಡುತ್ತಾರೆ. ಲುಂಬಿನೀಸ್ತಂಭದ ಹತ್ತಿರವೇ ಬುದ್ಧನ ಜನನವನ್ನು ಚಿತ್ರಿಸಿರುವ ಒಂದು ಶಿಲೆಯನ್ನು ಈಗಲೂ ಅಲ್ಲಿಯ ಜನರು ಆರಾಧಿಸುತ್ತಿರುವರೆಂದೂ, ಮಾಯಾದೇವಿ ಉದ್ಯಾನವನದಲ್ಲಿ ಅಶೋಕವೃಕ್ಷದ ಕೊಂಬೆಯನ್ನು ಹಿಡಿದು ನಿಂತಿರುವಂತೆಯೂ ಕಳವಳಗೊಂಡ ೩ ಸಖಿಯರು ಹತ್ತಿರವೇ ನಿಂತು ಶುಶ್ರೂಷಿಸುತ್ತಿರುವಂತೆಯೂ ಭಗವಾನನ ಅವತಾರವಾದಂತೆಯೂ. ಅದರಲ್ಲಿ ಚಿತ್ರಿಸಿರುವರೆಂದೂ ಪಿ. ಸಿ. ಮುಖರ್ಜಿಯವರು ವಿವರಿಸಿರುವರು (*ASR*, 26) ಅಶೋಕಾವದಾನದಲ್ಲಿ ಉಪಗುಪ್ತನು ಚಕ್ರವರ್ತಿಗಳನ್ನು ಲುಂಬಿನೀವನಕ್ಕೆ ಕರೆದೊಯ್ದಾಗ ಅವರು ಅಶೋಕನಿಗೆ ಭಗವಾನನು ಯಾವ ಮರದಡಿಯಲ್ಲಿ ಜನಿಸಿದನೋ ಆ ಮರವನ್ನೇ ತೋರಿಸಿದನೆಂದೂ, ಅಶೋಕನು ಅಲ್ಲಿ ಒಂದು ಗುಡಿಯನ್ನು ಕಟ್ಟಿಸಿದನೆಂದೂ ಒಂದು ಲಕ್ಷ ಸುವರ್ಣಗಳನ್ನು ದಾನಮಾಡಿದನೆಂದೂ ಹೇಳಿದೆ. ಆದ್ದರಿಂದ, ಶಿಲಾವಿಕೃತ ಎಂದು ಹೇಳುವ 'ಶಿಲಾವಿಗಡ'ವು ಇದೇ ಶಿಲಾವಿಗ್ರಹವಾಗಿರಬೇಕೆಂದು ರಾಧಾಕುಮುದ ಮುಖರ್ಜಿಯವರು ಹೇಳುತ್ತಾರೆ. ಬಲಿ, ಭಾಗ, ಮುಂತಾದ ಪದಗಳಿಗೆ ಕಂದಾಯವೆಂಬ ಸಾಮಾನ್ಯ ಅರ್ಥವಿತ್ತೆಂದು ಕೌಟಿಲ್ಯನಿಂದ ತಿಳಿಯುತ್ತದೆ.

[2] ಬ್ಯೂಲರ್ ರವರು 'ಅರ್ಥಭಾಗ' ಎಂದು ಓದಿ, ಅಶೋಕನು ಲುಂಬಿನೀ ಗ್ರಾಮವನ್ನು 'ತನ್ನ ಅರ್ಥದಲ್ಲಿ ಭಾಗಿಯಾಗಿಸಿದನು' ಅಂದರೆ, ಅಲ್ಲಿಯ ಜನರಿಗೆ ದಾನಮಾಡಿದನು. ಎಂದು ವ್ಯಾಖ್ಯಾನ ಮಾಡುತ್ತಾರೆ. ಆದರೆ, ಆಗಿನ ಕಾಲದಲ್ಲಿ ರಾಜಭಾಗವು

## ನಿಗಲಿಸಾಗರ ಸ್ತಂಭಶಾಸನ

ಅಭಿಷಿಕ್ತನಾಗಿ ಹದಿನಾಲ್ಕು ವರ್ಷಗಳಾದಾಗ ದೇವಾನಾಂಪ್ರಿಯ ಪ್ರಿಯದರ್ಶಿ ರಾಜನು ಕನಕಮುನಿ[1] ಬುದ್ಧನ ಸ್ತೂಪವನ್ನು ಇಮ್ಮಡಿಸಿದನು. ಅಭಿಷಿಕ್ತನಾಗಿ ಇಪ್ಪತ್ತು ವರ್ಷಗಳಾದಾಗ ತಾನೇ ಬಂದು ಆರಾಧಿಸಿ ಶಿಲಾಸ್ತಂಭವನ್ನು ನಿಲ್ಲಿಸಿದನು.

---

ನಾಲ್ಕರಲ್ಲೊಂದಾಗಿತ್ತೆಂದು ಮೆಗಾಸ್ತನೀಸ್ ಹೇಳುತ್ತಾನೆ. ಇತರ ಗ್ರಾಮಗಳಿಗೆ ನಾಲ್ಕರಲ್ಲೊಂದು ಭಾಗವಾದರೆ, ಲುಂಬಿನೀ ಗ್ರಾಮ ಎಂಟರಲ್ಲೊಂದು ಭಾಗ ಮಾತ್ರ ಕೊಟ್ಟರೆ ಸಾಕು ಎಂದು ಅಶೋಕನು ಆಜ್ಞಾಪಿಸುವುದು ಸಮಂಜಸವಾಗಿಯೇ ಇದೆ.

[1] ಇಪ್ಪತ್ತನಾಲ್ಕು ಬುದ್ಧರಲ್ಲಿ ೨೧ನೆಯ ಬುದ್ಧ. ಗೌತಮನ ಹಿಂದಿನ ಬುದ್ಧರನ್ನು ಆರಾಧಿಸುವುದು, ಅವರಿಗಾಗಿ ಸ್ತೂಪಗಳನ್ನು ಕಟ್ಟುವುದು, ಮುಂತಾದುವು ಅಶೋಕನ ಕಾಲದ ಹಿಂದೆಯೇ ವಾಡಿಕೆಯಲ್ಲಿತ್ತೆಂಬುದಕ್ಕೆ ಇದೊಂದು ನಿದರ್ಶನ. ಅಲ್ಲದೆ, ಕನಕಮುನಿಯ ಸ್ತೂಪವನ್ನು ಇಮ್ಮಡಿಸಿ ಅಶೋಕನು ತನ್ನ ವಿಶಾಲ ಧರ್ಮಬುದ್ಧಿಯನ್ನೂ ವ್ಯಕ್ತಪಡಿಸಿದಾನೆ.

# ಅಶೋಕ

ಕ್ರಿ.ಪೂ. ೩೨೭-೩೨೫ ಅಲೆಕ್ಸಾಂಡರನ ದಂಡಯಾತ್ರೆ ಹಿಂದುಸ್ತಾನಕ್ಕೆ ಬಂದದ್ದು.

೩೨೫ 'ಸಂದ್ರಕೊಟ್ಟಸ್' ಅವನನ್ನು ಸಂದರ್ಶಿಸಿದ್ದು.

೩೨೫ ಕ್ಷಾತ್ರಪ ಫಿಲಿಪ್‌ನ ಕೊಲೆ.

೩೨೩ ಅಲೆಕ್ಸಾಂಡರನ ಮರಣ

೩೨೩-೨೨ ಯವನ ಕ್ಷಾತ್ರಪರ ಅಧಃಪತನ.

೩೨೧ ಚಂದ್ರಗುಪ್ತ ಮೌರ್ಯನ ಸಿಂಹಾಸನಾರೋಹಣ.

೩೧೨ "ಸೆಲ್ಯೂಕಸ್" ತನ್ನದೇ ಒಂದು ಶಕೆಯನ್ನು ಪ್ರಾರಂಭಿಸಿದ್ದು.

೩೦೬ ಸೆಲ್ಯೂಕಸ್ಸನು ಸಿರಿಯದ 'ರಾಜ'ನಾದದ್ದು; ಅವನ ದಂಡಯಾತ್ರೆ.

೩೦೫ ಚಂದ್ರಗುಪ್ತನೊಂದಿಗೆ ಅವನು ಮಾಡಿದ ಒಪ್ಪಂದ.

೩೦೪ ಮೆಗಾಸ್ತನೀಸನು ಹಿಂದುಸ್ತಾನಕ್ಕೆ ಬಂದದ್ದು.

೩೦೦ ಅಶೋಕನ ಜನನ; ಸೈರಿನಿಯದ ಮಗಸ್‌ನ ಸಿಂಹಾಸನಾರೋಹಣ (ಮಕ).

೨೯೬ ಬಿಂದುಸಾರನ ಸಿಂಹಾಸನಾರೋಹಣ.

[೨೮೫] ಟಾಲಮಿ ಫಿಲಾಡೆಲ್ಫಾಸ್ ಈಜಿಪ್ಟಿನ ರಾಜನಾದದ್ದು (ತುರಮಾಯ).

[೨೮೦] ಸೆಲ್ಯೂಕಸ್ಸನ ಮರಣ; ಅಂಟಿಯೋಕಸ್ ಸೋಟರ್, ಸಿರಿಯದ ರಾಜನಾದದ್ದು. (ಅಂತಿಯೋಕ)

[೨೭೮] ಅಂಟಿಗೋನಸ್ ಗೊನಾಟಸ್ (ಅಂತಿಕಿನಿ) ಮೆಸಿಡೋನಿಯದ ಅರಸ.

೨೭೩ ಬಿಂದುಸಾರನ ಮರಣ.

[೨೭೨] ಎಪಿರಸ್‌ನ ಅರಸನಾದ ಅಲೆಕ್ಸಾಂಡರನ ಸಿಂಹಾಸನಾರೋಹಣ (ಅಲಿಕ ಸುದರ)

| | |
|---|---|
| ೨೬೯ | ಅಶೋಕನ ರಾಜ್ಯಾಭಿಷೇಕ. |
| ೨೬೫ | ಅಶೋಕನ ತಮ್ಮ ತಿಷ್ಯನೂ ಅಳಿಯ ಅಗ್ನಿ ಬ್ರಹ್ಮನೂ ಭಿಕ್ಷುಗಳಾದದ್ದು. |
| ೨೬೪ | ಅಶೋಕನ ಮಗ, ಮಹೇಂದ್ರನೂ, ಮಗಳು, ಸಂಘಮಿತ್ರಳೂ, ಸಂಘವನ್ನು ಸೇರಿದ್ದು ; ಅಶೋಕನು ಉಪಾಸಕನಾದದ್ದು. |
| ೨೬೧ | ಕಲಿಂಗದಮೇಲಿನ ದಂಡಯಾತ್ರೆ, ಅಶೋಕನ ಧರ್ಮಕಾಮತೆ ತೀವ್ರವಾದದ್ದು. ಭಿಕ್ಷುಗತಿಕನಾಗಿ ಸಂಘವನ್ನು ಪ್ರವೇಶಮಾಡಿದ್ದು, ದೂತರನ್ನು ಕಳುಹಿಸಿದ್ದು, ಸಿರಿಯದಲ್ಲಿ ಅಂತಿಯೋಕಸ್ ತಿಯೋಸ್ ಎಂಬ ಅರಸನು ಬಂದದ್ದು. |
| ೨೫೯ | ಬೋಧಿಕ್ಷೇತ್ರಕ್ಕೆ ಧರ್ಮಯಾತ್ರೆ ಹೋದದ್ದು. |
| [೨೫೮] | ಸೇರೀನಿಯದ ಅರಸನಾದ 'ಮಕ'ನ ಮರಣ ; ಎಪಿರಸ್‌ನ 'ಆಲಿಕಸುದರ'ನ ಮರಣ. |
| ೨೫೭ | ಆಜೀವಿಕರಿಗೆ ಗುಹಾವಸತಿಗಳ ದಾನ; ೧೪ ಶಿಲಾ ಶಾಸನಗಳ ಹಾಗೂ ೨ ಕಲಿಂಗ ಶಾಸನಗಳ ಪ್ರಕಟಣೆ. ಅಧಿಕಾರಿಗಳ ಅನುಸಂಯಾನದ ವ್ಯವಸ್ಥೆ. |
| ೨೫೬ | ಧರ್ಮ ಮಹಾಮಾತ್ರರ ನೇಮಕ. |
| ೨೫೨ | ಬೌದ್ಧ ಸಂಘದ 'ಮೂರನೆಯ ಮಹಾ ಸಂಗೀತಿ" ಮೊಗ್ಗಲೀಪುತ್ತತಿಸ್ಸನ ಅಧ್ಯಕ್ಷತೆಯಲ್ಲಿ. ಮಹೇಂದ್ರ ಸಿಂಹಳಕ್ಕೆ ಹೋದದ್ದು. ಸಾಂಚಿ, ಸಾರನಾಥ ಶಾಸನಗಳು, ಭಾಬ್ರುಶಾಸನ. |
| ೨೫೦ | ಮತ್ತೊಂದು ಗವಿಯ ದಾನ. |
| ೨೪೯ | ಲುಂಬಿನೀ ಗ್ರಾಮಕ್ಕೆ ಧರ್ಮಯಾತ್ರೆ. ಕನಕಮುನಿಯ ಸ್ತೂಪವನ್ನು ಸಂದರ್ಶಿಸಿ, ಸ್ತಂಭ ನಿಲ್ಲಿಸಿದ್ದು. |
| [೨೪೭] | "ತುರುಮಾಯ"ನ ಮರಣ. |
| [೨೪೬] | "ಅಂತಿಯೋಕ"ನ ಮರಣ. |

೨೪೫ ಕನಕಮುನಿಸ್ತೂಪವನ್ನು ಇಮ್ಮಡಿಸಿದ್ದು.

೨೪೩ ಆರು ಸ್ತಂಭ ಶಾಸನಗಳ ಪ್ರಕಟಣೆ.

೨೪೨ ಏಳನೆಯ ಸ್ತಂಭ ಶಾಸನ; ಬಿಡಿ ಶಿಲಾಶಾಸನ ೧,೨

[೨೩೯] 'ಅಂತಿಕಿನಿ'ಯ ಮರಣ.

೨೩೨ ಅಶೋಕನ ಮರಣ.

೧೮೮ ಮೌರ್ಯ ಸಾಮ್ರಾಜ್ಯದ ಅಧಃಪತನ. ಶುಂಗರ ಸಿಂಹಾಸನಾರೋಹಣ.

# ಗ್ರಂಥಋಣ

*Asokan Inscriptions*—HULTZSCH.
*Asokan Text and Glossary*—WOOLNER.
*Asoka*—RADHA KUMUD MUKHERJEA.
*Asoka*—D. R. BHANDARKAR.
*The Cambridge History of India.*
*Asoka*—VINCENT A. SMITH.
*Select Inscriptions*, Vol. I—D. N. SIRCAR.
*The Journal of the Royal Asiatic Society.*
*The Indian Antiquary.*
*The Indian Historical Quarterly.*
*The Journal of Letters*, Calcutta University.
*The Journal of the Mythic Society*, Bangalore.
*The Journal of the Bihar and Orissa Research Society.*

**Chapter I: Introduction.**

*The Outline of World History*—H. G. WELLS.
*Introduction*—HULTZSCH.
Part I, p. xix *et seq*—WOOLNER.
*Introduction*—MUKHERJEA.

**Chapter II: Maurya Vamsa.**

*History of Greece*—BURY.
*India and the Western World*—RAWLINSON.
*Early History of India*—VINCENT A. SMITH.
*Ancient India as Described by Megasthenes and Arrian, Calcutta*, 1926—MACCRINDLE.
*Ancient India as described in Classical Literature*—MACCRINDLE.
*Some Kshatriya Tribes of Ancient India*—B. C. LAW.
*J.B. and O.R.S.*, Vol. II, Part I, *Bindusara*—K. P. JAYASWAL.
*Bhandarkar Oriental Institute*, Silver Jubilee Number, 1942, *on 'Sandra Kottas'*—D. S. TRIVEDI.
*Political History of Ancient India*—RAYCHAUDHURI.
*Mudrarakshasa*—VISHAKHADATTA.
*Karnataka Sahitya Parishatpatrike*, Vol. XXVI, 1 and 2, GOVINDA PAI.
*Cambridge History of India*, Chs. 14, 15, 16, 17 and 18.

**Chapter III: Asoka's Life.**

*Mahavamsa*—GEIGER.
*Dipavamsa*—OLDENBERG.
*Divyavadana*—COWELL and NEILL.
*Dynasties of the Kali Age*—PARGITER.
*Early History of Buddhism and Buddhist Sects*—N. DUTT.
*Rajatarangini*—STEIN.
*Travels of Hiuen Tsang.*
*Travels of Fa Hien.*
*Asokan Inscriptions*—HULTZSCH.
*Asoka*—R. K. MUKHERJEA.
*Hathigumpha Cave Inscription, J.B. and O.R.S.*, Vols. 3, 4, 13 and 14.
*Gupta Inscriptions*—FLEET.
*Encyclopaedia of Religion and Ethics: Ajivakes*—HOERNLE.

**Chapter IV: Dharma.**

*Arthasastra*—DR. SHAMA SASTRI.
*Arthasastra*—JOLLY and SCHMIDT, Punjab Sanskrit Series.
*Pali English Dictionary*—CHILDERS.
" —RHYS DAVIDS and STEDE.
*Dhammapada*, Vol. 10—S.B.E.
*Vinayapitaka*—S.B.E., Vols. 13, 17 and 20.
*History of Buddhist Thought*—E. J. THOMAS.
*Journal of the Mythic Society*, 1927—REV. H. J. HERAS.
*Indian Antiquary*, 1912—K. B. PATHAK.
*Ancient India*, Vol. II—TRIBHUVANADAS SHAH.
*Mauryan Polity*—V. R. R. DIKSHITAR.
*Proceedings of the II Oriental Conference*—M. GHOSH.
*Early History of Bengal*—MONAHAN.
*K. B. Pathak Commemoration Volume*—D. R. BHANDARKAR.
*Notes: Ibid*—R. K. MUKHERJEA.
*Asoka*—MACPHAIL.
*Z.D.M.G.*, Vol. LXV—VINCIENT A. SMITH.
*Calcutta University Journal of Letters*, 1935—B. C. LAW.
*Hyderabad Archaeological Series*, No. 1—MASKI EDICT.
" No. 10—GAVIMUTT PALKI GUNDU INSCRIPTIONS.
*Arch. Survey of India Report*, 1928-29—YERRAGUDI INSCRIPTION.

**Chapter V: Administration.**

*Arthasastra.*
*Considerations on Ancient Indian Polity*—K. V. RANGASWAMY IYENGAR.
*Hindu Polity*—K. P. JAYASWAL.
*Mauryan Polity*—V. R. R. DIKSHITAR.
*Hindu Political Theories*—GHOSAL.
*Glories of Magadha*—SAMADDAR.
*Cambridge History of India*, Vol. I, Ch. 19.

**Chapter VI: Art—**

*History of Fine Art in India and Ceylon*—VINCENT A. SMITH.
*Ancient India*—CODRINGTON.
*Aryan Rule in India*—HAVELL.
*History of Art in India and Indonesia*—COOMARASWAMY.
*Excavations at Sanchi*—JOHN MARSHALL: Arch. Survey of India 1913-1914.
*Beginnings of Art in E. India*—R. C. CHANDA: Arch. Survey of India, Memoir No. 30.
*The Zoroastrian Period of Indian History*—E. B. SPOONER: *J.R.A.S.*, 1915 and 1916.
*Excavations at Pataliputra*—E. B. SPOONER: Arch. Survey of India Report, 1912-1913.
*Revealing India's Past*—India Society, London.

**Chapter VII: Conclusion—**

*Aryan Rule in India*—HAVELL.
*Cambridge History of India*, Vol. I—F. W. THOMAS.
*J.A.S.B.*, Vol. 10, Reaction against Asoka—MM H. P. SASTRI.

**Inscriptions—**

*Asokan Text and Glossary*—WOOLNER.
*Asokan Inscriptions*—HULTZCH.
*Select Inscriptions*—D. N. SIRCAR.
*Asoka's Dharmasasanas* (in Telugu)—DR. C. R. NARAYANA RAO.

## ಟಿಪ್ಪಣಿ

| | |
|---|---|
| ಅಗ್ರಾಮಾತ್ಯ : | ಪ್ರಧಾನ ಅಮಾತ್ಯ. |
| ಅಗ್ರಭೂತಿ : | ಹಿರಿಯರಾದವರು. |
| ಅರ್ಥಸಂತೀರಣ : | ಕರ್ಮಸಂಪಾದನೆ ; ಕಾರ್ಯಸಾಧನೆ. |
| ಅನಾವಾಸ : | ಭಿಕ್ಷುಗಳ ವಾಸಕ್ಕೆ ಯೋಗ್ಯವಲ್ಲದ ಸ್ಥಳ. |
| ಅಪರಾಂತ : | ಪಶ್ಚಿಮದ ಗಡಿ ; ಬೊಂಬಾಯಿ ಪ್ರಾಂತದ ಉತ್ತರ ಭಾಗ. |
| ಆಸ್ರವ : | ಕಾಮಾಸ್ರವ, ಭವಾಸ್ರವ, ದೃಷ್ಟ್ಯಾಸ್ರವ, ಅವಿದ್ಯಾಸ್ರವ—ಎಂಬ ನಾಲ್ಕು ಪಾಪಮಾರ್ಗಗಳು (ದೀಘನಿಕಾಯ ೨-೮೧). |
| ಉಪಾಸಕ : | ಬೌದ್ಧ ಗೃಹಸ್ಥ. |
| ಅಂತೇವಾಸಿ : | ನೆರೆಹೊರೆ ಪ್ರಾಂತದ ಜನಗಳು. |
| ಕಲ್ಪ : | ಪ್ರಳಯದಿಂದ ಪ್ರಳಯದವರೆಗಿನ ಕಾಲ. |
| ಕಲ್ಯಾಣಾಗಮ : | ಉದಾರವಾದ ಸಿದ್ಧಾಂತಗಳು. |
| ಕೌಶಾಂಬಿ : | ವತ್ಸರಾಜಧಾನಿ. |
| ಗಣರಾಷ್ಟ್ರ : | ಸಿಂಧು-ಗಂಗಾನದಿಗಳ ನಡುವಣ ಪ್ರಾಂತದಲ್ಲಿದ್ದ ಜನಸಮೂಹಗಳು, ಇಲ್ಲಿಯ ಆಡಳಿತಗಳನ್ನು 'ಗಣ'ಗಳೇ ನಿರ್ವಹಿಸುತ್ತಿದ್ದುವು. |
| ಚಕ್ಷುದಾನ : | ಮಾಂಸಚಕ್ಷು, ದಿವ್ಯಚಕ್ಷು, ಪ್ರಜ್ಞಾಚಕ್ಷು ಎಂಬ ಮೂರು ತೆರನಾದ ಚಕ್ಷುಗಳನ್ನು ಬೌದ್ಧರು ವಿಂಗಡಿಸುತ್ತಾರೆ. |
| ಚೈತ್ಯ : | ಪುಣ್ಯಕ್ಷೇತ್ರ (ವೃಕ್ಷ, ಧಾತುಗರ್ಭ). |
| ಜಂಬೂದ್ವೀಪ : | ಭೂಮಿಯ ದಕ್ಷಿಣ ಭಾಗ ; ಭಾರತವರ್ಷ. |
| ತಾಮ್ರಪರ್ಣಿ : | ಸಿಂಹಳದ್ವೀಪ (ದ್ವೀಪವಂಶದಲ್ಲಿ ಸಿಂಹಳಕ್ಕೆ ಈ ಹೆಸರಿದೆ ; ಮೆಗಾಸ್ತನೀಸನೂ ಈ ಹೆಸರನ್ನೇ ಹೇಳುತ್ತಾನೆ). |
| ದಾಸ ; ಭೃತ್ಯ : | ಬೆಲೆಗೆ ಕೊಂಡುಕೊಂಡವನು ; ಕೂಲಿಗೆ ಗೊತ್ತು ಮಾಡಿದವನು. |

ನಿಕಾಯ : ' ಪುರುಷ 'ರು ; ಅಧಿಕಾರಿಗಳು.

ನಿರ್ಗ್ರಂಥ : ಜೈನ ; ' ಗ್ರಂಥಿ 'ಗಳನ್ನು ಬಿಚ್ಚಿದವನು ; ಗಂಟಿಲ್ಲದವನು.

ಪಚ್ಚಯದಾಯಕ : ಭಿಕ್ಷುಗಳಿಗೆ ಅಶನ ವಸನ ವಸತಿ ಔಷಧಿಗಳನ್ನು ದಾನ ಮಾಡುವವನು.

ಪರಾಕ್ರಮ : ಮಹೋತ್ಸಾಹ ; ಉದ್ಯೋಗ.

ಪ್ರಕೃತಿ : ಧರ್ಮ (B. C. LAW. *Calcutta University Journal of Letters 1935*).

ಪಾಷಂಡ : ಧರ್ಮಸಂಪ್ರದಾಯ ; ಬ್ರಹ್ಮಜಾಲಸುತ್ತದಲ್ಲಿ ೬೨ ಪಾಷಂಡಗಳ ವಿವರವಿದೆ.

ಪ್ರಾದೇಶಿಕ : ಪ್ರಾದೇಶಿಕೇಶ್ವರ ಎಂದು ಈ ಅಧಿಕಾರಿಯನ್ನು ರಾಜತರಂಗಿಣಿಯಲ್ಲಿ ಸೂಚಿಸಿದೆ (೪, ೧೨೬).

ಭಾವಶುದ್ಧಿ : ಚಿತ್ತಶುದ್ಧಿ.

ಭಿಕ್ಷುಗತಿಕ : ಭಿಕ್ಷುಗಳ ಸಂಗಡ ಕೆಲಕಾಲವಿದ್ದು ಬರುವವನು (ವಿನಯಪಿಟಕ ೧, ೧೪೮).

ಮಹಾರಾಜಾಭಿಷೇಕ : "ಸಂಪೂರ್ಣ ಚತುರ್ವಿಂಶತಿವರ್ಷಂ" (ಖಾರವೇಲನ ಹಾಥಿಗುಂಫ ಶಾಸನ).

ವಚೋಗುಪ್ತಿ : ವಾಕ್ಸಂಯಮ.

ಶ್ರಮಣ : ಬೌದ್ಧ ಸಂನ್ಯಾಸಿ.

ಸಕೃದಾಗಾಮಿ ಫಲ : ಈ ಫಲವನ್ನು ಹೊಂದಿದವರಿಗೆ ಇನ್ನು ಳಿದಿರುವುದು ಎರಡೇ ಜನ್ಮ : (೧) ದೇವಲೋಕದಲ್ಲಿ (೨) ಮಾನವಲೋಕದಲ್ಲಿ.

ಸಂಘಭೇದ : ಬೌದ್ಧರ ಆರು ಮಹಾಪಾತಕಗಳಲ್ಲಿ ಇದೂ ಒಂದು ಮಾತೃಘಾತ, ಪಿತೃಘಾತ, ಅರಹಂತಘಾತ ಇವುಗಳಷ್ಟೇ ಪಾಪ.

ಸಂಘರಾಜ್ಯ : ' ಗಣರಾಷ್ಟ್ರ 'ದಂತೆಯೇ ಸುರಾಷ್ಟ್ರವನ್ನು ಸಂಘರಾಜ್ಯವೆಂದು ಹೇಳುತ್ತಿದ್ದರು.

ಸಂಬೋಧಿ : ಬೋಧಿಲಾಭಕ್ಷೇತ್ರ.

# ಶಾಸನಗಳು

## ಮೊದಲನೆಯ ಶಿಲಾಶಾಸನ

(ಗಿರಿನಗರದ ಪಾಠ)

ಇಯಂ ಧಂಮ ಲಿಪೀ ದೇವಾನಂ ಪ್ರಿಯೇನ
ಪ್ರಿಯದಸಿನಾ ರಾಞಾ ಲೇಖಾಪಿತಾ ಇಧನ ಕಿಂ
ಚಿ ಜೀವಂ ಆರಭಿಪ್ತಾ ಪ್ರಜೂಹಿತವ್ಯಂ
ನಚ ಸಮಾಜೊ ಕತವ್ಯೋ ಬಹುಕಂ ಹಿ ದೋಸಂ
ಸಮಾಜಂಹಿ ಪಸತಿ ದೇವಾನಂ ಪ್ರಿಯೊ ಪ್ರಿಯದಸಿ ರಾಜಾ
ಅಸ್ತಿ ಪಿ ತು ಏಕ ಚಾ ಸಮಾಜಾ ಸಾಧುಮತಾ ದೇವಾನಂ
ಪ್ರಿಯ ಸ ಪ್ರಿಯದಸಿನೊ ರಾಞೋ ಪುರಾ ಮಹಾನಸಂ ಹಿ।
ದೇವಾನಂ ಪ್ರಿಯಸ ಪ್ರಿಯದಸಿನೊ
ಬಹೂನಿ ಪ್ರಾಣ ಸತ ಸಹಸ್ರಾನಿ ಆರಭಿಸು ಸೂಪಾಥಾಯ
ಸೆ ಅಜ ಯದಾ ಅಯಂ ಧಂಮಲಿಪೀ ಲಿಖಿತಾ ತೀ ಏವ ಪ್ರಾ
ಣಾ ಆರಭರೆ ಸೂಪಾಥಾಯಾ ದ್ವೋ ಮೊರಾ ಏಕೊ ಮಗೊ ಸೊಪಿ
ಮಗೊ ನ ಧುವೊ ಏತೆ ಪಿ ತ್ರೀ ಪ್ರಾಣಾ ಪಛಾ ನ ಆರಭಿಸರೆ

## ಎರಡನೆಯ ಶಿಲಾಶಾಸನ

(ಗಿರಿನಗರದ ಪಾಠ)

ಸರ್ವತ ವಿಜಿತಂ ಹಿ ದೇವಾನಂ ಪ್ರಿಯಸ ಪಿಯದಸಿನೊ ರಾಞೊ
ಏವಮಪಿ ಪ್ರಚಂತೇಸು ಯಥಾ ಚೋಡಾ ಪಾಡಾ ಸತಿಯಪುತೊ
ಕೇತಲಪುತೊ ಆ ತಂಬ
ಪಂಣಿ ಅಂತಿಯೋಕೊ ಯೋನರಾಜಾ ಯೆವಾಪಿತಸ ಅಂತಿಯಕಸ
ಸಾಮೀಪಂ
ರಾಜಾನೊ ಸರ್ವತ್ರ ದೇವಾನಂ ಪ್ರಿಯಸ ಪ್ರಿಯದಸಿನೊ ರಾಞೊ
ದ್ವೆ ಚಿಕೀಛ ಕತಾ
ಮನುಸ ಚಕೀಛಾ ಚ ಪಸು ಚಕೀಛಾ ಚ ಓಸುಧಾನಿ ಚ ಯಾನಿ
ಮನುಸೋಪಗಾನಿ ಚ

ಪಸೋಪಗಾನಿ ಚ ಯತ ಯತ ನಾಸ್ತಿ ಸರ್ವತ್ರಾ ಹಾರಾಪಿತಾನಿಚ
ರೋಪಾಪಿತಾನಿ ಚ
ಮೂಲಾನಿ ಚ ಫಲಾನಿ ಚ ಯತ ಯತ್ರ ನಾಸ್ತಿ ಸರ್ವತ ಹಾರಾಪಿತಾನಿ ಚ
ರೋಪಾಪಿತಾನಿ ಚ
ಪಂಥೇಸೂ ಕೂಪಾಚ ಖಾನಾಪಿತಾ ವ್ರಛಾ ಚ ರೋಪಾಪಿತಾ
ಪರಿಭೋಗಾಯ ಪಸುಮನುಸಾನಂ

## ಮೂರನೆಯ ಶಿಲಾಶಾಸನ

(ಗಿರಿನಗರ)

ದೇವಾನಂ ಪ್ರಿಯೊ ಪಿಯದಸಿ ರಾಜಾ ಏವಂ ಆಹ ದ್ವಾದಸ
ವಾಸಾಭಿಸಿತೇನ ಮಯಾ ಇದಂ ಆಙಾಪಿತಂ
ಸರ್ವತ ವಿಜಿತೆ ಮಮ ಯುತಾ ಚ ರಾಜೂಕೆ ಚ ಪ್ರಾದೇಸಿಕೆ ಚ ಪಂಚಸು
ಪಂಚಸು ವಾಸೇಸು ಅನುಸಂ
ಯಾನಂ ನಿಯಾತು ಎತಾ ಯೇವ ಅಥಾಯ ಇಮಾಯ ಧಂಮಾನುಸಸ್ಮಿಯ
ಯಥಾ
ಅಙಾಯಪಿ ಕಂಮಾಯ ಸಾಧು ಮಾತರಿ ಚ ಸುಸೂಸಾ ಮಿತ ಸಂಸ್ತುತ
ಙಾತೀನಂ ಬಾಮ್ಹಣ
ಸಮಣಾನಂ ಸಾಧು ದಾನಂ ಪ್ರಾಣಾನಂ ಸಾಧು ಅನಾರಂಭೊ ಅಪವ್ಯ
ಯತಾ ಅಪಭಾಡತಾ ಸಾಧು
ಪರಿಸಾಪಿ ಯುತೆ ಆಙಪಯಿಸತಿ ಗಣನಾಯಂ ಹೇತುತೊ ಚ
ವ್ಯಂಜನತೊ ಚ

## ನಾಲ್ಕನೆಯ ಶಿಲಾಶಾಸನ

(ಗಿರಿನಗರ)

ಅತಿಕಾತಂ ಅಂತರಂ ಬಹೂನಿ ವಾಸ ಸತಾನಿ ವಢಿತೋ ಏವ ಪ್ರಾಣಾರಂ
ಭೊ ವಿಹಿಂಸಾ ಚ ಭೂತಾನಂ ಙಾತೀಸು
ಅಸಂಪ್ರತಿಪತೀ ಬ್ರಾಮ್ಹಣ ಸ್ರಮಣಾನಂ ಅಸಂಪ್ರತೀಪತೀ
ಅಜ ದೇವಾನಂ ಪ್ರಿಯಸ ಪ್ರಿಯದಸಿನೊ ರಾಙೊ
ಧಂಮಚರಣೇನ ಭೇರೀಘೋಸೋ ಅಹೋ ಧಂಮಘೋಸೋ
ವಿಮಾನ ದರ್ಸಣಾ ಚ ಹಸ್ತಿದಸಣಾ ಚ

ಅಗಿಖಂಧಾನಿ ಚ ಅಞಾನಿ ಚ ದಿಯ್ವಾನಿ ರೂಪಾನಿ ದಸಯಿತ್ವಾ ಜನಂ
ಯಾರಿಸೆ ಬಹೂಹಿ ವಾಸಸತೇಹಿ
ನ ಭೂತ ಪುವೆ ತಾರಿಸೆ ಅಜ ವಢಿತೆ ದೇವಾನಂ ಪ್ರಿಯಸ ಪ್ರಿಯದಸಿನೊ
ರಾಞತೊ ಧಂಮಾನು ಸಸ್ಟಿಯಾ ಅನಾರಂ
ಭೊ ಪ್ರಾಣಾನಂ ಅವಿಹೀಸಾ ಭೂತಾನಂ ಞಾತೀನಂ ಸಂಪಟಿಪತೀ
ಬ್ರಮ್ಹಣಸಮಣಾನಂ ಸಂಪಟಪತೀ ಮಾತರಿಪಿತರಿ
ಸುಸ್ರೂಸಾ ಥೈರಸುಸ್ರೂಸಾ ಏಸ ಅಞತೆ ಚ ಬಹುವಿಧೆ ಧಂಮ ಚರಣೆ
ವಢಿತೆ ವಢಯಿಸತಿ ಚೇವ ದೇವಾನಂ ಪ್ರಿಯೊ
ಪ್ರಿಯದಸಿ ರಾಜಾ ಧಂಮ ಚರಣಂ ಇದಂ ಪೂತ್ರಾಚ ಪೊತ್ರಾಚ
ಪ್ರಪೊತ್ರಾಚ ದೇವಾನಂ ಪ್ರಿಯಸ ಪ್ರಿಯದಸಿನೂ ರಾಞತೊ
ಪ್ರವಢಯಿಸಂತಿ ಇದಂ ಧಂಮ ಚರಣಂ ಆವ ಸವಟಕಪಾ ಧಂಮಂ ಹಿ
ಸೀಲಂ ಹಿ ತಿಸ್ಟಂತೊ ಧಂಮಂ ಅನುಸಾಸಿಸಂತಿ
ಏಸ ಹಿ ಸೆಸ್ಟಕಂಮೆ ಯ ಧಂಮಾನುಸಾಸನಂ, ಧಂಮ ಚರಣೇಪಿ ನ ಭವತಿ
ಅಸೀಲಸ ತ ಇಮಂ ಹಿ ಅಥಂ ಹಿ
ವಧೀ ಚ ಅಹೀನೀ ಚ ಸಾಧು ಏತಾಯ ಅಥಾಯ ಇದಂ ಲೇಖಾಪಿತಂ
ಇಮಸ ಅಥಸ ವಧಿ ಯುಜಂತು ಹೀನಿಚ
ನೊ ಲೋಚೆತವ್ಯಾ ದ್ವಾದಸವಾಸಾಭಿಸಿತೇನ ದೇವಾನಂ ಪ್ರಿಯೇನ
ಪ್ರಿಯದಸಿನಾ ರಾಞಾ ಇದಂ ಲೇಖಾಪಿತಂ

## ಐದನೆಯ ಶಿಲಾಶಾಸನ

### (ಮಾರ್ಸೇರಾ)

ದೇವಾನಾಂ ಪ್ರಿಯೇನ ಪ್ರಿಯದ್ರಶಿದರಾಜ ಏವಂ ಆಹಾ ಕಲಾಣಂ ದುಕರಂ
ಯೆ ಅದಿಕರೆ ಕಯಣಸ ಸೆ ದುಕರಂ ಕರೋತಿ ತಂ ಮಯ ಬಹುಕಯಣೆ
ಕಟೆ. ತಂ ಮಅ ಪುತ್ರಚ
ನತರೆ ಚ ಪರ ಚತೆನ ಯೆ ಅಪತಿಯೆ ಮೆ ಅವಕಪಂ ತಥ ಅನುವಟಿಶತಿ ಸೆ
ಸುಕಟ ಕಷತಿ ಯೆ ಚು ಅತ್ರ ದೇಶ ಪಿ ಹ ಪೇಶತಿ ಸೆ ದುಕಟ ಕಷತಿ
ಪಪೆ ಹಿ ನಮ ಸುಪದರವೆ ಸೆ ಅತಿಕ್ರತಂ ಅಂತರಂ ನ ಭೂತ ಪ್ರುವ ಧ್ರಮಮಹ
ಮತ್ರ ನಮ ಸೆ ತ್ರೇಡಶ ವಷಭಿಸಿತೇನ ಮಯ ಧ್ರಮಮಹಮತ್ರ ಕಟ
ತೇ ಸವ್ರ ಪಷಡೇಷು

ವಪುಟ ಧ್ರಮ ಧಿಥನಯೆ ಚ ಧ್ರಮುವಧ್ರಿಯ ಹಿದಸುಖಯೆ ಚ ಧ್ರಮಯುತಸ
ಯೋನ ಕಂಬೋಜ ಗಧರನ ರಠಿಕ ಪಿತಿನಿಕನ ಯುವಪಿ ಅಞ್ಞ ಅಪರತ
ಭಟಮಯೆ
ಷು ಬ್ರಮಣಿಭ್ಯೇಷು ಅನಥೇಷು ವುಧ್ರೇಷು ಹಿದಸುಖಯೆ ಚ ಧ್ರಮ
ಸುಖಯೆ ಧ್ರಮಯುತ ಅಪಲಿಬೋಧಯೆ ವಿಯುಪುಟತೆ. ಬಧನ ಬಧಸ
ಪಟಿವಿಧನಯ ಅಪಲಿಬೋಧಯೆ ವೋಕ್ಷಯೆ ಚ ಇಯಂ
ಅನುಬಧ ಪ್ರಜವ ತಿವ ಕಟ್‌ಭಿಕರ ತಿವ ಮಹಲಕೆ ತಿವ ವಿಯುವ್ರುಟತೆ. ಹಿದ
ಬಹಿರೇಷು ಚ ನಗರೇಷು ಸವ್ರೇಷು ಓರೋಧನೇಷು ಭತನ ಚ ಸ್ಪಸನ ಚ
ಯೆ ವ ಪಿ ಅಞ್ಞ ಇತಿಕೆ ಸವ್ರತ್ರ ವಿಯುಪಟ. ಎ ಇಯಂ ಧ್ರಮನಿಶಿತೊ
ವ ಧ್ರಮಧಿ ಥನೆ ತಿವ ದನ ಸಂಯುತೆ ತಿ ವ ಸವ್ರತ್ರ ವಿಜತಸಿ ಮಅ
ಧ್ರಮಯುತಸಿ ವಪುಟತೆ
ಧ್ರಮ ಮಹಮತ್ರ ಏತಯೆ ಅಥಯೆ ಅಯಿ ಧ್ರಮದಿಪಿ ಲಿಖಿತ ಚಿರಠಿತಿಕ
ಹೋತು ಪಥ ಚ ಮೇ ಪ್ರಜ ಅನುವಟತು

## ಆರನೆಯ ಶಿಲಾಶಾಸನ

(ಗಿರಿನಗರ)

ದೇವಾನಂ ಪಿಯೊ ಪಿಯದಸಿ ರಾಜಾ ಏವಂ ಆಹ ಅತಿಕ್ರಾತಂ ಅಂತರಂ
ನ ಭೂತಪ್ರುವ ಸವೆ ಕಾಲೆ ಅಥಕಂಮೆವ ಪಟಿವೇದನಾ ವಾ ತ ಮ ಯಾ
ಏವಂ ಕತಂ
ಸವೆ ಕಾಲೆ ಭುಂಜಮಾನಸ ಯೆ ಓರೋಧನಂ ಹಿ ಗಭಾಗಾರಾಂ ಹಿ
ವಚಂಹಿವ
ವಿನೀತಂಹಿ ಚ ಉಯಾನೆಸು ಚ ಸವತ್ರ ಪಟಿವೇದಕಾ ಸ್ಟಿತಾ ಅಥೆಮೆ ಜನಸ
ಪಟಿವೇದೇಥ ಇತಿ. ಸರ್ವತ್ರ ಚ ಜನಸ ಅಥೆಕರೋಮಿ ಯ ಚ ಕಿಂಚಿ
ಮುಖತೊ
ಆಞಪಯಾಮಿ ಸ್ವಯಂ ದಾಪಕಂ ವಾ ಸ್ರಾವಾಪಕಂ ವಾ ಯ ವಾ
ಪುನ ಮಹಾಮಾತ್ರೇಸು
ಆಚಾಯಿಕೆ ಅರೋಪಿತಂ ಭವತಿ ತಾಯ ಅಥಾಯ ವಿವಾದೊ ನಿಝ
ತೀ ವ ಸಂತೊ ಪರಿಸಾಯಂ
ಆನಂತರಂ ಪಟಿವೇದೇತವ್ಯಂ ಮೆ ಸರ್ವತ್ರ ಸರ್ವೆ ಕಾಲೆ ಏವಂ ಮಯಾ
ಆಞಪಿತಂ ನಾಸ್ತಿ ಹಿಮೆ ತೋಸೋ

ಉಸ್ಟಾನಂಹಿ ಅಥ ಸಂತೀರಣಾಯು ವ ಕತವ್ಯ ಮತೆ ಹಿ ಮೆ ಸರ್ವಲೋಕ
ಹಿತಂ
ತ ಸ ಚ ಪುನ ಏಸ ಮೂಲೆ ಉಸ್ಟಾನಂ ಚ ಅಥಸಂತೀರಣಾ ಚ ನಾಸ್ತಿ
ಹಿ ಕಂಮತರಂ
ಸರ್ವಲೋಕ ಹಿತತ್ಪಾ ಯು ಚ ಕಿಂಚಿ ಪರಾಕ್ರಮಾಮಿ ಅಹಂ ಕಿಂತಿ
ಭೂತಾನಾಂ ಆನಂಣಂ ಗಛೆಯುಂ
ಇಧ ಚ ನಾನಿ ಸುಖಾಪಯಾಮಿ ಪರತ್ರಾ ಚ ಸ್ವಗಂ ಆರಾಧಯಂತು ತ
ಏತಾಯ ಅಥಾಯ
ಅಯಂ ಧಂಮ ಲಿಪೀ ಲೇಖಾಪಿತಾ ಕಿಂತಿ ಚಿರಂ ತಿಸ್ಟೆಯ ಇತಿ ತಥಾ ಚ
ಮೆ ಪುತ್ರಾ ಪೋತಾ ಚ ಪ್ರ ಪೋತ್ರಾ ಚ
ಅನುವತರಂ ಸವ ಲೋಕ ಹಿತಾಯ ದುಕರಂತು ಇದಂ ಅಞತ್ರ ಅಗೇನ
ಪರಾಕ್ರಮೇನ

## ಏಳನೆಯ ಶಿಲಾಶಾಸನ

(ಷಾಬಾಸ್ ಗಾಡಿ)

ದೇವಾನಾಂ ಪ್ರಿಯಾ ಪ್ರಿಯದ್ರಶಿ ರಜ ಸವತ್ರ ಇಛತಿಸವ್ರ
ಪಾಸಂಡ ವಸೆಯು ಸವೆ ಹಿತೆ ಸಯಮೆ ಭವಶುಧಿಚ ಇಛಂತಿ
ಜನೋಚು ಉಚವುಚಛಂದೊ ಉಚವುಚರಗೊ ತೆ ಸವ್ರಂ ವ ಏಕದೇಶಂ
ವಿ ಕಷಂತಿ. ವಿಪುಲೆ ಪಿಚು ನನೆ ಯಸನಾಸ್ತಿ ಸಯವ ಭವ
ಶುಧಿ ಕಿಟ್ಞತ ದ್ರಿಡ ಭತಿತ ನಿಚೆವಾಢಂ

## ಎಂಟನೆಯ ಶಿಲಾಶಾಸನ

(ಗಿರಿನಗರ)

ಅತಿಕಾತಂ ಅಂತರಂ ರಾಜಾನೊ ವಿಹಾರ ಯಾತಾಂ ಞಯಾಸು ಏತ
ಮಗಯ್ವಾ ಅಞಾನಿಚ ಏತಾರಿಸಾನಿ
ಅಭಿರಮ ಕಾನಿ ಅಹುಸು ಸೊ ದೇವಾನಂಪಿಯೊ ಪಿಯದಸಿ ರಾಜಾ
ದಸವಸಭಿಸಿತೋ ಸಂತೊ ಆಯಾಯ ಸಂಬೋಧಿಂ
ತೇನೇಸಾ ಧಂಮ ಯಾತಾ ಏತಯಂ ಹೋತಿ ಬಾಮ್ಹಣ ಸಮಣಾನಂ
ದಸಣೆ ಚ ದಾನೆ ಚ ಥೈರಾನಂ ದಸಣೇಚ

ಹಿರಂಣ ಪಟಿವಿಧಾನೋ ಚ ಜಾನಪದಸ ಚ ಜನಸ ದರ್ಸನಂ ಧಂಮಾನುಸಸ್ಟಿ
ಚ ಧಮ್ಮ ಪರಿಪ್ರಚಾ ಚ
ತದೊಪಯಾ ಏಸಾ ಭುಯರತಿ ಭವತಿ ದೇವಾನಂ ಪಿಯಸ ಪಿಯದಸಿನೊ
ರಾಞೊ ಭಾಗೆ ಅಂಞೆ.

## ಒಂಭತ್ತನೆಯ ಶಿಲಾಶಾಸನ

(ಗಿರಿನಗರ)

ದೇವಾನಾಂಪಿಯಾ ಪ್ರಿಯದಸಿ ರಾಜಾ ಏವ ಆಹಾ ಅಸ್ತಿಜನೆ ಉಚಾವಚಂ
ಮಂಗಲಂಕರೋತಿ ಆಬಾಧೇಸು ವಾ
ಆವಾಹ ವಿವಾಹೇಸು ವಾ ಪುತ್ರಲಾಭಸುವಾ ಪ್ರವಾಸಂಹಿವಾ ಏತಂಹಿಚ
ಅಞಂಹಿ ಚ ಜಸೊ ಉಚಾವಚಂ ಮಂಗಲಂ ಕರೋತಿ
ಏತತು ಮಹಿಡಾಯಾ ಬಹುಕಂ ಚ ಬಹುವಿಧಂಚ ಛುದಂಚ ನಿರಥಂ ಚ
ಮಂಗಲಂ ಕರೋತಿ ತ ಕತವ್ಯಮೇವ ತು ಮಗಲಂ ಅವಫಲಂತುಖೊ
ಏತರಿಸಂ ಮಂಗಲಂ ಅಯಂತು ಮಹಾಫಲೆ ಮಂಗಲೆಯ ಧಂಮಮಂಗಲೆ
ತ ತೇತ ದಾಸ ಭತಕಂಹಿ ಸಮ್ಯಪ್ರತಿಪಿತಿ ಗುರೂನಂ ಅಪಚಿತಿ ಸಾಧು
ಪಾಣೆಸು ಸಯಮಾ ಸಾಧು ಬಹ್ಣಣ ಸಮಣಾನಂ ಸಾಧು ದಾನಂ ಏತ ಚ
ಅಞಚ ಏತಾರಿಸಂ ಧಂಮಮಂಗಲಂ ನಾಮ ತ ವತವ್ಯಂ ಪಿತಾವ
ಪುತ್ರೇನವಾ ಭಾತ್ರವಾ ಸ್ವಾಮಿಕೇನವಾ ಇದಂ ಸಾಧು ಇದಂ ಕತವ್ಯ
ಮಂಗಲಂ ಅವತಸ ಅಥಸ ನಿವುಟಿಯ ಅಸ್ತಿ ಚ ಪಿ ವ್ರತಂ
ಸಾಧುದನ ಇತಿ ನತು ಏತಾರಿಸಂ ಅಸ್ತಾದಾನಂ ಅನುಗಾಹಾವಾ ಯಾರಿಸಂ
ಧಂಮದಾನಂ ವ ಧಂಮಾನುಗಾಹಾವ ತತುಖೋಮಿತ್ರೇನವ ಸುಹದ
ಯೇನ ವಾ
ಇತಿಕೇನ ವ ಸಹಾಯುನ ವಾ ಓವಾದಿತವ್ಯಂ ತಂಹಿ ತಂಹಿ ಪಕರಣೆ ಇದಂ
ಕಚಂ ಇದಂ ಸಾಧು ಇತಿ ಇಮಿನಾಸಕ
ಸ್ವಗಂ ಆರಾಧೇನುತು ಇದಿ ಕಿಚ ಇಮಿನಾಕ ತವ್ಯ ತರಂ ಯಥಾಸ್ವಗಾರಧಿ.

## ಹತ್ತನೆಯ ಶಿಲಾಶಾಸನ

(ಗಿರಿನಗರ)

ದೇವಾನಂ ಪ್ರಿಯೊ ಪ್ರಿಯದಸಿ ರಾಜಾ ಯಸೊವ ಕೀತಿ ವ ನ ಮಹಾಥಾ
ವಹಾ ಮಞತೆ ಅಞತ ತದಾಪ್ತನೊ ದಿಘಯ ಚ ಮೆ ಜನೊ

ಧಂಮ ಸುರ್ಸುಸಾ ಸುರ್ಸುಸತಾ ಧಂಮವ್ರತಂ ಚ ಅನುವಿಧಿಯತಾಂ ಏತ
ಕಾಯ ದೇವಾನಂ ಪಿಯೊ ಪಿಯದಸಿ ರಾಜಾ ಯಸೊವ ಕಿತಿ ವ ಇಛತಿ
ಯಂ ತು ಕಿಚಿ ಪರಿಕಾಮತೆ ದೇವಾನಂ ಪ್ರಿಯೊ ಪ್ರಿಯದಸಿ ರಾಜಾ ತ ಸವಂ
ಪಾರತ್ರಿಕಾಯ ಕಿಂತಿ ಸಕಲೆ ಅಪಪರಿಸ್ರವೆ ಅಸ ಏಸತು ಪರಿಸವೆಯ
ಅಪುಂಞಂ
ದುಕರಂತು ಖೊ ಏತಂ ಛುದಕೇನ ವ ಜನೇನ ಉಸಟೇನ ವ ಅಞತ್ರ ಅಗೇಸ
ಪರಾಕ್ರಮೇನ ಸವಂ ಪರಿಚಜಿಪ್ತಾ ಏತತು ಖೊ ಉಸಟೇನ ದುಕರಂ.

## ಹನ್ನೊಂದನೆಯ ಶಿಲಾಶಾಸನ

(ಗಿರಿನಗರ)

ದೇವಾನಾಂ ಪ್ರಿಯೆ ಪಿಯದಸಿ ರಾಜ ಏವಂ ಆಹ ನಾಸ್ತಿ ಏತಾರಿಸಂ
ದಾನಂ ಯಾರಿಸಂ ಧಂಮ ಸಂಸ್ತವೊ ವಾ ಧಂಮಸಂವಿಭಾಗೋವಾ ಧಂಮ
ಸಂಬೊಧೊವ
ತತ ಇದಂ ಭವತಿ ದಾಸಭತಕಮ್ಹಿ ಸಮ್ಯಪ್ರತಿಪತಿ ಮಾತರಿ ಪಿತರಾ
ಸಾಧು ಸುಸ್ರುಸಾ ಮಿತಿದಸ್ತುತ ಞಾತೀನಂ ಬಾಮ್ಹಣ ಸ್ರಮಣಾನಂ
ಸಾಧು ದಾನಂ
ಪ್ರಾಣಾನಂ ಅನಾರಂಭೊ ಸಾಧು ಏತ ವತವ್ಯಂ ಪಿತಾವ ಪುತ್ರೇನ ವ
ಭಾತಾವ ಮಿತಸಂಸ್ತುತ ಞಾತಿಕೇನ ವ ಅವವಟವೆಸಿಯೆಹಿ ಇದಸಾಧು
ಇದಕತವ್ಯಂ
ಸಾತಥಾ ಕರು ಇಲೋಕಚಸ ಅರಥೊ ಹೋತಿ ಪರತಚ ಅನಂತಂ ಪು
ಞಂ ಭವತಿ ತೇನ ಧಂಮದಾನೇನ

## ಹನ್ನೆರಡನೆಯ ಶಿಲಾಶಾಸನ

(ಗಿರಿನಗರ)

ದೇವನಾಂಪಿಯೆ ಪಿಯದಸಿ ರಾಜಾ ಸವಪಾಸಂಡಾನಿ ಚ ಪವಜಿತಾನಿ ಚ
ಘರಸ್ತಾನಿ ಚ ಪೂಜಯತಿ ದಾನೇನ ಚ ವಿವಾಧಾಯ ಚ ಪೂಜಾಯ
ಪೂಜಯತಿ
ನತುತಥಾ ದಾನಂವ ಪೂಜಾ ವ ದೇವನಾಂಪಿಯೆ ಮಂಞತೆ ಯಥಾಕಿತಿ
ಸಾರವಧಿ ಅಸಸವ ಪಾಸಂಡಾನಂ ಸಾರವಧಿತು ಬಹುವಿಧಾ

ತಸತು ಇದಂ ಮೂಲಂ ಯ ವಚಿಗುತಿ ಕಿಂ ತಿ ಆತ್ವಪಾಸಂಡ ಪೂಜಾವ
ಪರಪಾಸಂಡಗರಮ್ ಏಸೊಛವೆ ಅಪ್ರಕರಣಮ್ಹಿ ಲಹುಕಾವ ಅಸ
ತಮ್ಹಿತಮ್ಹಿ ಪ್ರಕರಣೆ ಪೂಜೇತಯಾತು ಏವ ಪರಪಾಸಂಡಾ ತೇನ ತೇನ
ಪ್ರಕರಣೇ ಏವಂ ಕರುಂ ಆತ್ವಪಾಸಂಡಂ ಚ ವಢಯತಿ ಪರಪಾಸಂಡ
ಸ ಚ ಉಪಕರೋತಿ

ತದಂ ಇಥಾ ಕರೋ ತೋ ಆತ್ಪ ಪಾಸಂಡಂ ಚ ಛಣತಿ ಪರಪಾಸಂಡಸ ಪಿ
ಅಪಕರೋತಿ ಯೆ ಹಿ ಕೊಚಿ ಆತ್ವಪಾಸಂಡಂ ಪೂಜಯುತಿ ಪರಪಾಸಂಡಂ
ವ ಗರಹತಿ

ಸವಂ ಆತ್ಪ ಪಾಸಂಡ ಭತಿಯಾ ಕಿಂತಿ ಆತ್ಮ ಪಾಸಂಡಂ ದೀಪ
ಯೆಮು ಇತಿ ಸಾ ಚ ಪುನ ತಥ ಕರಾತೂ ಆತ್ಪ ಪಾಸಂಡಂ ಬಾಢತರಂ
ಅವಮಾನಾತಿ ತ ಸಮುವಾಯಾ ಏವ ಸಾಧು

ಕಿಂತಿ ಅಞಂ ಅಞನ ಧಂಮಂ ಸ್ರುಣಾರು ಚ ಸುಸುಂಸೆರ ಚ ಏವಂ ಹಿ
ದೇವಾನಾಂ ಪ್ರಿಯೇನ ಇಛಾ ಕಿಂತಿ ಸವಪಾಸಂಡಾ ಬಹುಸ್ರುತಾ
ಚ ಅಸು ಕಲಾಣಾಗಮಾ ಚ

ಯೇ ಚ ತತ್ರ ತತ ಪ್ರಸಂನಾ ತೇಪಿ ವತವ್ಯಂ ದೇವಾನಾಂ ಪಿಯಃ ಸೊವಥಾ
ದಾನಂ ವ ಪೂಜಾಂ ವ ಮಂಞತೆ ಯಥಾ ಕಿಂತಿ ಸಾರವಢಿ ಅಸ ಸರ್ವ
ಪಾಸಂಡಾನಂ ಬಹುಕಾ ಚ ಏತಾಯ

ಅಥಾ ವ್ಯಾಪತಾ ಧಂಮಮಹಾಮಾತಾ ಚ ಇಥೀಝುಖ ಮಹಾಮತಾ ಚ
ವಚಭೂಮಿಕಾ ಚ ಅಞೆ ಚ ನಿಕಾಯಾ ಅಯುಂ ಚ ಏತಸ ಫಲ ಯ
ಆತ್ಪ ಪಾಸಂಡವಢಿ ಚ ಹೋತಿ ಧಂಮಸ ಚ ದೀಪನಾ

## ಹದಿಮೂರನೆಯ ಶಿಲಾಶಾಸನ

### (ಷಾಬಾಸ್ ಗಾಡಿ)

ಅಠ ವಷ ಅಭಿಸಿತಸ ದೇವನಪ್ರಿಅಸ ಪ್ರಿದ್ರಶಿಸ ರಞೊ ಕಲಿಗ ವಿಜಿತ ದಿ
ಅಡ ಮತ್ರೆ ಪ್ರಣಶತ ಸಹಸ್ರ ಯೆ ತತೊ ಅಪವುಢೆ ಶತಸಹಸ್ರಮತ್ರೆ ತತ್ರ
ಹತೆ ಬಹುತವತಕೆ ವ ಮುಟೆ

ತತೊ ಪಚ ಅಧುನ ಲಧೇಷು ಕಲಿಗೇಷು ತಿವ್ರೆ ಧ್ರಮಶಿಲನ ಧ್ರಮಕಮತ
ಧ್ರಮನುಶಸ್ತಿ ಚ ದೇವನ ಪ್ರಿಯಸ ಸೊ ಅಸ್ತಿ ಅನುಸೋಚನ ದೇವನಪ್ರಿ
ಅಸ ವಿಜಿನಿತಿ ಕಲಿಗನಿ

ಅವಿಜಿತಂ ಹಿ ವಿಜಿನಮನೊ ಯಾ ತತ್ರ ವಧ ವ ಮರಣಂ ವ ಅಪವಹೊವ
ಜನಸತಂ ಬಢಂ ವೇದನೀಯುಮತಂ ಗುರುಮತಂ ಚ ದೇವನಂ ಪ್ರಿಯುಸ
ಇದಂ ಪಿ ಚು ತತೊ ಗುರುಮತರಂ ದೇವನಂ ಪ್ರಿಯುಸ ಯೇ ತತ್ರ
ವಸತಿ ಬ್ರಮಣವ ವ ಶ್ರಮಣವ ಅಂಞಾತೆ ವ ಪ್ರಷಂಡ ಗ್ರಹಥ ವ ಯೇಸುವಿಹಿತ
ಯೇಷ ಅಗ್ರಭುಟಿ ಸುಶ್ರುಷ ಮತಪಿತುಷು ಸುಶ್ರುಷ ಗುರುನ ಸುಶ್ರುಷ
ಮಿತ್ರ ಸಂಸ್ತು ತ ಸಹಯ
ಞತಿಕೇಷು ದಸಭಟಕನಂ ಸಮ್ಮ ಪ್ರತಿಪತಿ ದ್ರಿಡಭತಿತ ತೇಷ ತತ್ರ ಭೋತಿ
ಅಪ ಗ್ರಥೋ ವಾ ವಧೋವ ಅಭಿರತನ ವ ನಿಕ್ರಮಣಂ ಯೇಷ ವ ಪಿ
ಸಂವಿಹಿತನಂ ಸಿನೇಹೋ ಅವಿಪುಹಿನೊ ಏತೇಷ ಮಿತ್ರ ಸಂಸ್ತುತ ಸಹಯ
ಞತಿಕ ವಸನ
ಪುಪುಣತಿ ತತ್ರ ತಂ ಪಿತೇಷ ವೊ ಅಪ್ರಗಥೊ ಭೋತಿ. ಪ್ರತಿಭಗಂ ಚ
ಏತಂ ಸವ್ರ ಮನುಶ್ಯಿನಂ ಗುರುಮತು ಚ ದೇವನಂಪ್ರಿಯುಸ. [ನಾಸ್ತಿ ಚ
ಸೆ ಜನಪದೆ ಯತಾ ನಥಿ ಇಮೆ ನಿಕಾಯಾ ಆನತಾ ಯೋನೇಷು ಬಂಹನೇ
ಚ ಷಮನೇ ಚಾ ನಥಿ ಚಾ ಕುವಾಪಿ ಜನಪದ ಷಿ ಯತಾನಥಿ ಮನುಷಾನ
ಏಕತಲಷಿ ಪಿ ಪಾಷಡಷಿ ನೋ ನಾಮ ಪಷಾದೆ]
ಯಯತ್ರೊ ಜನೊ ತ ದ ಕಲಿಗೆ ಹತೊ ಚ ಮುಟೊ ಚ ಅಪವುಢ ಚ ತತೊ
ಶತಭಗೆ ವ ಸಹಸ್ರ ಭಗಂ ವ ಅಜಗುರುಮತಂವೊ ದೇವನಂಪ್ರಿಯುಸ ಯೋ
ಪಿ ಚ ಅಪಕರೇಯತಿ ಕ್ಷಮಿತವಿಯು ಮತೆ ವ ದೇವಾನಂಪ್ರಿಯುಸ ಯಂ
ಶಕೊ ಕ್ಷಮನಯೆ ಯುಪಿ ಚ ಅಟವಿ ದೇವನಂಪ್ರಿಯುಸ ವಿಜಿತೆ ಭೋತಿ
ತಪಿ ಅನುನೇತಿ ಅಪುನಿಝಪೇತಿ ಅನುತಪೇಪಿ ಚ ಪ್ರಭವೆ
ದೇವನಂ ಪ್ರಿಯುಸ ವ್ರಚತಿ ತೇಷ ಕಿತಿ ಅವತ್ರಪೇಯು ನ ಚ ಅಂಞತಿಯುಸು
ಇಛತಿ ಹಿ ದೇವನಂ ಪ್ರಿಯೊ ಸವ್ರ ಭುತನ ಅಕ್ಷತಿ ಸಂಯಮಂ ಸಮ
ಚರಿಯು ರಭಸಿಯೆ ಅಯಿ ಚ ಮುಖ ಮುತ ವಿಜಯೆ ದೇವನಂ ಪ್ರಿಯುಸ
ಯೋ ಧ್ರಮಃವಿಜಯೊ ಸೂ ಚ ಪುನ ಲಧೊ ದೇವನಂ ಪ್ರಿಯುಸ ಇಹ ಚ
ಸವೇಷು ಚ ಅಂತೇಷು
ಅಷಷು ಪಿ ಯೋಜನ ಶತೇಷು ಯತ್ರ ಅಂತಿಯೋಕೊ ನಮ ಯೋನ ರಜ
ಪರಂ ಚ ತೇನ ಅಂತಿಯೋಕೇನ ಚತುರೆ ೪ ರಜನಿ ತುರಮಯೆ ನಮ
ಅಂತಕಿನಿ ನಮ ಮಕ ನಮ ಅಲಿಕ ಸುದರೊ ನಮ ನಿಚ ಚೊಡ-ಪಂಡ
ಅವ ತಂಬಪಂಣಿಯ ಏವಮೇವ ಹಿದ ರಜವಿಷವಸ್ಪಿ ಯೋನ ಕಂಬೋ
ಯೇಷು ನಭಕ ನಾಭಪಂತಿಷು

ಭೋಜ ಪಿತಿನಿಕೇಷು ಆಂಧ್ರ ಪುಲಿದೇಷು ಸವತ್ರ ದೇವಸಂಪ್ರಿಯಸ ಧ್ರಮನು
ಶಸ್ತಿ ಅನುವಟಂತಿ ಯತ್ರಪಿ ದೇವನಂಪ್ರಿಯಸ ದುತನ ವ್ರಚಂತಿ ತೇಪಿ
ಶ್ರುತು ದೇವನಂ ಪ್ರಿಯಸ ಧ್ರಮವುಟಂ ವಿಧನಂ ಧ್ರಮನುಶಸ್ತಿ ಧ್ರಮಂ
ಅನುವಿಧಿಯಿಶಂತಿ ಚ ಯೋ ಸ ಲಧೆ ಏತಕೇನ ಭೋತಿ ಸವತ್ರ ವಿಜಯೋ
ಸವತ್ರ ಪುನ

ವಿಜಯೋ ಪ್ರಿತಿರ ಸೊ ಸೊ ಲಧ ಭೋತಿ ಪ್ರಿತಿ ಧರ್ಮವಿಜಯಸ್ಪಿ. ಲಹುಕ
ತು ಖೊ ಸ ಪ್ರಿತಿ. ಪರತ್ರಿಕಮೇವ ಮಹ ಫಲ ಯೆ ಞತಿ ದೇವನಂ
ಪ್ರಿಯೊ, ಏತ ಯೆ ಚ ಅಠಯೆ ಅಯಿ ಧ್ರಮ ದಿಪಿ ನಿಪಿಸ್ತ ಕಿತಿ ಪುತ್ರ ಪ
ಪೊತ್ರ ಮೆ ಅಸು ನವಂ ವಿಜಯಂ ಮ ವಿಜೇತ ವಿ ಅ ಯಞಿಷು ಸ್ಪಕ
ಸ್ಪಿ ಯೋ ವಿ ಜ ಯೆ ಕ್ಷಂತಿ ಚ ಲಹುದಂಡ ತ ಚ ರೋಚೇತು ತಂ
ಚಯೋ ವಿಜಯಂ ಯಞತು

ಯೋ ಧ್ರಮವಿಜ ಯೋ ಸೊ ಹಿದಲೋಕಿಕೊ ಪರಲೋಕಿಕೊ ಸವ ಚ ತಿರತಿ
ಭೋತು ಯ ಧ್ರಮರತಿ ಸಹಿ ಹಿದಲೋಕಿಕ ಪರಲೋಕಿಕ

## ಹದಿನಾಲ್ಕನೆಯ ಶಿಲಾಶಾಸನ

(ಗಿರಿನಗರ)

ಅಯಂ ಧಂಮ ಲಿಪೀ ದೇವಾನಂ ಪ್ರಿಯೇನ ಪ್ರಿಯದಸಿನಾ ರಾಞಾ
ಲೇಖಾಪಿತಾ ಅಸ್ತಿ ಏವ

ಸಂಖಿತೇನ ಅಸ್ತಿ ಮಝುಮೇನ ಅಸ್ತಿ ವಿಸ್ತತನ ನ ಚ ಸರ್ವಂ ಸರ್ವತ
ಘಟಿತಂ

ಮಹಾಲಕೆ ಹಿ ವಿಜಿತಂ ಬಹು ಚ ಲಿಖಿತಂ ಲಿಖಾಪಯಿಸಂ ಚೆ ವ ಅಸ್ತಿ ಚ
ಏತ ಕಂ

ಪುನ ಪುನ ವುತಂ ತಸತಸ ಅಥಸ ಮಾಧೂರತಾಯ ಕಿಂತಿ ಜನೊ ತಥಾ
ಪಟಿಪಜೇಥ

ತತ್ರ ಏಕದಾ ಅಸಮಾತಂ ಲಿಖಿತಂ ಅಸ ದೇಸಂವ ಸಛಾಯ ಕಾರಣಂ ವ
ಅಲೋಚೇತ್ಪಾ ಲಿಪಿಕರಾಪರಧೇನ ವ

## ಮೊದಲನೆಯ ಕಲಿಂಗ ಶಾಸನ

(ಧೌಲಿ)

ದೇವಾನಂ ಪಿಯಸ ವಚನೇನ ತೋಸಲಿಯಂ ಮಹಾಮಾತ ನಗಲವಿಯೋ
ಹಾಲಕಾ
ವತವಿಯ. ಅಂ ಕಿಛಿ ದಖಾಮಿ ಹಕಂ ತಂ ಇಛಾಮಿ ಕಿಂತಿ ಕಂಮನ
ಪಟಿಪಾದಯೇಹಂ
ದುವಾಲತೆ ಚ ಆಲಭೇಹಂ ಏಸ ಚ ಮೆ ಮೊಖ್ಯಮತ ದುವಾಲ ಏತಸಿ ಅಠಸಿ
ಅಂತುಫೇಸು
ಅನುಸಥಿ ತುಫೇ ಹಿ ಬಹುಸು ಪಾನಸಹಸೇಸು ಆಯತ ಪನಯಂ ಗಛೇಮ
ಸು ಮುನಿಸಾನಂ ಸವೆ
ಮುನಿಸೆ ಪಜಾ ಮಮಾ. ಅಥಾ ಪಜಾಯೆ ಇಛಾಮಿ ಹಕಂ ಕಿಂತಿ ಸವೇನ
ಹಿತಸುಖೇನಹಿದಲೋಕಿಕ
ಪಾಲಲೋಕಿಕೇನ ಯೂಜೇವೂ ತಿ ತಥಾ ಸವ ಮುನಿಸೇಷು ಪಿ ಇಛಾಮಿ
ಹಕಂ ನೊ ಚ ಪಾಪುನಾಥ ಆವಗ
ಮುಕೇ ಇಯಂ ಅಠೆ ಕೇಛವ ಏಕ ಪುಲಿಸೆ ಪಾಪುನಾತಿ ಏತಂ ಸೇಪಿ ದೇಸಂ
ನೊ ಸವಂ ದೇಖತ ಹಿ ತುಫೆ ಏತಂ
ಸುವಿಹಿತಾಪಿ ನಿತಿಯಂ ಏಕ ಪುಲಿಸೇಪಿ ಅಥಿ ಯೆ ಬಂಧನಂ ವಾ ಪಲಿಕಿ
ಲೇಸಂ ವಾ ಪಾಪುನಾತಿ ತತ ಹೋತಿ
ಅಕಸ್ಮಾ ತೇನ ಬಧನಂತಿಕ ಅಂನೆ ಚ ತತ ಬಹು ಜನೆ ದವಿಯೆ ದುಖೀಯತಿ
ತತ ಇಛಿತವಿಯೆ
ತುಫೇಹಿ ಕಿಂತಿ ಮಝಂ ಪಟಿಪಾದಯೇಮಾ ತಿ ಇಮೇಹಿ ಚು ಜಾತೆಹಿ
ನೊ ಸಂಪಟಿಪಜತಿ ಇಸಾಯ ಆಸುಲೊಪೇನ
ನಿಠೂಲಿಯೇನ ತೂಲನಾಯ ಅನಾವೂತಿಯ ಆಲಸಿಯೇನ ಕಿಲಮಥೇನ
ಸೆ ಇಛಿತವಿಯೆ ಕಿಂತಿಂ ಏತೆ
ಜಾತಾ ನೊ ಹುವೇವು ಮಮಾತಿ ಏತಸ ಚ ಸವಸ ಮೂಲೇ ಅನಾಸುಲೋಪೆ
ಅತೂಲನಾ ಚ ನಿತಿಯಂ ಏ ಕಿಲಂತೆ ಸಿಯಾ
ನ ತೆ ಉಗಛ ಸಂಚಲಿತವಿಯೆ ತು ವಟಿ ತವಿಯೆ ಏತವಿಯೆವಾ ಹೆವಂಮೆವ
ಎ ದಖೇಯ ತುಫಾಕತೇನ ವತವಿಯೆ
ಆನಂ ನೆ ದೇಖತ ಹೇವಂ ಚ ಹೇವಂ ಚ ದೇವಾನಂ ಪಿಯಸ ಅನುಸಥಿ ಸೆ
ಮಹಾಫಲೆ ಏತಸ ಸಂಪಟಿಪಾದ

ಮಹಾಅಪಾಯೆ ಅಸಂಪಟಿಪತಿ ವಿಪಟಿಪಾದಯಮೀನೆ ಹಿ ಏತಂ ನಥಿ
ಸ್ವಗಸ ಆಲಧಿ ನೋ ಲಾಜಾಲಧಿ
ದುಆಹಲೆ ಹಿ ಇಮಸ ಕಂಮಸ ಮ ಕುತೆ ಮನೊ ಅತಿಲೇಕೆ ಸಂಪಟಿಪಜಮೀನೆ
ಚು ಏತಂ ಸ್ವಗಂ
ಆಲಾಧಯಿಸಥ ಮಮ ಚ ಆನನಿಯಂ ಎಹಥ ಇಯಂ ಚ ಲಿಪಿ ತಿಸನಖತೇನ
ಸೋತವಿಯಾ
ಅಂತಲಾ ಪಿ ಚ ತಿಸೇನ ಖನಸಿ ಖನಸಿ ಏಕೇನ ಪಿ ಸೋತವಿಯ ಹೇವಂ ಚ
ಕಲಂತಂ ತುಘೆ
ಚಘಥ ಸಂಪಟಿಪಾದಯಿತವೆ ಏತಾಯೆ ಅಠಾಯೆ ಇಯಂ ಲಿಪಿ ಲಿಖಿತ
ಹಿದ ಏಸ
ನಗಲವಿಯೋಹಾಲಕಾ ಸಸ್ವತಂ ಸಮಯಂ ಯೂಜೆವೂ ತಿ ಏಸ ಜನಸ
ಅಕಸ್ಮಾ ಪಲಿಬೋಧೆ
ಅಕಸ್ಮಾ ಪಲಿಕಿಲೇಸೆ ವ ನೊ ಸಿಯಾ ತಿ ಏತಾಯೆ ಚ ಅಠಾಯೆ ಹಕಂ
ಮಹಾಮತೆ ಪಂಚಸು ಪಂಚಸುವಸೆ
ಸು ನಿಖಾಮಯಿಸಾಮಿ ಎ ಅಖಖಸೆ ಅಚಂಡೆ ಸಖಿನಾಲಂಭೆ ಹೋಸತಿ
ಎತಂ ಅಠಂ ಜಾನಿತು ತಂಪಿತಥಾ
ಕಲಂತಿ ಅಥ ಮಮ ಅನುಸಥೀ ತಿ ಉಜೇನಿತೆ ಪಿ ಚು ಕುಮಾಲೆ ಏತಾಯೆ
ವ ಅಠಾಯೆ ನಿಖಾಮಯೆಸತಿ-
ಹೇದಿಸ ಮೇವ ವಗಂ ನೊ ಚ ಅತಿಕಾಮಯಿಸತಿ ತಿಂನಿ ವಸಾನಿ ಹೇಮೇವ
ತಖಸಿಲಾತೆ ಪಿ
ತೆ ಮಹಾಮತಾ ನಿಖಯಿಸಂತಿ ಅನುಸಯಾನಂ ತದಾ ಅಹಾಪಯಿತು
ಅತನೆ ಕಂಮಂ ಏತಂ ಪಿ ಜಾನಿಸಂತಿ
ತಂಪಿ ತ ಥಾ ಕಲಂತಿ ಅಥ ಲಾಜನೆ ಅನುಸಥೀ ತಿ

## ಎರಡನೆಯ ಕಲಿಂಗ ಶಾಸನ

(ಜೌಗಡ)

ದೆವನಂಪಿಯೆ ಹೇವಂ ಆಹ ಸಮಾಪಾಯಂ ಮಹಾಮತಾ ಲಾಜವಚನಿಕ
ವತವಿಯಾ ಅಂ ಕಿಛಿ ದಖಾಮಿ ಹಕಂ ತಂ ಇಛಾಮಿ ಹಕಂ ಕಿಂತಿ
ಕಂಕಮನ

ಪಟಿಪಾತಯೇಹಂ ದುವಾಲತೆ ಚ ಆಲಭೇಹಂ ಏಸಚಮೆ ಮೊಖಿಯ ಮತ
ದುವಾಲ ಎತಸ ಅಥಸ ಅಂತುಫೆಸು ಅನುಸಥಿ ಸವ ಮುನಿ
ಸಾ ಮೆ ಪಜಾ ಅಥಪಜಾಯೆ ಇಛಾಮಿ ಕಿಂತಿ ಮೆ ಸವೇಣಾ ಹಿತಸುಖೇನ
ಯುಜೆಯೂ ತಿ ಹಿದಲೊಗಿಕ ಪಾಲ ಲೋಕಿಕೇಣ ಹೇವಂ ಮೇವ ಮೆ
ಇಛ ಸವಮುನಿಸೇಸು ಸಿಯಾ ಅಂತಾನಂ ಅವಿಜಿತಾ
ನಂ ಕಿಂಛಾಂದೆ ಸುಲಾಜಾ ಅಫೇಸೂ ತಿ ಏತಾಕಾ ವಾ ಮೆ ಇಛ ಅಂತೇಸು
ಪಾಪುನೇಯು ಲಾಜಾ ಹೇವಂ ಇಛತಿ ಅನುವಿಗಿನ ಹೆಯೂ
ಮಮಿಯಾಯೆ ಅಸ್ವಸೇಯು ಚಮೆ ಸುಖಂನೋವ ಚ ಲಹೇಯು ಮಮತೆ
ಮೇಖಂ ಹೇವಂ ಚ ಪಾವುನೇಯು ಖಮಿಸತಿ ನೆಲಾಜಾ
ಎ ಸಕಿಯೆ ಖಮಿತವೆ ಮಮಂ ನಿಮಿತಂ ಚ ಧಂಮಂ ಚಲೇಯೂತಿ ಹಿದಲೊಗಂ
ಚ ಪಲಲೊಗಂ ಚ ಆಲಾಧಯೇಯೂ. ಏತಾಯೆ
ಚ ಅಠಾಯೆ ಹಕಂ ತುಫೇನಿ ಅನುಸಾಸಾಮಿ ಅನನೆ ಏತಕೇನ ಹಕಂ ತುಫೇನಿ
ಅನುಸಾಸಿತು ಛಂದಂ ಚ ವೆದಿ
ತು ಆ ಮಮ ಧಿತಿ ಪಟಿಂನಾ ಚ ಅಚಲ ಸ ಹೇವಂ ಕಟೂ ಕಂಮೆ ಚಲಿತ
ವಿಮೆ ಅಸ್ವಾಸನಿಯಾ ಚತೆ ಎನ ತೆ ಪಾಪುನೆ
ಯು ಅಥಾ ಪಿತ ಹೇವಂ ನೆ ಲಾಜಾತಿ ಅಥ ಅತಾನಂ ಅನುಕಂಪತಿ ಹೇವಂ
ಅಫೇನಿ ಅನುಕಂಪತಿ ಅಥಾ ಪಜಾಹೆ
ವಂ ಮಯೆ ಲಾಜಿನೆ ತುಫೇನಿ ಹಕಂ ಅನುಸಾಸಿತ ಛಾಂದಂ ಚ ವೇದಿತ ಆ
ಮಮ ಧಿತಿ ಪಟಿಂನಾ ಚಾ ಅಚಲ ಸಕಲ
ದೇಸಾ ಆ ಯತಿಕೆ ಹೋಸಾವಿ ಏತಸಿ ಅಥಸಿ ಅಲಂ ಹಿ ತುಫೇ ಅಸ್ವಾ
ಸನಾಯೇ ಹಿತ ಸುಖಾಯೆ ಚ ತೆಸಂ ಹಿದ
ಲೊಗಿಕ ಪಾಲಲೊಕಿಕಾಯೆ ಹೇವಂನಕಲಂತಂ ಸ್ವಗಂ ಚ ಅಲಾದಯಿಸಥ
ಮಮಚ ಆನನೇಯಂ ಏಸಥ ಏ
ತಾಮೆ ಚ ಅಠಾಯೆ ಇಯಂ ಲಿಪೀ ಲಿಖಿತ ಹಿದ ಏನ ಮಹಾಮಾತಾ
ಸಾಸ್ವತಂ ಸಮಯಂ ಯುಜೇಯೂ ಅಸ್ವಾಸನಾಯೆ ಚ
ಧಂಮಚಲನಾಯೆ ಚ ಅಂತಾನಂ ಇಯಂ ಚ ಲಿಪೀ ಅನುಚಾತುಂಮಾಸಂ
ಸೋತವಿಯಾ ತಿಸೆನ ಅಂತಲಾ ಪಿ ಚ ಸೋತವಿಯಾ
ಖನೆಸಂತಂ ಏಕೆನ ಪಿ ಸೋತವಿಯಾ ಹೇವ ಚ ಕಲಂತಂ ಚಘಥ ಸಂಪಟಿ
ಪಾತಯಿತವೆ

# ಸ್ತಂಭಶಾಸನಗಳು

## ೧

(ಡಿಲ್ಲಿ ಟೊಪ್ರ)

ದೇವಾನಂಪಿಯೆ ಪಿಯದಸಿ ಲಾಜ ಹೇವಂ ಆಹಾ ಸಡುವೀಸತಿ| ವಸ ಅಭಿಸೀತೇನ ಮೆ ಇಯಂ ಧಂಮಲಿಪಿ ಲಿಖಾಪಿತಾ| ಹಿದತಪಾಲತೆ ದು ಸಂ ಪಟಿಪಾದಯೆ ಅಂನತ ಅಗಾಯಾ ಧಂಮಕಾಮತಾಯಾ| ಅಗಾಯ ಪಲೀಖಾಯಾ ಅಗಾಯ ಸುಸೂಯಾಯಾ ಅಗೇನ ಭಯೇನಾ| ಅಗೇನ ಉಸಾಹೇನಾ| ಎಸಚು ಖೊ ಮಮ ಅನುಸಥಿಯಾ| ಧಂಮಾಪೆಖಾ ಧಂಮ ಕಾಮತಾ ಚಾ ಸುವೆ ಸುವೆ ವಢಿತಾ ವಢೀಸತಿ ಚೇವಾ| ಪುಲಿಸಾ ಪಿ ಚಮೆ ಉಕಸಾ ಚಾ ಗೆವಮಾ ಚಾ ಮಝಿಮಾ ಚಾ ಅನುವಿಧೀಯಂತೀ| ಸಂಪಟಿ ಪಾದಯಂತಿ ಚಾ ಅಲಂ ಚಪಲಂ ಸಮಾದಪಯಿತವೆ ಹೇಮೇವಾ ಅಂತ| ಮಹಾ ಮಾತಾ ಪಿ ಏಸಹಿ ವಿಧಿಯಾ ಇಯಂ ಧಂಮೇನ ಪಾಲನಾ ಧಂಮೇನ ವಿಧಾನೆ| ಧಂಮೇನ ಸುಖಿಯನಾ ಧಂಮೇನ ಗೋತೀತಿ.

## ೨

ದೆವಾನಂ ಪಿಯೆ ಪಿಯದಸಿ ಲಾಜ| ಹೇವಂ ಅಹಾ ಧಂಮೆ ಸಾಧೂ ಕಿಯಂ ಚು ಧಂಮೆ ತಿ ಅಪಾಸಿನವೆ ಬಹು ಕಯಾನೆ| ದಯಾ ದಾನೆ ಸಚೆ ಸೋಚಯೆ ಚಖುದಾನೆ ಪಿ ಮೆ ಬಹು ವಿಧೆ ದಿಂನೆ ದುಪದ| ಚತುಪದೇಸು ಪಖಿ ವಾಲಿಚಲೇ ಸು ವಿವಿಧೆ ಮೆ ಅನುಗ ಹೆ ಕಟೆ ಆ ಪಾನ| ದಖಿನಾಯೆ ಅಂನಾನಿ ಪಿ ಚ ಮೆ ಬಹೂನಿ ಕಯಾನಾನಿ ಕಟಾನಿ ಏತಾಯೆ ಮೆ| ಅಠಾಯೆ ಇಮಂ ಧಂಮ ಲಿಪಿ ಲಿಖಾಪಿತಾ ಹೇವಂ ಅನುಪಟಿಪಜಂತು ಚಿಲಂ| ಥಿತಿಕಾ ಚ ಹೋತೂ ತೀತಿ ಯೆಚ ಹೆವಂ ಸಂಪಟಿಪಜೀಸತಿ ಸೆ ಸುಕಟಂ ಕಛತೀ ತಿ

## ೩

ದೇವಾನಾಂಪಿಯೆ ಪಿಯದಸಿ ಲಾಜ ಹೇವಂ ಅಹಾ ಕಯಾನಂಮೇವ ದೇಖತಿ 'ಇಯಂಮೆ ಕಯಾನೆ ಕಟೆತಿ ನೊಮಿನ ಪಾಪಂ ದೇಖತಿ ಇಯಂಮೆ ಪಾಪೆ ಕಟೆತಿ ಇಯಂವಾ ಆಸಿನವೆ| ನಾಮಾತಿ ದುಪಟಿವೆಖೆ ಚುಖೊ

ಏಸಾ ಹೇವಂ ಚು ಖೊ ಏಸದೇಖಿಯೆ ಇಮಾನಿ| ಆಸಿನವಗಾಮಿನಿ ನಾಮ ಅಥ ಚಂಡಿಯೆ ನಿಠುಲಿಯೆ ಕೋಧೆ ಮಾನೆ ಇಸ್ಯಾ—ಕಾಲನೇನ ವ ಹಕಂ ಮಾ ಪಲಿಭಸಯಿಸಂ ಏಸ ವಾಢ ದೇಖಿಯೆ ಇಯಂಮೆ| ಹಿದತಿ ಕಾಯೆ ಇಯಂಮನ ಮೆ ಪಾಲತಿಕಾಯೆ

೪

ದೇವಾನಂ ಪಿಯೆ ಪಿಯದಸಿ ಲಾಜ ಹೇವಂ ಆಹಾ ಸಡುವೀಸತಿವಸ| ಅಭಿಸಿತೇನ ಮೆ ಇಮಂ ಧಂಮಲಿಪಿ ಲಿಖಾಪಿತಾ ಲಜೂಕಾಮೆ| ಬಹುಸು ಪಾನ ಸತ ಸಹಸೇಸು ಜನಸಿ ಆಯತಾ ತೇಸಂ ಯೆ ಅಭಿಹಾಲೇವಾ| ದಂಡೆ ವಾ ಅತಪತಿಯೆ ಮೆ ಕಟೆ ಕಿಂತಿಲ ಜೂಕಾ ಅಸ್ವಥ ಅಭೀತಾ| ಕಂಮಾನಿ ಪವತಯೇವೂ ಜನಸ ಜಾನಪದಸಾ ಹಿತಸುಖಂ ಉಪದಹೇವೂ | ಅನುಗಹಿನೇವು ಚಾ ಸುಖೀಯನ ದುಖೀಯನಂ ಜಾನಿಸಂತಿ ಧಂಮ ಯುತೇನ ಚ| ವಿಯೊವ ದಿಸಂತಿ ಜನಂ ಜಾನಪದಂ ಕಿಂತಿ ಹಿದತಂಚ ಪಾಲತಂಚ| ಆಲಾಧಯೆವೂ ತಿ ಲಜೂಕಾಪಿಲಘಂತಿ ಪಟಿಚಲಿತವೆಮಂ ಪುಲಿಸಾನಿ ಪಿ ಮೆ| ಛಂದಂನಾನಿ ಪಟಿಚಲಿಸಂತಿ ತೇಪಿ ಚ ಕಾನಿ ವಿಯೆವ ದಿಸಂತಿ ಯೇನ ಮಂ ಲಜೂಕಾ ಚಘಂತಿ ಆಲಾಧಯಿತವೆ ಅಥಾ ಹಿ ಪಜಂ ವಿಯತಾಯೆ ಧಾತಿಯೆ ನಿಸಿ ಜಿತು| ಅಸ್ವಥೆ ಹೋತಿ ವಿಯತ ಧಾತಿ ಚಘತಿ ಮೆ ಪಜಂಸುಖಂ ಪಲಿಹಟವೆ| ಹೇವಂ ಮಮ ಲಜೂಕಾ ಕಟಾ ಜಾನಪದಸ ಹಿತಸುಖಾಯೆ ಯೆನ ಏತೆ ಅಭೀತಾ| ಅಸ್ವಥ ಸಂತಂ ಅವಿಮನಾ ಕಂಮಾನಿ ಪವತಯೆವೂ ತಿ ಏತೇನ ಮೆಲಜೂಕಾನಂ| ಅಭಿಹಾಲೆ ವ ದಂಡೆ ವಾ ಅತಪತಿಯೆ ಕಟೆ ಇಛಿತವಿಯೆ ಹಿ ಏಸಾ ಕಿಂತಿ| ವಿಯೊಹಾಲ ಸಮತಾ ಚ ಸಿಯ ದಂಡ ಸಮತಾ ಚಾ ಅವ ಇತೆ ಪಿ ಚ ಮೆ ಆವುತಿ| ಬಂಧನ ಬಧಾನಂ ಮುನಿಸಾನಂ ತೀಲಿತ ದಂಡಾನಂ ಪತವಧಾನಂ ತಿಂನಿ ದಿವಸಾನಿ ಮೆ| ಯೊತೆ ದಿಂನೆ ನಾತಿಕಾ ವಕಾನಿ ನಿ ಝಪಯಿಸಂತಿ ಜೀವಿತಾಯೆ ತಾನಂ| ನಾಸಂತಂ ವ ನಿಝಪಯಿತಾ ದಾನಂ ದಾಹಂತಿ ಪಾಲತಿಕಂ ಉಪವಾಸಂ ದಕಛಂತಿ| ಇಛಾ ಹಿ ಮೆ ಹೆವಂ ನಿಲುಧಸಿ ಪಿ ಕಾಲಸಿ ಪಾಲತಂ ಆಲಾಧಯೆವೂ ತಿ ಜನಸ ಚ| ವಢತಿ ವಿವಿಧೇ ಧಂಮ ಚಲನೆ ಸಂಯಮೆ ದಾನ ಸವಿಭಾಗೆ ತಿ

೫

(ರಾಮಪೂರ್ವಾ)

ದೇವಾನಾಂಪಿಯೆ ಪಿಯದಸಿ ಲಾಜ ಹೇವಂ ಆಹ ಸಡುವೀಸತಿ ವಸಾಭಿ ಸಿತೇನ ಮೆ ಇಮಾನಿ ಪಿ ಜಾತಾನಿ ಅವಧ್ಯಾ ನಿಕಟಾನಿ ಸೆಯಥ| ಸುಕೆ ಸಾಲಿಕ ಅಲುನೆ ಚಕವಾಕೆ ಹಂಸೆ ನಂದೀಮುಖೆ ಗೆಲಾಟೆ ಜತೂಕ ಅಂಬಾಪಿಪಿಲಿಕ ದುಳಿ ಅನಠಿಕ ಮಛೆ ವೆದವೆಯಕೆ| ಗಂಗಾ ಪುಪುಟಕೆ ಸಂಕುಜಮಛೆ ಕಫಟ ಸೆಯಕೆ ಪಂನಸಸೆ ಸಿಮಲೆ ಸಂಡಕೆ ಒಕಪಿಂಡೆ ಪಲಸತೆ ಸೆತಕಪೋತೆ ಗಾಮಕಪೋತೆ ಸವೆ ಚತುಪದೆ ಯೆ ಪಟಿಭೋಗಂ ನೊ ಎತಿನಚ ಖಾದಿಯತಿ ಅಜಕಾ ನಾನಿ ಎಳಕಾ ಚ ಸೂಕಲೀ ಚ ಗಭಿನೀವ| ಪಾಯಮೀನಾ ವ ಅವಧ್ಯ ಪೋತಕೆ ಚಕಾನಿ ಆಸಂಮಾಸಿಕೆ ವಧಿ ಕುಕುಟೆಸೊ ಕಟವಿಯೆ ತುಸೆ ಸಜೀವೆ ನೂ ಝಾ ಪಯಿತವಿಯೆ| ದಾವೆ ಅನಠಾಯೆ ವ ವಿಹಿಸಾಯೆ ವನೊ ಝಾಪಯಿತ ವಿಯೆ ಜೀವೇನ ಜೀವೇ ನೊ ಪುಸಿತವಿಯೆ ತೀಸು ಚಾತುಂಮಾಸೀಸು ತಿಸ್ಯಂ ಪುಂಸಮಾಸಿಯಂ| ತಿಂನಿ ದಿವಸಾನಿ ಚಾವುದಸಂ ಪಂನಡಸಂ ಪಟ ಪದಂ ಧುವಾಯೆ ಚ ಅನುಪೊಸಥಂ ಮಛೆ ಅವಧ್ಯೆ ನೊ ಪಿ ವಿಕೇತವಿಯೆ ಏತಾನಿ ಏವ ದಿವಸಾನಿ ನಾಗವನಸಿ ಕೇವಟ ಭೋಗಸಿ ಯಾನಿ ಅಂನಾನಿಪಿ ಜೀವ ನಿಕಾಯಾನಿ ಹಂತವಿಯಾನಿ ಅಠಮಿಪಖಾಯೆ ಚಾವುದಸಾಯೆ| ಪಂನಡ ಸಾಯೆ ತಿಸಾಯೆ ಪುನಾವಸುನೆ ತೀಸು ಚಾತುಂಮಾಸೀಸು ಸುದಿವಸಾಯೆ ಗೊನೆ ನೊ ನಿಲಖಿತ ವಿಯೆ ಅಜಕೆ ಎಳಕೆ ಸೂಕಲೆ, ಎವಾಪಿ ಅಂನೆ ನೊಲಖಿಯತಿ ನೊ ನೊಲಖಿತವಿಯೆ ತಿಸಾಯೆ ಪುನಾವಸುನೆ ಚಾತುಂಮಾಸಿಯೆ ಚಾತುಂ ಮಾಸಿಪ ಖಾಯೆ ಅಸ್ವಸ ಗೊನಸ| ಲಖನೆ ನೊ ಕಟವಿಯೆ ಯಾವ ಸಡುವೀಸತಿ ವಸಾಭಿಸಿತೇನ ಮೆ ಏತಾಯೆ ಅಂತಲಿಕಾಯೆ ಪಂನವೀಸತಿ ಬಂಧನ ಮೋಖಾನಿ ಕಟಾನಿ.

೬

(ರಾಮಪೂರ್ವ)

ದೇವಾನಂಪಿಯೆ ಪಿಯದಸಿ ಲಾಜ ಹೇವಂ ಆಹ, ದುವಾಡಸ ವಸಾಭಿ ಸಿತೇನ ಮೆ ಧಂಮಲಿಪಿ ಲಿಖಾಪಿತ ಲೋಕಸ ಹಿತಸುಖಾಯೆ ಸೆತಂ ಅಪಹಟ| ತಂತಂ ಧಂಮವಧಿ ಪಾಪೊವ ಹೇವಂ ಲೋಕಸ ಹಿತಸುಖೇತಿ ಪಟಿವೆಖಾಮಿ ಅಥ ಇಯಂ ನಾತಿಸು ಹೇವಂ ಪತ್ಯಾಸಂನೇಸು ಹೆವಂ ಅಪಕಠೇಸು

ಕಿಂಪಮಂ ಕಾನಿ | ಸುಖಂ ಆವಹಾಮಿ ತಿ ತಥಾ ಚ ವಿದಹಾಮಿ. ಹೇಮೇವ ಸವನಿಕಾಯೇಸು ಪಟಿವೆಖಾಮಿ ಸವಪಾಸಂಡಾಪಿ ಮೆ ಪೂಜಿತ ವಿವಿಧಾಯ ಪೂಜಾಯ ಏ ಚು ಇಯಂ | ಅತನ ಪಚೂಪಗಮನೆ ಸೆ ಮೆ ಮೊಖ್ಯಮುತೆ. ಸಡುವೀಸತಿ ವಸಾಭಿಸಿತೇನ ಮೆ ಇಯಂ ಧಂಮಲಿಪಿ ಲಿಖಾಪಿತ.

೭

(ಡಿಲ್ಲಿಟೊಪ್ರ)

ದೆವಾನಂಪಿಯೆ ಪಿಯದಸಿ ಲಾಜಾ ಹೇವಂ ಆಹಾ. ಯೆ ಅತಿಕಂತಂ | ಅಂತಲಂ ಲಾಜಾನೆ ಹುಸು ಹೇವಂ ಇಛಿಸು ಕಥಂ ಜನೆ | ಧಂಮವಢಿಯಾ ವಢೇಯಾ ನೊ ಚು ಜನೆ ಅನುಲುಪಾಯ ಧಂಮವಢಿಯಾ | ವಢಿಯಾ ಏತಂ ದೆವಾನಂಪಿಯೆ ಪಿಯದಸಿಲಾಜೆ ಹೇವಂ ಆಹಾ ಏಸ ಮೆ | ಹುಥಾ ಅತಿಕಂತಂ ಚ ಅಂತಲಂ ಹೇವಂ ಇಛಿಸು ಲಾಜಾನೆ ಕಥಂ ಜನೆ | ಅನುಲುಪಾಯಾ ಧಂಮವಢಿಯಾ ವಢೇಯಾ ತಿ ನೊ ಚ ಜನೆ ಅನುಲುಪಾಯಾ | ಧಂಮ ವಢಿಯಾ ವಢಿಯಾ ಸೆ ಕಿನಸು ಜನೆ ಅನುಪಟಿಪಜೆಯಾ | ಕಿನಸು ಜನೆ ಅನುಲುಪಾಯಾ ಧಂಮವಢಿಯಾ ವಢೇಯಾ ತಿ ಕಿನಸು ಕಾನಿ | ಅಭ್ಯುಂನಾ ಮಯೇಹಂ ಧಂಮವಢಿಯಾ ತಿ ಏತಂ ದೇವಾನಂಪಿಯೆ ಪಿಯದಸಿ ಲಾಜಾ ಹೇವಂ | ಆಹಾ ಏಸ ಮೆ ಹುಥಾ ಧಂಮಸಾವನಾನಿ ಸಾವಾಪಯಾಮಿ ಧಂಮಾನುಸಥಿನಿ ಅನುಸಾಸಾಮಿ ಏತಂ ಜನೇಸುತು ಅನುಪಟೀಪಜೇಸತಿ ಅಭ್ಯುಂನಮಿಸತಿ | ಧಂಮವಢಿಯಾ ಚ ಬಾಢಂ ವಢಿಸತಿ ಏತಾಯೆಮೆ ಅಠಾಯೆ ಧಂಮಸಾವನಾನಿ ಸಾವಾಪಿತಾನಿ ಧಂಮಾನುಸಥಿನಿ ವಿವಿಧಾನಿ ಆನಪಿತಾನಿ ಮಯಾ ಪುಲಿಸಾಪಿ ಬಹುನಿ ಜನಸಿ ಆಯತಾ ಏತೆ ಪಲಿಯೋವದಿ ಸಂತಿಪಿಪವಿಥಲಿಸಂತಿ ಪಿ ಲಜೂಕಾ ಪಿ ಬಹುಕೇಸು ಪಾನಸತಸಹಸೇಸು ಆಯತಾ ತೇಪಿ ಆನಪಿತಾ ಹೇವಂ ಚ ಹೇವಂ ಚ ಪಲಿಯೊವದಾಥ | ಜನಂ ಧಂಮಯುತಂ ದೇವಾನಂಪಿಯೆ ಪಿಯದಸಿ ಹೇವಂ ಆಹಾ ಏತಮೆವ ಮೆ ಅನುವೆಖಮಾನೆ ಧಂಮ ಥಂಭಾನಿ ಕಟಾನಿ ಧಂಮ ಮಹಾಮಾತಾ ಕಟಾ ಧಂಮಸಾವನೆ ಕಟೆ ದೇವಾನಾಂಪಿಯೆ ಪಿಯದಸಿ ಲಾಜಾ ಹೆವಂ ಆಹಾ ಮಗೆಸುಪಿ ಮೆ ನಿಗೊಹಾನಿ ಲೊಪಾಪಿತಾನಿ ಛಾಯೋಪಗಾನಿ ಹೋಸಂತಿ ಪಸು ಮುನಿಸಾನಂ ಅಂಬಾವಡಿಕ್ಯಾ ಲೊಪಾಪಿತಾ ಅಢ ಕೊಸಿಕ್ಯಾನಿ ಪಿಯೆ ಉದುಪಾನಾನಿ | ಖಾನಾಪಾಪಿತಾನಿ ನಿಂಸಿಡಯಾ ಚ ಕಾಲಾಪಿತಾ ಆ ಪಾನಾನಿ ಮೆ ಬಹುಕಾನಿ ತತ ತತ ಕಾಲಾಪಿತಾನಿ ಪಟಿ ಭೋಗಾಯೆ ಪಸು

ಮುನಿಸಾನಂ ಲಹುಕೆ ಚ ಏಸ ಪಟಿಭೊಗೆ ನಾಮ ವಿವಿಧಾಯಾ ಹಿ ಸು
ಖಾಯನಾಯಾ ಪುಲಿಮೆಹಿ ಪಿಲಾಜೇಹಿ ಮಮಯಾ ಚ ಸುಖಯಿತೆ ಲೋಕೆ
ಇಮಂಚು ಧಂಮಾನುಪಟಿಪತೀ ಅನುಪಟೀಪಜಂತು ತಿ ಏತದಥಾಮೆ|
ಏಸಕಟೆ ದೇವಾನಂಪಿಯೆ ಪಿಯದಸಿ ಹೇವಂ ಆಹಾ ಧಂಮ ಮಹಾ
ಮಾತಾಪಿ ಮೀತತೆ ಬಹು ವಿಧೇಸು ಅಠೇಸು ಆನುಗಹಿಕೇಸು ವಿಯಾಪಟಾಸೆ
ಪವಜೀತಾನಾಂ ಚೆವ ಗಿಹಿಥಾಸಂ ಚ ಸವಪಾಸಂಡೇಸು ಪಿ ಚ ವಿಯಾ
ಪಟಾಸೆ ಸಂಘಠಸಿ ಪಿಮೆ ಕಟೆ ಇವೆ ವಿಯಾಪಟಾ ಹೋಹಂತಿ ತಿ
ಹೇಮೆವ ಭಾಭನೇಸು ಅಜೀವಿಕೇಸು ಪಿ ಮೆ ಕಟೆ ಇವೆ ವಿಯಾಪಟಾ
ಹೋಹಂತಿ ತಿ ಹೇಮೆವ ಬಾಭನೆಷು ಆಜೀವಿಕೇಷು ಪಿಮಿಕಟೆ ಇವೆ
ಹೊಹಂತಿ ತಿ ನಿಗಂಠೆಸು ಪಿ ಮೆ ಕಟೆ ಇವೆ ವಿಯಾ ಪಟಾ ಹೋ ಹಂತಿ
ನಾನಾ ಪಾಸಂಡೆಸು ಪಿ ಮೆ ಕಟೆ ಇವೆ ವಿಯಾಪಟಾ ಹಂತಿ ಪಟಿವಿಟಿಸಿಠಂ
ಠೇಸು ಠೇಸು ತೇ ಮಹಾಮಾತಾ ಧಂಮ ಮಹಾ ಮಾತಾ ಚು ಮೆ ಏತೇಸು
ಚೆ ವಿಯಾಪಟಾ ಸವೇಸು ಚ ಅಂನೇಸು ಪಾಸಂಡೇಸು ದೇವಾನಾಂಪಿಯೆ
ಪಿಯದಸಿ ಲಾಜಾ ಹೇವಂ ಆಹಾ| ಏತೆ ಚ ಅಂನೇಚ ಬಹುಕಾ ಮುಖಾ
ದಾನವಿಸಗಸಿ ವಿಯಾಪಟಾಸೆ ಮಮ ಚೆವ ದೇವಿನಂ ಚ ಸವಸಿ ಚಮೆ
ಓಲೋಧನಸಿತೆ ಬಹು ವಿಧೇನ ಆಕಾಲೇನ ತಾನಿತಾನಿ ತುಠಾಯತನಾಗಿ
ಪಟೀ. . . . ಹಿದ ಚೇವ ದಿಸಾಸು ಚ ದಾಲಕಾನಂ ಪಿ ಚ ಮೆ ಕಟೆ
ಅಂನಾನಂ ಚ ಮೆ ಕಟೆ ದೇವಿ ಕುಮಾಲಾನಂ ಇವೆ ದಾನವಿಸಗೇಸು ವಿ
ಯಾಪಟಾ ಹೋಹಂತಿ ತಿ ಧಂಮಾಪದಾನಠಾಯೆ ಧಂಮಾನುಪಟಿಪತಿಯೆ
ಏಸ ಹಿ ಧಂಮಾಪದಾನೆ ಧಂಮಪಟಿಪತಿ ಚ ಯಾ ಇಮಂ ದಯಾ ದಾನೆ
ಸಚೆ ಸೋಚವೆ ಮದವೆ ಸಾಧವೆ ಚ ಲೋಕಸ ಹೇವಂ ವಢಿಸತಿ ತಿ ದೇವಾ
ನಂಪಿಯೆ ಪಿಯದಸಿ ಲಾಜಾ ಹೇವಂ ಆಹಾ ಯಾನಿ ಹಿ ಕಾನಿಚಿ ಮಮಿ
ಯಾ ಸಾಧವಾನಿ ಕಟಾನಿ ತಂಲೋಕೆ ಅನೂಪಟಿಪಂನೆ ತಂ ಚ ಅನುವಿಧಿ
ಯಂತಿ ತೆನ ವಢಿತಾ ಚ ವಢಿಸಂತಿ ಚ ಮಾತಾಪಿತಿಸು ಸುಸುಸಾಯಾ
ಗ.ಲುಸು ಸುಸುಸಾಯಾ ವಯೋ ಮಹಾಲಕಾನಂ ಅನುಪಟಿಪತಿಯಾ
ಬಾಭನ ಸಮನೇಸು ಕಪನವಲಾಕೇಸು ಆವ ದಾಸಭಟಕೆಸು ಸಂಪಟಿ
ಪತಿಯಾ ದೇವಾನಂಪಿಯೆ ಪಿಯದಸಿ ಲಾಜಾ ಹೇವಂ ಆಹಾ ಮುನಿಸಾನಂ
ಚು ಯಾ ಇಯಂ ಧಂಮವಢಿ ವಢಿತಾ ದುವೇಹಿ ಏವ ಆಕಾಲೇಹಿ ಧಂಮ
ನಿಯಮೇನ ಚ ನಿಝತಿಯಾ ಚ| ತತ ಚು ಲಹು ಸೆ ಧಂಮನಿಯಮೆ
ನಿಝತಿಯಾ ವ ಭುಯೆ ಧಂಮನಿಯಮೆ ಚು ಖೊ ಏಸ ಯೆ ಮೆ ಇಯಂ

ಕಟೆ ಇಮಾನಿ ಚ ಇಮಾನಿ ಜಾತಾನಿ ಅವಧಿಮಾನಿ ಅಂನಾನಿ ಪಿ ಚು ಬಹುಕಾನಿ ಧಂಮ ನಿಮಮಾನಿ ಯಾನಿ ಮೆಕಟಾನಿ ನಿಝತಿಯಾ ವ ಚು ಭುಯೆ ಮುನಿಸಾನಂ ಧಂಮವಡಿ ವಢಿತಾ ಅವಿಹಿಂಸಾಯೆ ಭೂತಾನಂ ಅನಾಲಂ ಭಾಯೆ ಪಾಲಾನಂ ಸೆ ಏತಾಯೆ ಅಥಾಯೆ ಇಯಂಕಟೆ ಪುತಾಪಪೊತಿಕೆ ಚಂದ ಮಸುಲಿಯಿಕೆ ಹೋತು ತಿ ತಥಾ ಚ ಅನುಪಟೀಪಜಂತು ತಿ ಹೆವಂ ಹಿ ಅನುಪಟೀಪಜಂತಂ ಹಿದತಪಾಲತೆ ಆಲಧೆ ಹೊತಿ ಸತವಿಸತಿವಸಾಭಿಸಿತೇಸ ಮೆ ಇಯಂ ಧಂಮಲಿತಂ ಲಿಖಾಪಾಪಿತಾ ಎಬಿ ದೇವಾನಪಿಯೆ ಆಹಾ ಇಯಂ | ಧಂಮಲಿತ ಅಬಿ ಅಥಿ ಸಿಲಾಥಂಬಾನಿ ವಾ ಸಿಲಾ ಫಲಕಾನಿ ವಾ ತತ ಕಟವಿಯಾ ಏನ ಏಸ ಚಿಲಠಿತಿಕೆ ಸಿಯಾ

## ಬಿಡಿಶಾಸನಗಳು

### ೧

### (ರೂಪನಾಥ)

ದೇವಾನಾಂಪಿಯೆ ಹೇವಂ ಆಹಾ. ಸಾತಿರಕೇಕಾನಿ ಅಢತಿಯಾನಿ ವಸಾನಿ ಯಸುಮಿಪ್ರಕಾಸ ಸಕೆ ನೊ ಚು ಬಾಢಿ ಪಕತೆ ಸಾತಿಲೇಕೆ ಚು ಛವಛರೆ ಯಸುಮಿ ಹಕಂ ಸಘ ಉಪೇತೆ

ಬಾಢಿ ಚ ಪಕತೆ ಯಾ ಇಮಾಯ ಕಾಲಾಯ ಜಂಬುದಿಪಸಿ ಅಮಿಸಾದೇವಾ ಹುಸುತೆ ದಾನಿ ಮಿಸಾ ಕಟಾ ಪಕಮಸಿ ಹಿ ಏಸಫಲೆ ನೋ ಚ ಏಸಾ ಮಹತತಾ ಪಾಪೊತವೆ ಖುದಕೇನ

ಪಿ ಪಕಮಮಿನೇನಾ ಸಕಿಯೆ ಪಿಪುಲೆ ಪಾ ಸ್ವಗೆ ಆರೋಧೇವೆ ಏತಿಯ ಅಠಾಯ ಚ ಸಾವನೆ ಕಟೆ ಖುದಕಾ ಚ ಉಡಾಲಾ ಚ ಪಕಮತು ತಿ ಅತಾ ಐ ಚ ಜಾನಂತು ಇಯ ಪಕರಾ ವ

ಕಿತಿ ಚಿರಠಿತಿಕೆ ಸಿಯಾ ಇಯ ಹಿ ಅಠೆ ವಢಿ ವಡಿಸಿತಿ ವಿಪುಲ ಚ ವಢಿಸಿತಿ ಅಪಲಧಿಯೇನಾ ದಿಯಢಿಯ ವಢಿಸತ ಇಯ ಚ ಅಠೆ ಪವತಿಸು ಲೇಖಾಪೇತ ವಾಲತ ಹಧ ಚ ಅಥಿ

ಸಿಲಾಠಭೆ ಸಿಲಾಠಂಭಸಿ ಲಿಖಾಪೇತವಯ ತ ಏತಿನಾ ಚ ವಯಜನೇನಾ ಯಾವತಕ ತುಫಕಂ ಅಹಾಲೆ ಸವತ ವಿವಸೆತವಾಯೆ ತಿ ವ್ಯಠೇನಾ ಸಾವನೆ ಕಟೆ ೨೦೦ ೫೦ ೬ ಸತ ವಿವಾಸಾ ತ

### ದೇವಿಯ ಶಾಸನ

ದೇವಾನಂಪಿಯಸಾ ವಚನೇನಾ ಸವತ ಮಹಾಮತಾ
ವತವಿಯಾ ಎ ಹೇತಾ ದುತಿಯಾಯೆ ದೇವಿಯೆ ದಾನೆ
ಅಂಬಾವಡಿಕಾವಾ ಆಲಭೆ ವ ದಾನಗಹೆ ವ ಏ ವಾ ಪಿ ಅಂನೆ
ಕೀಛಿ ಗನೀಯತಿ ತಾಯೆ ದೇವಿಯೆಷೆ ನಾನಿ ಹೆವಂ ಗನತವಿಯೆ
ದುತಿಯಾಯೆ ದೇವಿಯೆ ತಿ ತೀವಲಮಾತು ಕಾಲುವಾಕಿಯೆ

## ಸಾರನಾಥ ಶಾಸನ

ದೇವಾನಂ ಪಿಯೆ . . . ಎಲ . . . ಪಾಟ . . . ನಸಕಿಯೆ ಕೆನ ಪಿ ಸಂಘೆ ಭೇತವೆ ಏ ಚುಂ ಖೊ ಭಿಖೂವಾಭಿಖುನಿವಾಸಂಘಂ ಭಾಖತಿ ಸೆ ಓದಾತಾನಿ ದುಸಾನಿ ಸಂನಂಧಾಪಯಿಯಾ ಆನಾವಾಸಸಿ ಆವಾಸಯಿಯೆ, ಹೇವಂ ಇಯಂ ಸಾಸನೆ ಭಿಖುಸಂಘಸಿ ಚ ಭಿಖುನಿಸಂಘಸಿ ಚ ವಿಂನಪಯಿತವಿಯೆ ಹೇವಂ ದೆವಾನಂಪಿಯೆ ಆಹಾ. ಹೇದಿಸಾ ಚ ಇಕಾಲಿಪೀ ತುಫಾಕಂತಿಕಂ ಹುವಾತಿ ಸಂಸಲನಸಿ ನಿಖಿತಾ ಇಕಂ ಚ ಲಿಪಿಂ ಹೆದಿಸಮೆವ ಉಪಾಸಕಾನಂತಿಕಂ ನಿಖಿಪಾಯ ತೇಪಿ ಚ ಉಪಾಸಕಾ ಅನುಪೋಸಥಂ ಯಾವು ಏತಮೇವ ಸಾಸನಂ ವಿಸ್ವಂಸಯಿತವೆ ಅನುಪೋಸಥಂ ಚ ಧುವಾಯೆ ಇಕಿಕೆ ಮಹಾ ಮಾತೆ ಪೋಸಥಾಯೆ ಯಾತಿ ಏತಮೇವ ಸಾಸನಂ ವಿಸ್ವಂಸಯಿತವೆ ಆಜಾ ನಿತವೆ ಚ ಆವತೆಚ ತುಫಾಕಂ ಆಹಾಲೆ ಸವತ ವಿವಾಸಯಾಥ ತುಫೆ ಏತೇನ ವಿಯಂಜನೇನ ಹೆಮೆವ ಸವೇಸು ಕೋಟವಿಷವೇಸು ಏತೇನ ವಿಯಂಜನೇನ ವಿವಾಸಯಾಪಾಯಾಥಾ

## ಲುಂಬಿನೀ ಸ್ತಂಭಶಾಸನ

ದೇವಾಸಪಿಯೆನ ಪಿಯದಸಿನ ಲಾಜಿನ ವೀಸತಿವಸಾಭಿಸಿತೇನ ಅತನ ಆಗಾಚ ಮಹೀಯಿತೆ ಹಿದ ಬುಧೆ ಜಾತೆ ಸಕ್ಯಮುನೀತಿ ಸಿಲಾವಿಗಡಭೀಚಾ ಕಾಲಾಪಿತ ಸಿಲಾಥಭೆ ಚ ಉಸಪಾಪಿತೆ ಹಿದ ಭಗವಂ ಜಾತೆ ತಿ ಲುಂಮಿನಿ ಗಾಮೆ ಉಬಲಿಕೆ ಕಟೆ ಅಠಭಾಗಿಯೆ ಚ.

## ನಿಗಲಿಸಾಗರ ಸ್ತಂಭಶಾಸನ

ದೆವಾನಂ ಪಿಯೆನ ಪಿಯದಸಿನ ಲಾಜಿನ ಚೊದಸವಸಾಭಿಸಿತೇನ ಬುಧಸ ಕೊನಾಕಮನಸ ಥುಬೆ ದುತಿಯಂ ವಢಿತೆ ವೀಸತಿವಸಾಭಿಸಿತೇನ ಚ ಅತನ ಆಗಾಚ ಮಹೀಯಿತೆ ಸಿಲಾಥಭ ಚ ಉಸಪಾಪಿತೆ

## ಸಾಂಚಿ ಸ್ತಂಭಶಾಸನ

. . . ಯಾ ಭೇತ. . . . ಸಂಘೆ ಸಮಾಗೆ ಕಟೆ, ಭಿಖೂನಂ ಚ ಭಿ ಖೂನಿನಂ ಚಾ ತಿ ಪುತ ಪಪೊತಿಕೆ ಚಂದಮುಸೂರಿಯಿಕೆ ಯೆಸಂಘಂ ಭಾಖತಿ ಭಿಖುವಾಭಿಖುನಿವಾ ಓದಾತಾನಿ ದುಸಾನಿ ಸನಂಧಾಪಯಿತು ಅನಾವಾಸಸಿ ವಾಸಾಪೇತವಿಯೆ ಇಛಾ ಹಿ ಮೆ ಕಿಂತಿ ಸಂಘೆ ಸಮಗೆ ಚಿಲಥಿತಿಕೆ ಸಿಯಾತಿ

## ಬ್ರಹ್ಮಗಿರಿ ಶಾಸನ

(ಅನುಬಂಧ)

ದೇವಾನಂಪಿಯೆ ಆಹ ಮತಾಪಿತಿಸು ಸುಸೂಸಿತವಿಯೆ ಹೇಮೇವ ಗರುಸು ಪ್ರಾಣೇಸು ದ್ರಹ್ಯಿತವ್ಯಂ ಸಚಂ ವತವಿಯಂ ಸೆ ಇಮೆ ಧಂಮಗುಣಾ ಪವತಿತವಿಯಾ ಹೇಮೇವ ಅಂತೆವಾಸಿನಾ ಆಚರಿಯೆ ಅಪಚಾಯಿತವಿಯೆ ಞಾತಿಕೇಸು ಚ ಕಂ . . . . ಪವತಿತವಿಯೆ. ಏಸಾ ಪೊರಾಣಾ ಪಕಿತೀ ದೀಘವುಸೆ ಸಏಸ ಹೇವಂ ಏಸ ಕಟವಿಯಯೆ ಚಪಡೇನ ಲಿಖಿತೆ ಲಿಪಿಕರೇಣ

## ಬಾಬ್ರುಶಾಸನ

ಪ್ರಿಯದಸಿ ಲಾಜಾ ಮಾಗಧೆ ಸಂಘಂ ಅಭಿವಾದೆತೂನಂ ಆಹಾ ಅಪಾ ಬಾಧತಂ ಚ ಪಾಸುವಿಹಾಲತಂ ಚಾ

ವಿದಿತೆ ವೆ ಭಂತೆ ಆವತಕೆ ಹಮಾ ಬುಧಸಿ ಧಂಮಸಿ ಸಂಘಸಿ ತಿ ಗಾಲವೆ ಚಂ ಪ್ರಸಾದೆ ಚಏಕೇಚಿ ಭಂತೆ

ಭಗವತಾ ಬುಧೇನ ಭಾಸಿತೆ ಸರ್ವೆ ಸುಭಾಸಿತೆ ವಾ ಏಚುಖೊ ಭಂತೆ ಹಮಿ ಯಾಯೆ ದಿಸೇಯಾ ಹೇವಂ ಸಧಂಮೆ

ಚಿಲಠಿತೀಕೆ ಹೊಸತೀ ತಿ ಅಲಹಾಮಿ ಹಕಂ ತಂ ವಾತವೆ ಇಮಾನಿಭಂತೆ ಧಂಮ ಪಲಿಯಾಯಾನಿ ವಿನಯುಸಮುಕಸೆ

ಅಲಿಯವಸಾಣಿ ಅನಾಗತಭಯಾನಿ ಮುನಿಗಾಥಾ ಮೊನೆಯಸೂತೆ ಉಪತಿ ಸಪಸಿನೆ ಏ ಚಾ ಲಾಘುಲೊ

ವಾದೆ ಮುಸಾವಾದಂ ಅಧಿಗಿಚ್ಯ ಭಗವತಾಬುಧೇನ ಭಾಸಿತೆ ಏತಾನಿ ಭಂತೆ ಧಂಮಪಲಿಯಾಯಿನಿ ಇಛಾಮಿ

ಕಿಂತಿ ಬಹುಕೆ ಭಿಖುಪಾಯೆ ಚಾ ಭಿಖುನಿಯೆ ಚಾ ಅಭಿಖಿನಂ ಸುನೆಯೂ ಚಾ ಉಪಧಾಲಯೇಯೂ ಚಾ

ಹೇವಂ ಮೇವಾ ಉಪಾಸಕಾ ಚಾ ಉಪಾಸಿಕಾ ಚ ಏತೆನಿ ಭಂತೆ ಇಮಂ ಲಿಖಾಪಯಾಮಿ ಅಭಿಪ್ರೇತಂ ಮೆ ಜಾನಂತೂ ತಿ

## ಗುಹಾಶಾಸನಗಳು

(೧) ಲಾಜಿನಾ ಪಿಯದಸಿನಾ ದುವಾಡಸವಸಾಭಿಸಿತೇನಾ ಇಯಂನಿಗೋಹಕುಭಾ ದಿನಾ ಆಜೀವಿಕೇಹಿ

(೨) ಲಾಜಿನಾ ಪಿಯದಸಿನಾ ದುವಾಡಸವಸಾಭಿಸಿತೇನಾ ಇಯಂ ಕುಭಾ ಖಲತಿಕಪವತಸಿ ದಿನಾ ಆಜೀವಿಕೇಹಿ

(೩) ಲಾಜಾಪಿಯದಸೀ ಎಕೂನವೀಸತಿ ವಸಾಭಿಸಿತೆ ಜಲಘೋಸಾಗಮುಥಾ ತಮೆ ಇಯಂ ಕುಭಾ ಸುಪಿಯೆ ಖಲತಿಕ ಪವತಸಿ ದಿನಾ

---

ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು.

